# ಇರಾನಿನ ವೀರರು

'ಇರಾನಿನ ವೀರರು' ಎಂಬ ಈ ಪುಸ್ತಕ ಮಹಾಕವಿ ಫಿರ್ದೂಸಿಯ 'ಷಹ-ನಾಮ' ಎಂಬ ಪರ್ಶಿಯನ್ ಕಾವ್ಯದ ಒಂದು ಭಾಗದ ಕನ್ನಡ ಸಂಗ್ರಹಾನುವಾದವಾಗಿದೆ. ಇದನ್ನು ಮಿತ್ರರಾದ ಭಾರತೀಸುತರು ವೇಲಿನ್‌ಗೆಂಡಿ ಎಂಬವರ ಒಂದು ಇಂಗ್ಲಿಷ್ ಗ್ರಂಥದ ಆಧಾರದಿಂದ ಬರೆದಿದ್ದಾರೆ.

ಪುಸ್ತಕದ ರಕ್ಷಾಕವಚದಲ್ಲಿ ಮೇಲುಭಾಗದಲ್ಲಿ ಬಲಗಡೆ ಕವಿ ಫಿರ್ದೂಸಿಯ ಚಿತ್ರವಿದೆ. ಕೆಳಗಡೆ ಸೊಹ್ರಾಬ್ ಮತ್ತು ರುಸ್ತುಂ ಯುದ್ಧದಲ್ಲಿ ನಿರತರಾಗಿರುವುದನ್ನು ತೋರಿಸಲಾಗಿದೆ. ರಕ್ಷಾಪತ್ರದ ಈ ಚಿತ್ರವನ್ನು ಗೆಳೆಯ ಮುರಲೀಧರರು ಬರೆದುಕೊಟ್ಟು ಪುಸ್ತಕದ ನೊಗಸನ್ನು ಹೆಚ್ಚಿಸಿದ್ದಾರೆ. ಕೆನರಾ ಪ್ರಿಂಟಿಂಗ್ ವರ್ಕ್ಸ್‌ನ ಮ್ಯಾನೇಜರ್ ಶ್ರೀ। ಜಯಂತ ಶೆಟ್ಟರು ಅಂದವಾಗಿ ಮುದ್ರಿಸಿದ್ದಾರೆ. ಇವರಿಗೆಲ್ಲ ನಮ್ಮ ಕೃತಜ್ಞತೆಗಳು.

— ಪ್ರಕಾಶಕರು.

# ಮಹಾಕವಿ ಫಿರ್ದೂಸಿ

---

ಸಂಸ್ಕೃತದಲ್ಲಿ ರಾಮಾಯಣ ಮಹಾಭಾರತಗಳಿರುವಂತೆ, ಕನ್ನಡದಲ್ಲಿ ಕುಮಾರ ವ್ಯಾಸ ಭಾರತವಿರುವಂತೆ, ಇರಾನೀ ಭಾಷೆಯಲ್ಲಿ 'ಷಹ-ನಾಮ' ಕಾವ್ಯ ಬಹು ಜನಪ್ರಿಯವಾದ ಪುರಾಣ ಕಾವ್ಯವಾಗಿದೆ. ಕುಮಾರವ್ಯಾಸ ಕನ್ನಡಿಗರ ಆರಾಧನೆಗೆ ಪಾತ್ರನಾದಂತೆ ಷಹ-ನಾಮದ ಕರ್ತೃ ಫಿರ್ದೂಸಿ ಮಹಾಕವಿ ಇರಾನಿಯರೆಲ್ಲರ ಗೌರವ ಮನ್ನಣೆಗಳಿಗೆ ಪಾತ್ರನಾದ ಕವಿಯಾಗಿದ್ದಾನೆ ಜನಪ್ರಿಯವಾದ ಸೊಹ್ರಾಬ-ರುಸ್ತುಮರ ಕತೆ ಆ ಮಹಾಕಾವ್ಯದ ಒಂದು ಭಾಗ

ಷಹ-ನಾಮ ಕಾವ್ಯವನ್ನು ರಚಿಸಲು ಫಿರ್ದೂಸಿಗೆ ಮೂವತ್ತು ವರ್ಷಗಳ ಕಾಲ ಹಿಡಿಯಿತಂತೆ ಆ ಮಹಾಕಾವ್ಯದಲ್ಲಿ ಅರುವತ್ತು ಸಾವಿರ ಪದ್ಯಗಳಿವೆಯಂತೆ. ಕವಿ ತನ್ನ ನಾಡಿನ ಪ್ರಾಚೀನಕಾಲದ ಪೌರಾಣಿಕ, ಚಾರಿತ್ರಿಕ ವೀರ ನಾಯಕರ ಕತೆಗಳೆಲ್ಲ ವನ್ನೂ ಬಹು ಸೊಗಸಾಗಿ ಬಣ್ಣಿಸಿರುವನು. ನಾಡಿನ ಅರಸರ ಚರಿತ್ರೆಗಳನ್ನು ಬಣ್ಣಿಸಿ ಬರೆದುದರಿಂದಲೇ ಕಾವ್ಯಕ್ಕೆ ಷಹ-ನಾಮ ಎಂಬ ಅನ್ವರ್ಥನಾಮ ಒದಗಿತು. ಈ ಕಾವ್ಯ ರಚನೆಗೊಂಡು ಒಂಭತ್ತು ಶತಮಾನಗಳು ಕಳೆದರೂ, ಈಗಲೂ ಅದು ಇರಾನಿಯರೆಲ್ಲರ ಮೆಚ್ಚುಗೆಗೆ ಪಾತ್ರವಾಗಿ, ಜನಜೀವನದಲ್ಲಿ ಬಳಕೆಯಲ್ಲಿದೆ

ಷಹ-ನಾಮವನ್ನು ಬರೆದ ಫಿರ್ದೂಸಿ ಕವಿ ಕ್ರಿ.ಶ ೯೪೦ರಲ್ಲಿ ಇರಾನ್ ದೇಶದಲ್ಲಿ ಜನ್ಮವೆತ್ತಿದನು ಆತನ ನಿಜವಾದ ಹೆಸರು ಅಬ್ದುಲ್ ಕಾಸಿಮ್ ಮನ್ಸೂರನೆಂದು. ಆದರೆ ಆತನು ಸಾಹಿತ್ಯಪ್ರಪಂಚದಲ್ಲಿ ಫಿರ್ದೂಸಿ ಎಂಬ ಹೆಸರಿನಿಂದ ಬೆಳಗುತ್ತಿದ್ದಾನೆ ಮನ್ಸೂರನ ಕತೆಗಳು ಕೇಳುಗರನ್ನು ಆನಂದಗೊಳಿಸಿ ಸಗ್ಗಕ್ಕೇರಿಸುತ್ತಿದ್ದುದರಿಂದ ಅವನಿಗೆ 'ಫಿರ್ದೂಸಿ' ಎಂಬ ಅನ್ವರ್ಥನಾಮ ಪ್ರಾಪ್ತವಾಯಿತು ಇರಾನಿಯರ ನುಡಿಯಲ್ಲಿ 'ಫಿರ್ದೂಸಿ' ಎಂದರೆ ಸ್ವರ್ಗವೆಂದು ಅರ್ಥ.

ಎಳೆ ಹರೆಯದಲ್ಲಿಯೇ ಮನ್ಸೂರನಿಗೆ ತನ್ನ ನಾಡಿಗೆ ಚರಿತ್ರೆಗೆ ಸಂಬಂಧಿಸಿದ ಆಖ್ಯೆ ಮತ್ತು ಐತಿಹ್ಯಗಳನ್ನು ಸಂಗ್ರಹಿಸುವುದು ಒಂದು ವಿನೋದ ವೃತ್ತಿಯಾಗಿದ್ದಿತು. ಈ ಸಂಗ್ರಹಣ ಕಾರ್ಯದಿಂದ ಅವನ ಅರಿವು ವಿಪುಲವಾಯಿತು. ಜನಮೆಚ್ಚುವಂತೆ ಕತೆ ಬಣ್ಣಿಸುವ ಅಳವು ಕೈಗೂಡಿತು. ಇದರ ಫಲವಾಗಿ ಷಹ-ನಾಮ ಹುಟ್ಟಿತು.

ಈ ಕಾಲದಲ್ಲಿ ಇರಾನನ್ನು ಚರಿತ್ರೆಯಲ್ಲಿ ಪ್ರಸಿದ್ಧನಾದ ಘಜನಿ ಮಹಮ್ಮದನು ಆಳುತ್ತಿದ್ದನು. ಇರಾನಿನ ಪ್ರಾಚೀನ ಚಕ್ರವರ್ತಿಗಳ ಚರಿತ್ರೆಗಳನ್ನು ಕಾವ್ಯರೂಪದಲ್ಲಿ ಬರೆಸಬೇಕೆಂದು ಅವನಿಗೆ ಅಭಿಲಾಷೆಯಾಯಿತು. ಇಂತಹದೊಂದು ಕಾವ್ಯವನ್ನು

ಬರೆಸಿದರೆ ತನ್ನ ವಿಜಯಗಳು ಆ ಕಾವ್ಯದಲ್ಲಿ ಅಡಕವಾಗಿ ತನ್ನ ಹೆಸರು ಅಜರಾಮರವಾಗಿ ಉಳಿವುದೆಂದು ಚಕ್ರವರ್ತಿ ಆಲೋಚಿಸಿದನು. ಈ ಮಹಾಕಾವ್ಯವನ್ನು ಬರೆಯುವ ಕಾರ್ಯವನ್ನು ಫಿರ್ದೂಸಿಗೆ ಒಪ್ಪಿಸಿದನು

ಪೋಷಕ ಮಹಮ್ಮದ ಚಕ್ರವರ್ತಿ ಈ ಮಹಾಕಾವ್ಯವನ್ನು ರಚಿಸಿದುದಕ್ಕೆ ಫಿರ್ದೂಸಿಗೆ ಅರುವತ್ತು ಸಾವಿರ ಸುವರ್ಣ ನಾಣ್ಯಗಳನ್ನು ಕೊಡಬೇಕೆಂದು ನಿಶ್ಚಿತವಾಗಿತ್ತು. ಸ್ವಂತ ಸುಖಭೋಗಗಳ ಮೇಲಿನ ಹಂಬಲದಿಂದ ಮಹಾಕವಿ ಹೊನ್ನನ್ನು ಆಶಿಸಲಿಲ್ಲ. ಅವನ ಹುಟ್ಟೂರಿನ ಪಕ್ಕದಲ್ಲಿದ್ದ ನದಿಯಲ್ಲಿ ನೆರೆ ಉಕ್ಕಿಬಂದು ಊರು ಆಗಾಗ ಗಂಡಾಂತರಕ್ಕೆ ಈಡಾಗುತ್ತಿತ್ತು. ಈ ನದಿಯ ದಂಡೆಯಲ್ಲಿ ಎತ್ತರವಾದ ಗೋಡೆಯೊಂದನ್ನು ನಿರ್ಮಿಸಿ, ಊರನ್ನು ಜಲಪ್ರವಾಹದಿಂದ ಕಾಪಾಡಬೇಕೆಂಬುದು ಅವನ ಉದ್ದೇಶವಾಗಿದ್ದಿತು ಚಕ್ರವರ್ತಿ ಕೊಟ್ಟ ದ್ರವ್ಯವನ್ನು ಈ ಪರಹಿತ ಕಾರ್ಯಕ್ಕೋಸುಗ ಬಳಸಬಹುದೆಂದು ಫಿರ್ದೂಸಿ ಆಲೋಚಿಸಿದನು. ಆದುದರಿಂದ ಕಾವ್ಯವನ್ನು ಬರೆದು ಮುಗಿಸುವ ಮುನ್ನ ಅವನು ಚಕ್ರವರ್ತಿಯಿಂದ ಯಾವ ಬಗೆಯ ಸಂಭಾವನಾ ದ್ರವ್ಯವನ್ನೂ ತೆಗೆದುಕೊಳ್ಳಲಿಲ್ಲ

ಷಹ-ನಾಮವನ್ನು ಬರೆದು ಮುಗಿಸಲು ಫಿರ್ದೂಸಿಗೆ ಮೂವತ್ತು ವರ್ಷಗಳ ಕಾಲ ಹಿಡಿಯಿತು ಈ ವೇಳೆಯಲ್ಲಿ ಚಕ್ರವರ್ತಿಯ ಆಸ್ಥಾನದಲ್ಲಿ ಕಪಟಿಯೂ ಅಸೂಯಾಪರನೂ ಆದ ವಜೀರನೊಬ್ಬನು ಬಂದು ಸೇರಿದ್ದನು. ಚಕ್ರವರ್ತಿಯ ಓಲಗದಲ್ಲಿ ಫಿರ್ದೂಸಿಗಿರುವ ಗೌರವ ಪ್ರತಿಷ್ಠೆಗಳನ್ನು ಕಂಡು ವಜೀರನ ಮನಸು ಅಸೂಯಾಕುಲವಾಯಿತು. ಫಿರ್ದೂಷಿಯ ಪ್ರತಿಷ್ಠೆಯನ್ನು ಕೆಡಿಸಬೇಕೆಂದು ಅವನು ಸಂಚು ನಡಿಸಿದನು.

ಫಿರ್ದೂಸಿ ತನ್ನ ಕಾವ್ಯದಲ್ಲಿ ಇರಾನಿನ ಪ್ರಾಚೀನ ಅಗ್ನಿಪೂಜಕ ರಾಜರ ಮತ್ತು ವೀರರ ಸಾಹಸಗಳನ್ನು ಬಣ್ಣಿಸಿದ್ದನು ಅದರಲ್ಲಿ ಕೆಲವೆಡೆ ಅಗ್ನಿಪೂಜಕ ಪುರೋಹಿತರ ವಚನಗಳನ್ನೂ ಧರ್ಮೋಪದೇಶಗಳನ್ನೂ ಅವರು ಹೇಳುವಂತೆಯೇ ಕೊಟ್ಟಿದ್ದನು. ಈ ವಜೀರನು ಚಕ್ರವರ್ತಿಗೆ ಆ ಕಾವ್ಯಭಾಗವನ್ನು ಓದಿಹೇಳಿ, ಫಿರ್ದೂಸಿ ಇಸ್ಲಾಂ ಧರ್ಮತತ್ವಗಳಿಗೆ ವಿರೋಧವಾಗಿ, ಅಗ್ನಿಪೂಜಕರ ಧರ್ಮಕ್ಕೆ ಪ್ರೋತ್ಸಾಹ ನೀಡುತ್ತಿರುವನೆಂದು ಚಾಡಿ ನುಡಿದನು. ಚಕ್ರವರ್ತಿ ಕವಿ ಧರ್ಮದ್ರೋಹವನ್ನು ಬಗೆದನೆಂದು ರೋಷಾಕುಲನಾದನು. ಆದರೆ ಫಿರ್ದೂಸಿ, ಇದು ತಾನು ಪ್ರತಿಪಾದಿಸಿದ ಧಾರ್ಮಿಕ ತತ್ವವಲ್ಲ; ಆಗಿನ ಕಾಲದ ಅಗ್ನಿಪೂಜಕರ ಧಾರ್ಮಿಕ ವಿಶ್ವಾಸವಾಗಿದೆ; ತಾನು ನಿಷ್ಠಾವಂತ ಇಸ್ಲಾಮಿಯನೆಂದು ಚಕ್ರವರ್ತಿಗೆ ಸಮಾಧಾನ ಹೇಳಿದನು. ಆದರೂ ವಜೀರನ ಚಾಡಿನುಡಿಯಿಂದ ಕಲುಷಿತ ಮನಸ್ಕನಾದ ಚಕ್ರವರ್ತಿಯ ರೋಷ ಕೆಳಗಿಳಿಯಲಿಲ್ಲ ಅವನು ಮಹಾಕವಿಯನ್ನು ಧರ್ಮಬಾಹಿರನೆಂದು ಪರಿಗಣಿಸಿ, ಅವನು ತನ್ನ ಆಸ್ಥಾನಕ್ಕೆ ಬರಬಾರದೆಂದು ಬಿರುನುಡಿದನು.

ಕೊನೆಗೆ ಮಹಾಕಾವ್ಯವನ್ನು ಕವಿ ಬರೆದು ಪೂರ್ತಿಗೊಳಿಸಿದನು ಚಕ್ರವರ್ತಿ ವಾಗ್ದಾನದಂತೆ ಅರುವತ್ತು ಸಾವಿರ ಸುವರ್ಣ ನಾಣ್ಯಗಳನ್ನು ಕವಿಗೆ ಕಳುಹಲು ಆಜ್ಞಾಪಿಸಿದನು ಆದರೆ ವಜೀರನು, "ಸುವರ್ಣನಾಣ್ಯಗಳನ್ನು ಕೊಟ್ಟು ಬೊಕ್ಕಸವನ್ನು ಸೂರೆಗೊಳ್ಳುವುದೇಕೆ? ಬೆಳ್ಳಿಯ ನಾಣ್ಯಗಳನ್ನು ಕೊಟ್ಟರೆ ಸಾಕು!" ಎಂದು ಚಕ್ರವರ್ತಿಯ ಕಿವಿ ಊದಿದನು ಹಿತ್ತಾಳೆ ಕಿವಿಯ ಚಕ್ರವರ್ತಿ ಹೊನ್ನು ಕಳುಹುವುದರ ಬದಲು ಬೆಳ್ಳಿ ನಾಣ್ಯಗಳನ್ನೇ ಕವಿಗೆ ಸಂಭಾವನೆಯಾಗಿ ಕಳುಹಿದನು.

ಒಂಟೆಗಳ ಮೇಲೆ ನಾಣ್ಯಗಳ ಹೇರು ಬಂದಾಗ, ಕವಿ ತನ್ನ ಊರಿನ ಸಾರ್ವಜನಿಕ ಸ್ನಾನಮಂದಿರದಲ್ಲಿದ್ದನು. ಚಕ್ರವರ್ತಿ ಹೊನ್ನಿನ ಬದಲು ಬೆಳ್ಳಿಯ ನಾಣ್ಯಗಳನ್ನು ಕಳುಹಿದುದನ್ನು ಕಂಡು ಕವಿಗೆ ವಿಪರೀತ ಕೋಪಬಂತು. ಅವನು ಚಕ್ರವರ್ತಿಯ ಕಾರ್ಪಣ್ಯವನ್ನು ಕಂಡು ರಾಜನ ವಿಷಯದಲ್ಲಿ ತಿರಸ್ಕಾರ ತಾಳಿದನು. ಅವನು ಈ ದ್ರವ್ಯವನ್ನು ಸ್ನಾನಗೃಹದಲ್ಲಿದ್ದ ಭಿಕ್ಷುಕರಿಗೂ, ಸಂಭಾವನೆಯನ್ನು ತಂದ ರಾಜದೂತರಿಗೂ ಪಾರಿತೋಷಕವಾಗಿ ನೀಡಿ, ಚಕ್ರವರ್ತಿಯನ್ನು ಹಳಿದು ಹಂಗಿಸಿ ಒಂದು ಕವಿತೆಯನ್ನು ಬರೆದು ಕಳುಹಿದನು ಆ ಕವಿತೆಯ ತಾತ್ಪರ್ಯವಿದು: "ಮೂವತ್ತು ವರ್ಷಕಾಲ ಪರಿಶ್ರಮಪಟ್ಟು, ಬಾದಶಾಹನು ನನಗೆ ಭಂಡಾರವನ್ನೇ ಧಾರೆಯೆರೆಯಬಹುದೆಂಬ ಆಸೆಯಿಂದ ಮಹಾಕಾವ್ಯವನ್ನು ರಚಿಸಿದೆನು ಆದರೆ ಭಂಡಾರದ ಬದಲು ನನಗೆ ಮಾನಸಿಕ ಕಷ್ಟ ಪುರಸ್ಕಾರವಾಯಿತು. ಬಾದಶಾಹನ ತಂದೆ ಬಾದಶಾಹನಾಗಿದ್ದರೆ, ನನ್ನ ತಲೆಯ ಮೇಲೆ ಸುವರ್ಣ ಕಿರೀಟ ವಿರಾಜಿಸುತ್ತಿತ್ತು! ಅವನ ತಾಯಿ ಕುಲೀನಳಾಗಿದ್ದರೆ ನನ್ನ ಮೊಣಕಾಲ ವರೆಗೆ ಸುವರ್ಣರಾಶಿ ಬೀಳುತ್ತಿತ್ತು! ಯಾರ ಸ್ವಭಾವದಲ್ಲಿ ಉದಾರತೆ, ಉತ್ತಮತೆಗಳಿಲ್ಲವೊ ಅವರಿಂದ ಉತ್ತಮರ ಸನ್ಮಾನವನ್ನು ಸಹಿಸಲು ಸಾಧ್ಯವಿಲ್ಲ."

ಮಹಾಕವಿಯ ವರ್ತನೆ ಚಕ್ರವರ್ತಿಯನ್ನು ಮುನಿಸಿಗೀಡುಮಾಡಿತು. ಫಿರ್ದೂಸಿ ರಾಜನನ್ನು ಅಪಮಾನಿಸಿದನೆಂದು ರಾಜದ್ರೋಹದ ಅಪಾದನೆಗೆ ಕವಿ ಒಳಗಾದನು ಚಕ್ರವರ್ತಿಯ ಕೋಪದಿಂದ ಪಾರಾಗಲು ಫಿರ್ದೂಸಿ ಇರಾನನ್ನು ತ್ಯಜಿಸಿ ಮಜಂದ್ರಕ್ಕೆ ಪಲಾಯನಮಾಡಿದನು.

ಮತ್ತೆ ಕೆಲವರ್ಷಗಳಲ್ಲಿಯೇ ಈ ವಜೀರನು ಮೃತನಾದನು. ನಾಡಿನ ಮಹಾಕವಿಗೆ ಉಚಿತ ಪುರಸ್ಕಾರ ಗೌರವಗಳನ್ನು ನೀಡಲಿಲ್ಲವೆಂಬ ವಿವೇಕಬೋಧ ಚಕ್ರವರ್ತಿ ಮಹಮ್ಮದನಲ್ಲಿ ಉದಯವಾಯಿತು. ಚಕ್ರವರ್ತಿ, ಕವಿಗೆ ತಾನೆಸಗಿದ ಕೇಡನ್ನು ನೆನೆದು ಪಶ್ಚಾತ್ತಾಪಪಟ್ಟು, ಅವನು ತನ್ನ ಅಕೃತ್ಯಕ್ಕೆ ಪರಿಹಾರವನ್ನೆಸಗಲು ಒಂದು ಲಕ್ಷ ಸುವರ್ಣ ನಾಣ್ಯಗಳನ್ನು ಮಹಾಕವಿಗೆ ಸಂಭಾವನೆಯಾಗಿ ಕಳುಹಿದನು.

ಆಗ ಮಹಾಕವಿಗೆ ೭೯ ವರ್ಷ ಪ್ರಾಯ. ಬಾಳ್ವೆಯ ಕಷ್ಟನಿಷ್ಠುರಗಳ ತಾಪದಿಂದ ಅವನ ದೇಹ ಶಿಥಿಲವಾಗಿದ್ದಿತು. ಅವನ ಬಾಳ್ವೆಯ ಪಯಣವನ್ನು

ಕೊನೆಗೊಳಿಸಲು ಸಾವು ಹೊಂಚುಹಾಕುತ್ತಿದ್ದಿತು. ಚಕ್ರವರ್ತಿಯ ಔದಾರ್ಯ ಅಟ್ಟ ಮೇಲೆ ಒಲೆ ಉರಿಯಿತೆಂಬ ಗಾದೆಯಂತಾಯಿತು ರಾಜದೂತರು ಒಂಟೆಗಳ ಮೇಲೆ ಹೊನ್ನ ಹೇರುಗಳನ್ನು ನಗರದ ಹೆಬ್ಬಾಗಿಲಿಗೆ ತಂದಾಗ. ಮಹಾಕವಿ ತನ್ನ ಜೀವನಯಾತ್ರೆಯನ್ನು ಮುಗಿಸಿ, ಶ್ಮಶಾನಯಾತ್ರೆಯನ್ನ ಕೈಗೊಂಡು ನಗರದ ಇನ್ನೊಂದು ಬಾಗಿಲನ್ನು ದಾಟಿದ್ದನು! ಫಿರ್ದೂಸಿ ಜಗತ್ತಿನ ಮಾನವರ ಅನುಗ್ರಹ-ಅಸೂಯೆ.ಗಳ ಗಡಿಯನ್ನು ದಾಟಿ ಶಾಂತಿಯ ನಾಡಿಗೆ ತೆರಳಿದ್ದನು

ಮಹಾಕವಿಯ ಅಭಿಮಾನೀ ಪುತ್ರಿ ಚಕ್ರವರ್ತಿಯ ಸಂಭಾವನೆಯನ್ನು ಸ್ವೀಕಾರ ಮಾಡಲು ಮೊದಲು ತಿರಸ್ಕರಿಸಿದಳು. ಆದರೆ ಮಹಾಕವಿಯ ಸಹೋದರಿ ಫಿರ್ದೂಸಿಯ ಕೊನೆಯ ಅಪೇಕ್ಷೆಯನ್ನು ಕಾರ್ಯರೂಪಕ್ಕೆ ತರಲು ಆ ದ್ರವ್ಯವನ್ನು ಬಳಸಬೇಕೆಂದು ಸೂಚಿಸಿದಳು. ಮಗಳು ಈ ಸಲಹೆಯನ್ನು ಮನ್ನಿಸಿ, ನದಿಯ ದಂಡೆಯಲ್ಲಿ ಪ್ರವಾಹ ಊರೊಳಗೆ ಉಕ್ಕಿ ಬರದಂತೆ ಎತ್ತರದ ಗೋಡೆಯೊಂದನ್ನು ಕಟ್ಟಿಸಿದಳು. ಉಳಿಕೆಯಾದ ದ್ರವ್ಯವನ್ನು ತಂದೆಯ ನೆನಪಿಗೆಂದು ನಗರದಲ್ಲಿ ಚೆಲುವಾದ ಒಂದು ಸಂತೆಬೀದಿಯನ್ನು ನಿರ್ಮಿಸಲು ವಿನಿಯೋಗಿಸಿದಳು.

ಮಗಳು ನಿರ್ಮಿಸಿದ ಸಂತೆಬೀದಿ ಕಾಲಪ್ರವಾಹದ ಆಘಾತಗಳಿಂದ ಹುಡಿಯಾಗಿ ಹೋಯಿತು. ಆದರೆ ಮಹಾಕವಿಯೇ ನಿರ್ಮಿಸಿದ ಅಮೋಘ ಸ್ಮಾರಕ—ಷಹ-ನಾಮು ಕಾಲಪುರುಷನನ್ನು ಮೂದಲಿಸಿ ನಿಂತು, ಮುಪ್ಪು-ಸಾವುಗಳನ್ನು ಮೆಟ್ಟಿ ಈಗಲೂ ಮೆರೆಯುತ್ತಿದೆ

—ಭಾ. ಸು.

# ಇರಾನಿನ ವೀರರು

## ಒಂದು

ಜಾಬೂಲಿನ ಪಾಳೆಯಗಾರ ಸಾಮನಿಗೆ ಪುತ್ರೋತ್ಸವವಾಗಿದೆ. ನಾಳೆ ಗಾದಿಗೆ ಹಕ್ಕುದಾರನಾಗುವ ಗಂಡುಕೂಸನ್ನು ಪಾಳೆಯಗಾರ್ತಿ ಹಡೆದಿರುವಳು. ಆದರೆ ಅರಮನೆಯಲ್ಲಿ ಉತ್ಸವದ ವಾದ್ಯ ಘೋಷ ಮೊಳಗುತಲಿಲ್ಲ; ಹೊಸಲು ತಳಿರುತೋರಣಗಳಿಂದ ಅಲಂಕೃತವಾಗಿಲ್ಲ; ಪಾಳೆಯಗಾರನ ಮೊಗದಲ್ಲಿ ಸಂತಸದ ಕಿರಣಗಳು ಜಿನುಗುತಲಿಲ್ಲ, ಚಿಂತೆಯ ಕಾರ್ಮುಗಿಲು ಆವರಿಸಿದೆ; ಆಸ್ಥಾನಿಕರ ಕಣ್ಣುಗಳನ್ನು ಅಂಜಿಕೆಯ ಮಂಜು ಕವಿದಿದೆ. ಸಂತಸ ನಲಿವುಗಳು ನೆಲಸಬೇಕಾದ ಎದೆಯಲ್ಲಿ ಚಿಂತೆ-ಭೀತಿಗಳು ಮನೆ ಮಾಡಿವೆ! ಈ ವಿಪರ್ಯಾಸವೇಕೆ?

ಪಾಳೆಯಗಾರ್ತಿ ಹಡೆದ ಕೂಸು ಇತರ ಹಸುಳೆಗಳಂತಿರಲಿಲ್ಲ. ಅದರ ಕೂದಲು ಹಾಲಿನಂತೆ ಬೆಳ್ಳಗಾಗಿತ್ತು. ತಾಯಿ ಮಗುವನ್ನು ಪ್ರೀತಿಯಿಂದ ಜಾಲನೆಂದು ಕರೆದಳು ಬಿಳಿಗೂದಲಿನ ಕೂಸನ್ನು ಪಾಳೆಯಗಾರ್ತಿ ಹಡೆದಳೆಂದು ಕೇಳಿದ ಜ್ಯೋತಿಷಿಗಳು ಕೆಲವರು "ಇಂತಹ ವಿಚಿತ್ರ ಸಂಗತಿ ಈ ತನಕ ನಾವು ಯಾರೂ ಕೇಳಿಲ್ಲ. ಹಾಲಿನ ಕೆನೆಯಂತೆ ಕುರುಳುಳ್ಳ ಕೂಸು ರಕ್ಕಸ ಜಾತಿಗೆ ಸೇರಿದುದೇ ಸರಿ ಈ ಹಸುಳೆಯಿಂದ ಪಾಳೆಯಗಾರನಿಗೆ ಶ್ರೇಯಸ್ಸಾಗದು. ಆದುದರಿಂದ ಈ ಮಗುವನ್ನು ತೊಡೆಯುವುದು ಮೇಲು" ಎಂದು ಉದ್ಗಾರವೆತ್ತಿದರು

ಜೋಯಿಸರ ಈ ನುಡಿ ಪಾಳೆಯಗಾರ ಸಾಮನನ್ನು ಭಯಾಕುಲನನ್ನಾಗಿ ಮಾಡಿತು "ಕುಲಕ್ಕೆ ಕೊಡಲಿಯಾಗುವ ಕೂಸನ್ನು ಪೋಷಿಸುವುದು ಹಾವಿಗೆ ಹಾಲೆರೆದಂತೆಯೇ ಸರಿ" ಎಂದು ಅವನು ಆಲೋಚಿಸಿದನು. ಆದುದರಿಂದ ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನು ತೊರೆಯಲು ಅವನು ನಿರ್ಧರಿಸಿದನು ಅವನು ಮಗುವಿನ ಮೇಲೆ ತಾಯಿಗೆ ಇದ್ದ ಮೋಹ-ಮಮತೆಗಳನ್ನು ಲೆಕ್ಕಿಸದೆ ಒಂದಿರುಳು ತಾಯಿ ನಿದ್ರಿಸುತ್ತಿದ್ದಾಗ ಪಕ್ಕದಲ್ಲಿದ್ದ ಕೂಸನ್ನು ಎತ್ತಿಕೊಂಡು ಮನೆಯಿಂದ ಹೊರಟನು.

ಸಾನನೂ ಅವನ ಜತೆಯಲ್ಲಿ ಪೈಗಾವಲ ಭಟರೂ ದೀರ್ಘ ಪ್ರಯಾಣ ವನ್ನು ಕೈಗೊಂಡರು. ಅವರು ಇರಾನಿನಲ್ಲಿ ಅತ್ಯುನ್ನತವಾಗಿದ್ದ ಎಲ್‌ಬ್ರೂಜ ಪರ್ವತದ ತಪ್ಪಲನ್ನು ನೇರಿದರು ಈ ಎತ್ತರದ ಪರ್ವತವನ್ನೇರಿ ವನ್ಯ ಮೃಗ ಪಕ್ಷಿಗಳಿಗೆ ಆಹಾರವಾಗಲೆಂದು ಒಂದು ಕೋಡುಗಲ್ಲಿನ ಮೇಲೆ ಶಿಶು ವನ್ನು ಮಲಗಿಸಿ, ತಮ್ಮ ಹೋಳಲಿಗೆ ಹಿಂದಿರುಗಿದರು ಆ ಗಿರಿಶಿಖರದ ತುದಿ ಯಲ್ಲಿ ಆ ಕೂಸು ಹಸಿವೆಯಿಂದ ರೋದಿಸತೊಡಗಿತು ಆದರೆ ಮಗುವಿನ ರೋದನವನ್ನು ಕೇಳಲು ಮತ್ತು ನೆರವಾಗಲು ಚಳಿ ಕೊರೆಯುತ್ತಿರುವ ಆ ಬೆಟ್ಟದ ತುದಿಯಲ್ಲಿ ಮಾನವರಾರೂ ಇರಲಿಲ್ಲ.

ಮಾನವನ ನೆರವಿಲ್ಲದಿದ್ದರೇನು? ಕಂದನ ಸಂಕಟದ ಕೂಗನ್ನು ಕೇಳಿ ಅದರ ನೆರವಿಗೆ ವಿಹಗವೊಂದು ನೆರವಾಯಿತು ಆ ಬೆಟ್ಟದ ತುದಿಯಲ್ಲಿ ಸಿಮು ರಾಗವೆಂಬ ಒಂದು ದೊಡ್ಡ ಪಕ್ಷಿ ಜೀವಿಸುತ್ತಿದ್ದಿತು ಅದು ತನ್ನ ದಿನದ ಆಹಾರವನ್ನು ಅರಸುತ್ತಾ ಬಾಂದಳದಲ್ಲಿ ಹಾರುತ್ತಿತ್ತು. ಈ ಪಕ್ಷಿ ಮನುಷ್ಯ ನಿಗಿಂತಲೂ ದೊಡ್ಡದು. ಅದು ಇತರ ಪಕ್ಷಿಗಳಂತೆ ಗೂಡುಕಟ್ಟಲು ಗರಿಕೆ ಕಡ್ಡಿಗಳನ್ನು ಬಳಸದೆ ದೊಡ್ಡ ದೊಡ್ಡ ಕೊಂಬೆಗಳನ್ನೇ ಉಪಯೋಗಿಸು ತ್ತಿದ್ದಿತು. ಎತ್ತರದಲ್ಲಿ ರೆಕ್ಕೆಯಗಲಿಸಿ ಹಾರುವ ಸಿಮುರಾಗಪಕ್ಷಿ ಜಗಗಿನ ಬಿಸಿ ಲಿಗೆ ಕೆಂಪಗೆ ಮಿನುಗುತ್ತಿದ್ದ ಶಿಶುವನ್ನು ಕಂಡು ಅದೊಂದು ಮಾಂಸದ ತುಂಡೆಂದು ಭಾವಿಸಿ ಮಗುವಿನ ಮೇಲೆರಗಿತು.

ಹತ್ತಿರಕ್ಕೆ ಬಂದಾಗ ತಾನು ಕಂಡುದು ಮಾಂಸದ ತುಂಡಲ್ಲ. ತಂದೆ ತೊರೆದ ಶಿಶುವೆಂಬುದು ಸಿಮುರಾಗ ಪಕ್ಷಿಗೆ ಅರಿವಾಯಿತು ಪಕ್ಷಿಯ ಎದೆಯಲ್ಲಿ ಕರುಣೆಯ ಚಿಲುಮೆ ಒಸರಿತು. ಅದು ಮಗುವನ್ನು ನೋವಾಗ ದಂತೆ ಕೊಕ್ಕಿನಲ್ಲಿ ಎತ್ತಿಕೊಂಡಿತು; ಗೂಡಿಗೆ ಹಾರಿತು. ಗೂಡಿನಲ್ಲಿ ಮಗು ಜಾಲನಿಗಿಂತಲೂ ದೊಡ್ಡ ಸಿಮುರಾಗ ಮರಿಗಳಿದ್ದುವು. ಆದರೆ ಅವು ಜಾಲನನ್ನು ಪೀಡಿಸಲಿಲ್ಲ. ಅವು ಅವನ ಮಗ್ಗುಲಲ್ಲಿ ಮಲಗಿ ಅವನಿಗೆ ಕಾವು ಗೊಟ್ಟು ಚಳಿಯಿಂದ ಕಾಪಾಡಿದುವು. ಸಿಮುರಾಗ ಪಕ್ಷಿ ಹೊರಗೆ ಹಾರಿ ಹೋಗಿ ಕೊಳ್ಳೆಯೊಂದನ್ನು ಹಿಡಿದು ತಂದು, ಆ ಮೃಗದ ಮೃದುವಾದ ಮಾಂಸದ ತುಣುಕುಗಳನ್ನು ಕೊಕ್ಕಿನಿಂದ ತೆಗೆದು ಮಗುವಿಗೆ ತಿನ್ನಿಸಿತು ಮಗುವಿಗೆ ಕುಡಿಸಲು ಹಾಲಿಲ್ಲವೆಂದು ಅದರ ತೃಷೆಯನ್ನು ತಣಿಸುವುದು ಆ ವಿಹಗಕ್ಕೊಂದು ಸಮಸ್ಯೆಯಾಗಲಿಲ್ಲ. ಮೃಗದ ಮಾಂಸ ಖಂಡಗಳಿಂದ

ಬಸಿಯುತ್ತಿರುವ ನೆತ್ತರನ್ನೇ ಕುಡಿಸಿ ಮಗುವಿನ ನೀರಡಿಕೆಯನ್ನು ಕಳೆಯಿತು.

ಹೀಗೆ ಸಿಮುರಾಗ ಪಕ್ಷಿಯ ಲಾಲನೆ ಪಾಲನೆಗಳಲ್ಲಿ ಜಾಲನು ಬೆಳೆಯತೊಡಗಿದನು. ಅವನ ಮೈಕೈಗಳು ಪುಷ್ಟವಾದುವು. ಶರೀರ ಬೆಳೆಯಿತು. ಮೊಗವು ಪ್ರಕಾಶಮಾನವಾಯಿತು. ಪಕ್ಷಿಯ ಮರಿಗಳೇ ಅವನ ಒಡನಾಡಿಗಳಾದುವು. ಸಿಮುರಾಗ ಪಕ್ಷಿಯೇ ಅಕ್ಕರೆಯಿಂದ ಪೋಷಿಸುವ ತಾಯಿಯಾಯಿತು ಅವನು ದಿನಗಳೆದಂತೆ ಸುಂದರನೂ ಬಲಶಾಲಿಯೂ ಆಗತೊಡಗಿದನು. ಸಿಮುರಾಗ ಬಹು ವಿಚಿತ್ರವಾದ ಪಕ್ಷಿ. ಮಾನವನ ನುಡಿಯನ್ನು ಬಲ್ಲ ಅದು ಹುಡುಗನಿಗೆ ಮಾನವ ಭಾಷೆಯನ್ನು ಕಲಿಸಿತು. ಪಕ್ಷಿಯ ಆರೈಕೆಯಲ್ಲಿ ಅವನು ಯಾವ ವಿಪತ್ತಿಗೂ ಅಂಜದ ಮಹಾಧೀರನಾಗಿ ಬೆಳೆದನು. ತಂದೆ ತೊರೆದ ಮಗುವನ್ನು ವನ್ಯ ಪಕ್ಷಿ ತಂದೆಗಿಂತ ಮಿಗಿಲಾದ ಪ್ರೀತಿ ಮಮತೆಗಳ ಸಹಿ ಪಾಲನ್ಮಾಡಿ ಕಾಪಾಡಿತು.

ತೊರೆದ ಕಂದನಿಗೋಸುಗ ಹೆತ್ತ ಕರುಳು ಮಿಡಿಯದಿರುವುದೇ? ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಎಲ್ ಬ್ರೂಜ ಪರ್ವತದ ಕೋಡುಗಲ್ಲಿನ ಮೇಲೆ ತೊರೆದು ಬಂದ ಸಾಸನಿಗೆ ನೆಮ್ಮದಿಯಿಲ್ಲವಾಯಿತು. ಅಡಿಗಡಿಗೆ ಮಗನ ಚಿಂತೆ ಅವನನ್ನು ಬಾಧಿಸತೊಡಗಿತು. ಮಗನಿಲ್ಲದ ಬಾಳು ಹಾಳು ಎಂದು ಅವನಿಗೆ ಅನಿಸತೊಡಗಿತು. ಹಗಲು ಇರುಳು ಅವನು ತಾನು ತೊರೆದ ಮಗನನ್ನು ಸ್ಮರಿಸತೊಡಗಿದನು

ಒಂದಿರುಳು ಪಾಳೆಯಗಾರ ಸಾಸನಿಗೊಂದು ಕನಸು ಕಂಡಿತು. ಮರುದಿನ ಅವನು ಈ ಕನಸಿನ ಫಲವೇನೆಂದು ಶಕುನಜ್ಞರನ್ನು ಕೇಳಲು ಅವರು ಕುಮಾರನು ಜೀವಂತನಾಗಿದ್ದಾನೆ ಎಂಬ ಸಂಗತಿಯನ್ನು ಕನಸು ಅರುಹುವುದೆಂದು ಫಲ ಹೇಳಿದರು. ಇನ್ನೊಂದು ಸಲ ಅತಿಶಯ ಸೌಂದರ್ಯ ಸಂಪನ್ನನಾದ ತರುಣ ಯೋಧನ ನಾಯಕತ್ವದಲ್ಲಿ ಪಡೆಯೊಂದು ತನ್ನ ರಾಜಧಾನಿಗೆ ಆಗಮಿಸುತ್ತಿರುವುದನ್ನು ಅವನು ಕಂಡನು ಈ ಕನಸಿನ ಕತೆ ಕೇಳಿದ ಸೇನಾಪತಿ, ಕುಮಾರನು ದೈವಾನುಗ್ರಹಕ್ಕೆ ಒಳಗಾಗಿ ಬೆಳೆಯುತ್ತಿರುವನೆಂದು ತನ್ನ ಒಡೆಯನನ್ನು ಸಮಾಧಾನ ಪಡಿಸಿದನು ಮಗುದೊಮ್ಮೆ ಪಾಳೆಯಗಾರನು ಸ್ವಪ್ನವೊಂದನ್ನು ಕಾಣಲು ಚೀರುತ್ತಾ ಎಚ್ಚರಗೊಂಡನು.

ಆಗಾಗ ಕಾಡತೊಡಗಿದ ಕನಸುಗಳು ಸಾಸನ ಮನಶ್ಶಾಂತಿಯನ್ನು ಕೆಡಿಸಿದುವು. ಅಗಲಿದ ಮಗನ ಧ್ಯಾನದಲ್ಲಿಯೇ ಒಂದು ದಿನ ಅವನು

ಎಲ್‌ಬ್ರೂಜ ಪರ್ವತಕ್ಕೆ ಹೋಗಿ ಮಗನು ಜೀವಂತನಾಗಿರುವನೇ ಎಂದು ಪರೀಕ್ಷಿಸಬೇಕೆಂದು ನಿರ್ಧರಿಸಿದನು. ಅವನು ಪೈಗಾವಲಿನ ಭಟರನ್ನು ಕರೆದುಕೊಂಡು ಎಲ್‌ಬ್ರೂಜ ಪರ್ವತಕ್ಕೆ ಪ್ರಯಾಣ ಮಾಡಿದನು ಸಿಮುರಾಗ ಪಕ್ಷಿಯ ಗೂಡು ಪರ್ವತದಲ್ಲಿ ಅತ್ಯಂತ ಕಡಿದಾದ ಎಡೆಯಲ್ಲಿ ಇದ್ದುದರಿಂದ ಅಲ್ಲಿಗೆ ಸೇರುವುದು ಎಂತಹ ಸಾಹಸಿಗಳಿಗೂ ಅಸದಳವಾದ ಕಾರ್ಯವಾಗಿದ್ದಿತು. ಕರುಣೆಯಿಲ್ಲದೆ ಮಗನನ್ನು ತೊರೆದ ಅಪರಾಧವನ್ನು ಮನ್ನಿಸಬೇಕೆಂದು ಸಾನನು ಭಕ್ತಿಯಿಂದ ದೇವರನ್ನು ಪ್ರಾರ್ಥಿಸಿದನು; ಬಾಷ್ಪಸಲಿಲದಿಂದ ಅಪರಾಧದ ಮಲಿನತೆಯನ್ನು ತೊಳೆದನು

ಪಾಳೆಯಗಾರನ ಮೊರೆ ದೇವರಿಗೆ ಕೇಳಿಸಿತು. ಆಕಾಶದಲ್ಲಿ ಹಾರಾಡುತ್ತಿದ್ದ ಸಿಮುರಾಗ ಪಕ್ಷಿಗೆ ಸಾನನ ಕೊರಳಿಂದ ಹೊಮ್ಮುತ್ತಿದ್ದ ಮೊರೆಯೊ ದ್ಗಾರಗಳು ಕೇಳಿದುವು. ಗೂಡಿನ ಅಂಚಿನಲ್ಲಿ ನಿಂತ ಜಾಲನು ಪರ್ವತದ ತಪ್ಪಲಿನಲ್ಲಿ ನೆರೆದ ಜನರನ್ನು ಕೌತುಕದಿಂದ ನೋಡುತ್ತಿದ್ದಾಗಲೇ ಸಿಮುರಾಗ ಪಕ್ಷಿ ಗೂಡಿಗೆ ಬಂದು ಅವನ ಸಂಗಡ "ನಾನು ಈ ತನಕ ನಿನ್ನ ತಾಯಿಯೂ ದಾದಿಯೂ ಆಗಿದ್ದೆ ಆದರೆ ನಿನ್ನನ್ನು ಕರೆದುಕೊಂಡು ಹೋಗಲು ಈಗ ನಿನ್ನ ತಂದೆ ಬಂದಿದ್ದಾನೆ. ನೀನು ವೀರನಾದ ನಿನ್ನ ತಂದೆಯೊಡನೆ ಹೋಗ ಬೇಕು." ಎಂದು ಹೇಳಿತು.

"ನಾನು ನಿನ್ನನ್ನು ತೊರೆದು ಹೋಗಲೊಲ್ಲೆ. ನೀನೇ ನನ್ನ ತಾಯಿ–ತಂದೆಯಾಗಿರುವೆ." ಎಂದು ಜಾಲನು ಮಾರ್ನುಡಿದನು ಅವನ ಕಣ್ಣುಗಳಲ್ಲಿ ಬಾಷ್ಪ ಬಿಂದುಗಳು ತುಂಬಿದುವು. ತಾಯಿಯಂತೆ ತನ್ನನ್ನು ಸಾಕಿದ ಹಕ್ಕಿಯನ್ನು ಅಗಲಲು ಅವನಿಗೆ ಇಷ್ಟವಿರಲಿಲ್ಲ; ಮನಸ್ಸು ಬರಲಿಲ್ಲ

"ಆದಾಗದು. ನೀನು ಹೋಗಿ ಪ್ರಪಂಚದ ಜನರೊಡನೆ ಬೆರೆತು ಜೀವಿಸತಕ್ಕದ್ದು. ನಿನ್ನ ಅಗಲಿಕೆಯ ಅಳಲು ನನ್ನ ಎದೆಯನ್ನು ಸೀಳುವುದೇನೋ ನಿಜ. ಆದರೆ ನೀನು ನಿನ್ನವರನ್ನು ಬಿಡಬಾರದು; ನನ್ನನ್ನು ಮರೆಯಬಾರದು. ಈಗ ನನ್ನ ರೆಕ್ಕೆಯಿಂದ ಕೆಲವು ಗರಿಗಳನ್ನು ತೆಗೆದುಕೋ. ನನ್ನ ಸಹಾಯ ಬೇಕಾದಾಗ ನೀನು ಒಂದು ಗರಿಯನ್ನು ಬೆಂಕಿಯಲ್ಲಿ ಹಾಕಿ ನನ್ನನ್ನು ಸ್ಮರಿಸಿದರೆ ಸಾಕು. ನಾನು ಬಂದು ನಿನಗೆ ನೆರವಾಗುವೆನು." ಎಂದು ಪಕ್ಷಿ ತನ್ನ ರೆಕ್ಕೆಯಿಂದ ಗರಿಗಳನ್ನು ತೆಗೆದು ಜಾಲನಿಗೆ ಕೊಟ್ಟಿತು. ಆ ಮೇಲೆ ಆ ಪಕ್ಷಿ ಜಾಲನನ್ನು ಕೊಕ್ಕಿನಲ್ಲಿ ಎತ್ತಿಕೊಂಡು ಪರ್ವತದ ತಪ್ಪ

ಲಿಗೆ ಹಾರಿತು. ಹುಡುಗನನ್ನು ಅವನ ತಂದೆಯ ಮುಂದೆ ನಿಲ್ಲಿಸಿ, “ಇಗೋ, ನೀನು ತೊರೆದ ಕೂಸನ್ನು ನಿನಗೆ ಮರಳಿಯೊಪ್ಪಿಸುವೆನು ಇವನು ಇರಾನಿನ ವೀರರಲ್ಲೆಲ್ಲಾ ಪ್ರಸಿದ್ಧನಾಗುವನು.” ಎಂದು ಸಾನನಿಗೆ ಹೇಳಿ ಮಗುವನ್ನೊಪ್ಪಿಸಿತು ಸಾನನು ಮಗನನ್ನು ಕಾಪಾಡಿದ ಪಕ್ಷಿಗೆ ತನ್ನ ಕೃತಜ್ಞತೆಯನ್ನು ನಿವೇದಿಸಿ ಕುಮಾರನೊಡನೆ ತನ್ನ ತಲೆವೊಳಲಿಗೆ ಮರಳಿದನು.

ಆ ಕಾಲದಲ್ಲಿ ಇರಾನ್ ದೇಶವನ್ನು ‘ಮಿನುಚೆರ’ನೆಂಬ ರಾಜನು ಆಳುತ್ತಿದ್ದನು. ಸಾನನು ರಾಜನ ಪ್ರಧಾನ ಯೋಧನಾಗಿದ್ದನು. ಸಾನನು ಮಗನನ್ನು ಅರಸುತ್ತಾ ಎಲ್‌ಬ್ರೂಜ ಶೈಲಕ್ಕೆ ಹೋಗಿ, ಅಗಲಿದ ಮಗನನ್ನು ಮರಳಿ ಪಡೆದ ವಾರ್ತೆಯನ್ನು ಕೇಳಿ ರಾಜನಿಗೂ ಸಂತೋಷವಾಯಿತು. ಮಗನನ್ನು ಮರಳಿ ಪಡೆದ ಸಾನನು ರಾಜದರ್ಶನಕ್ಕೆಂದು ಬಾಲಕ ಜಾಲನೊಡನೆ ಜಾಬೂಲಿನಿಂದ ಹೊರಟು, ಕೆಲದಿನಗಳಲ್ಲಿಯೇ ರಾಜಧಾನಿಯನ್ನು ತಲಪಿದನು. ರಾಜನ ಪರಿವಾರದವರು ನಗರದ ಹೊರವಲಯದಲ್ಲಿಯೇ ಸಾನನನ್ನು ಎದುರುಗೊಂಡು ತಂದೆ ಮಗಂದಿರನ್ನು ಮೆರವಣಿಗೆಯಲ್ಲಿ ಅರಮನೆಗೆ ಕರೆದೊಯ್ದರು.

ಸಾನನು ಅರಮನೆಯಲ್ಲಿದ್ದ ರಾಜನ ಭೇಟಿಮಾಡಿ ಅರಸನಿಗೆ ಮಗನ ಪರಿಚಯ ಮಾಡಿಸಿ, ತನಗೆ ಮಗನು ಮರಳಿ ದೊರೆತ ಕತೆಯನ್ನು ವಿಶದವಾಗಿ ಅರಿಕೆ ಮಾಡಿದನು ರಾಜನ ಆಸ್ಥಾನದಲ್ಲಿದ್ದ ಜ್ಯೋತಿಷಿಗಳು ಜಾಲನ ಜಾತಕವನ್ನು ತಯಾರಿಸಿ, ಕುಮಾರನ ಭವಿತವ್ಯವೇನೆಂಬುದನ್ನು ಅರುಹಿದರು. ಅವರು ಜಾಲನು ತನ್ನ ಕಾಲದ ಜನರಲ್ಲೆಲ್ಲಾ ಮಹಾವೀರನೂ ಪ್ರಾಜ್ಞನೂ ಆಗುವನೆಂದು ಒಮ್ಮತದಿಂದ ಭವಿಷ್ಯ ಫಲವನ್ನು ಸಾರಿದರು.

ಆಗ ರಾಜನು ಸಾನನನ್ನು ಸಿಂಹಾಸನದ ಮೇಲೆ ತನ್ನ ಎಡ ಪಾರ್ಶ್ವದಲ್ಲಿ ಕುಳ್ಳಿರಿಸಿಕೊಂಡು, ಉತ್ತಮವಾದ ಕುದುರೆಗಳು, ಅಮೂಲ್ಯ ರತ್ನಾಭರಣಗಳು, ಲೋಹ ಕವಚಗಳು, ಜಿಲೆಯುಳ್ಳ ಉಡಿಗೆತೊಡಿಗೆಗಳು, ರತ್ನಖಚಿತ ಸಿಂಹಾಸನ ಮೊದಲಾದುವನ್ನು ಪಾರಿತೋಷಕವಾಗಿ ಕೊಟ್ಟನು. ಅಲ್ಲದೆ ಅವನು ಸಾನನನ್ನು ತನ್ನ ರಾಜ್ಯದ ಪೂರ್ವ ಪ್ರಾಂತದ ರಾಜ್ಯಪಾಲಕನನ್ನಾಗಿಯೂ ನಿಯಮಿಸಿದನು.

ರಾಜ ಮರ್ಯಾದೆ ಹೊಂದಿದ ಸಾನನು ಶಸ್ತ್ರ ಮತ್ತು ಶಾಸ್ತ್ರಗಳಲ್ಲಿ

ಪರಿಣತರಾದ ವಿದ್ವಾಂಸರನ್ನು ಜಾಬೂಲಿಗೆ ಬರಮಾಡಿಕೊಂಡು, ಜಾಲನಿಗೆ ವಿವಿಧ ಶಾಸ್ತ್ರಗಳನ್ನು ಮತ್ತು ಶಸ್ತ್ರ ವಿದ್ಯೆಯನ್ನು ಕಲಿಸುವ ಏರ್ಪಾಡು ಮಾಡಿ, ಅವನನ್ನು ಉಭಯ ವಿದ್ಯೆಗಳಲ್ಲಿ ಪರಿಣತನನ್ನಾಗಿ ಮಾಡಿದನು

ಹೀಗಿರಲು ಒಂದು ದಿನ ರಾಜನು ಕಳುಹಿದ ರಾಜದೂತನೊಬ್ಬನು ಜಾಬೂಲಿಗೆ ಆಗಮಿಸಿದನು. ಅವನು ರಕ್ಕಸರು ನೆಲಸಿರತಕ್ಕ ಮಜಂದ್ರ ಪ್ರದೇಶವನ್ನು ಗೆದ್ದು ಸ್ವಾಧೀನಪಡಿಸಿಕೊಳ್ಳಬೇಕೆಂಬ ರಾಜಾಜ್ಞೆಯನ್ನು ನಿವೇದಿಸಿದನು.

ಕಡಿದಾದ ಪರ್ವತ ಮಾರ್ಗದಲ್ಲಿ ತೆರಳಿ, ರಾಕ್ಷಸ ರಾಜ್ಯವನ್ನು ಪ್ರವೇಶಿಸಬೇಕಾಗಿದ್ದುದರಿಂದಲೂ ವಿಜಯ ಯಾತ್ರೆಯನ್ನು ಮುಗಿಸಿ ಮರಳಿ ಬರಲು ಅನೇಕ ತಿಂಗಳುಗಳು ಬೇಕಾಗಿದ್ದುದರಿಂದಲೂ ತಾನು ಜೈತ್ರ ಯಾತ್ರೆಯನ್ನು ಕೈಗೊಂಡು ನಾಡಿನಿಂದ ದೂರವಾದ ಸಂದರ್ಭದಲ್ಲಿ ರಾಜ್ಯ ಪಾಲನೆಯ ಹೊಣೆಯನ್ನು ಸಾಮನು ತನ್ನ ಮಗನಿಗೊಪ್ಪಿಸಿ ತಾನು ರಾಕ್ಷಸರೊಡನೆ ಹೋರಾಟಕ್ಕೆ ಹೊರಟನು.

ತಂದೆಯಿಂದ ರಾಜ್ಯಭಾರ ವಹಿಸಿದ ಜಾಲನು ರಾಜ್ಯಭಾರಕ್ಕೆ ಸಂಬಂಧಿಸಿದ ಪ್ರತಿಯೊಂದು ಕಾರ್ಯವನ್ನು ನಿಷ್ಠೆ ಮತ್ತು ವಿಚಕ್ಷಣತೆಗಳಿಂದ ನಿರ್ವಹಿಸಿದನು. ಮತ್ತು ಅದೇ ಕಾಲದಲ್ಲಿ ಅವನು ವಿವಿಧ ದೇಶಗಳಿಂದ ವಿದ್ಯಾಪರಿಣತರನ್ನು ಬರಮಾಡಿಕೊಂಡು ಅವರೊಡನೆ ಸಂವಾದಗಳನ್ನು ನಡೆಸಿ ತನ್ನ ಜ್ಞಾನ ಭಂಡಾರವನ್ನು ವಿಪುಲಗೊಳಿಸಿದನು

# ಎರಡು

ಸಾಮನಿಗೆ ಪೊಗದಿ ಸಲ್ಲಿಸುತ್ತಿದ್ದ ವಿದೂರ ಪ್ರಾಂತಗಳಲ್ಲಿ ಕಾಬೂಲು ಒಂದಾಗಿದ್ದಿತು. ಒಮ್ಮೆ ಪೊಗದಿ ವಸೂಲಿಗೆಂದು ಜಾಲನು ಪ್ರವಾಸವನ್ನು ಕೈಗೊಂಡು ಕಾಬೂಲಿಗೆ ಬಂದನು ಕಾಬೂಲನ್ನು ಮಿಹ್ರಾಬ ಎಂಬ ಹೆಸರಿನ ಪಾಳೆಯಗಾರನೊಬ್ಬನು ಆಳುತ್ತಿದ್ದನು. ಜಾಲನು ತನ್ನ ರಾಜಧಾನಿಗೆ ಆಗಮಿಸಿದ ವಾರ್ತೆಯನ್ನು ಕೇಳಿ ಮಿಹ್ರಾಬನು ನಗರದ ಹೊರವಲಯದಲ್ಲಿಯೇ ಜಾಲನನ್ನು ಎದುರುಗೊಂಡು ಗೌರವಿಸಿದನು. ಅತಿಥಿಯನ್ನು ಆದರೋಪಚಾರಗಳಿಂದ ಸತ್ಕರಿಸಿದ ಅನಂತರ ಮಿಹ್ರಾಬನು ತಾನು ಏರ್ಪಡಿ

ಸುವ ಔತಣದಲ್ಲಿ ಭಾಗವಹಿಸಬೇಕೆಂದು ಜಾಲನನ್ನು ಆಮಂತ್ರಿಸಿದನು.

ಆದರೆ ಜಾಲನು ಮಿಹ್ರಾಬನ ಔತಣದ ಆಮಂತ್ರಣವನ್ನು ಮನ್ನಿಸ ಲಿಲ್ಲ. ಮಿಹ್ರಾಬನು ನಾಗವಂಶಕ್ಕೆ ಸೇರಿದ ಪಾಳೆಯಗಾರನು. ತಂದೆ ನಾನ ಸೊಡನೆ ಕಾದುತ್ತಿಗುವ ರಕ್ಕಸರೂ ನಾಗಕುಲಕ್ಕೆ ಸೇರಿದವರು. ಆದ್ದರಿಂದ ಜಾಲನು ಆಮಂತ್ರಣವನ್ನು ತಿರಸ್ಕರಿಸಿ, "ನೀವು ಸರ್ಪ ಪೂಜಕರಾದುದ ರಿಂದ ನಿಮ್ಮ ಔತಣದ ಆತಿಥ್ಯವನ್ನು ನಾನು ಸ್ವೀಕರಿಸಲಾರೆ ಬೇರೆ ಯಾವ ವಿಧವಲ್ಲಾದರೂ ನನ್ನ ಸೇವೆ ನಿಮಗೆ ಅಗತ್ಯವಾದರ ಹರುಷದಿಂದ ಆ ಸೇವೆ ಕೈಕೊಳ್ಳುವೆನು." ಎಂದು ಮಾರ್ನುಡಿದನು. ತನ್ನ ಅಧಿರಾಜನ ಮಗನು ಈ ರೀತಿ ನುಡಿದುದನ್ನು ಕೇಳಿ ಮನಸ್ಸಿನಲ್ಲಿ ಖೇದಗೊಂಡರೂ ಹೊರಗೆ ತೋರಿಸಿ ಕೊಳ್ಳದೆ, ಮಿಹ್ರಾಬನು ಜಾಲನ ನಿವಾಸಕ್ಕೆ ಬೇಕಾದ ಸೌಕರ್ಯ ಗಳನ್ನು ಒದಗಿಸಿಕೊಟ್ಟು ಅವನ ಸೇವೆಗೆ ಸಿದ್ಧನಾಗಿ ನಿಂತನು. ಜಾಲನು ಮಿಹ್ರಾಬನ ಆತಿಥ್ಯವನ್ನು ಸ್ವೀಕರಿಸಿ, ಕೆಲವು ದಿನಗಳನ್ನು ಕಾಬೂಲಲ್ಲೇ ಕಳೆದನು ಜಾಲನ ರೂಪ ಗುಣಗಳನ್ನು ಕಂಡ ಮಿಹ್ರಾಬನಿಗೆ ಅವನ ವಿಷಯದಲ್ಲಿ ತುಂಬಾ ಮೆಚ್ಚಿಗೆಯಾಗಿತ್ತು

ಮಿಹ್ರಾಬನಿಗೆ ರುದಾಬೆಯೆಂಬ ಸುಂದರಿಯಾದ ಕುವರಿಯೊಬ್ಬಳಿ ದ್ದಳು ಅವಳ ಸೌಂದರ್ಯಾತಿಶಯವನ್ನು ಜಾಲನ ಗೆಳೆಯರು ಒಮ್ಮೆ ಜಾಲನ ಮುಂದೆ ಬಣ್ಣಿಸಿದರು. ಗೆಳೆಯರ ಬಣ್ಣನೆಯ ಮಾತು ಕೇಳಿ, ತರುಣ ಜಾಲನ ಮನಸ್ಸಿನಲ್ಲಿ ರುದಾಬೆಯ ಚಿತ್ರವೊಂದು ಮೂಡಿತು. ಅವನ ಜೀವ ಆಕೆಯ ದರ್ಶನಕ್ಕೋಸುಗ ಕಾತರಿಸತೊಡಗಿತು.

ಅದು ವಸಂತ ಕಾಲ. ಜಾಲನು ಪಾಳೆಯ ಹೂಡಿದ ನದಿಯ ಸಮೀ ಪದಲ್ಲಿ ಒಂದು ದಿನ ರುದಾಬೆ ಗೆಳತಿಯರೊಡನೆ ಗುಲಾಬಿ ಹೂಗಳನ್ನು ಕೊಯ್ಯುತ್ತಾ ಸಂಚರಿಸುತ್ತಿದ್ದಳು. ಅದೇ ವೇಳೆಯಲ್ಲಿ ಹುಲ್ಲುಗಾವಲಿನಲ್ಲಿ ಸಂಚರಿಸುತ್ತಿದ್ದ ಜಾಲನು ಹಕ್ಕಿಯೊಂದನ್ನು ಬಾಣ ಹೊಡೆದು ಕೆಡವಿದನು. ಆ ಹಕ್ಕಿ ರುದಾಬೆ ಸಂಚರಿಸುತ್ತಿದ್ದಲ್ಲಿ ಹೋಗಿ ಬಿತ್ತು. ಹಕ್ಕಿಯನ್ನು ಹೆಕ್ಕ ಲೆಂದು ಹೋದ ಸೇವಕನು ರುದಾಬೆಯನ್ನು ಮತ್ತು ಅವಳ ಗೆಳತಿಯರನ್ನು ನೋಡಿ, ಅವರು ಯಾರೆಂದು ತಿಳಿದುಕೊಂಡು ಹಿಂದಿರುಗಿ ಬಂದು ಜಾಲನಿಗೆ ತಿಳಿಸಿದನು. ರುದಾಬೆಯನ್ನು ತಾನು ಸ್ವತಃ ನೋಡದಿದ್ದರೂ ಜಾಲನ ಮನಸ್ಸು ಅವಳಲ್ಲಿ ಮೊದಲೇ ನೆಲಸಿದ್ದಿತಷ್ಟೆ! ಆದುದರಿಂದ ಅವನು

ರುದಾಬೆ ಗುಲಾಬಿಹೂ ಕೊಯ್ಯುತ್ತ ನದೀತೀರವಲ್ಲಿ ಸಂಚರಿಸುತ್ತಿರುವ ಸುದ್ದಿ ಕೇಳಿ ಎರಡು ಉಂಗುರಗಳನ್ನು ಉಡುಗೊರೆಯೆಂದು ಸೇವಕನ್ನ ಕೈಯಲ್ಲಿ ಆಕೆಗೆ ಕಳುಹಿಸಿಕೊಟ್ಟನು.

ಜಾಲನು ಕಳುಹಿಸಿಕೊಟ್ಟ ಉಂಗುರಗಳನ್ನು ರುದಾಬೆ ಪ್ರೀತಿಯಿಂದ ಸ್ವೀಕರಿಸಿದಳು. ತನ್ನ ತಂದೆಯ ಬಾಯಿಯಿಂದ ಜಾಲನ ಗುಣ ಶೀಲಗಳ ವರ್ಣನೆ ಕೇಳಿದಾಗಲೇ ಆಕೆಗೆ ಅವನಲ್ಲಿ ಮನಸ್ಸು ನೆಟ್ಟಿತ್ತು. ಹೀಗಿರುವಾಗ ಒಂದು ದಿನ ಜಾಲನು ಅರಮನೆಯ ಎದುರಿನಲ್ಲಿ ಸಂಚರಿಸುತ್ತಿದ್ದಾಗ ಅರಮನೆಯ ಮೇಲ್ಮಾಳಿಗೆಯಲ್ಲಿದ್ದ ರುದಾಬೆಯನ್ನು ಕಂಡನು. ರುದಾಬೆಯೂ ಜಾಲನನ್ನು ನೋಡಿದಳು. ಅವರಲ್ಲಿ ಮೊದಲೇ ಮೊಳೆತಿದ್ದ ಪ್ರೇಮ ಈಗ ಚಿಗುರೊಡೆಯಿತು. ರುದಾಬೆ ತನ್ನ ಉದ್ದವಾದ ಕೂದಲುಗಳಿಗೆ ಜಾಲನು ಕೊಟ್ಟಿದ್ದ ಉಂಗುರಗಳನ್ನು ಕಟ್ಟಿ, ಆ ಕೂದಲನ್ನು ಕೆಳಗೆ ಇಳಿಯ ಬಿಟ್ಟು, ಆ ಕೂದಲಿನ ಮೂಲಕ ಮೇಲೆ ಏರಿ ಬರಲು ಸೂಚಿಸಿದಳು. ಆ ಸೂಚನೆಯಂತೆ ಜಾಲನು ಮಾಳಿಗೆಯನ್ನೇರಿದನು. ರುದಾಬೆ ಜಾಲನನ್ನು ಪ್ರೇಮಾದರಗಳಿಂದ ಸ್ವಾಗತಿಸಿದಳು ಪ್ರಣಯಿಗಳಿಗೆ ಪರಸ್ಪರ ದರ್ಶನ ಪರಿಚಯಗಳಾದುವು ರುದಾಬೆಯ ಚೆಲುವು ಜಾಲನ ಮನಸ್ಸನು ಸೆಳೆಯಿತು ಜಾಲನ ಆಕಾರ ಸೌಷ್ಠವ, ಸೌಂದರ್ಯ ಮತ್ತು ಶಕ್ತಿಗಳು ರುದಾಬೆಯ ಹೃದಯವನ್ನು ಸೆಳೆದುವು. ಒಲವಿನ ತಂತು ಎರಡು ಹೃದಯಗಳನ್ನು ಒಂದುಗೂಡಿಸಿತು ಈರ್ವರೂ ವಿವಾಹಿತರಾಗಲು ಬಯಸಿದರು.

ಆ ದಿನ ಇರುಳು ಜಾಲನು ತಾನು ರುದಾಬೆಯಲ್ಲಿ ಅನುರಕ್ತನಾದ ಸಂಗತಿಯನ್ನು ತನ್ನ ಜತೆಗಾರರಿಗೆ ತಿಳಿಸಿದನು. ಆದರೆ ಅವರು ಸಾಮನ ಕುಮಾರನು ನಾಗಕುಲದ ಹೆಣ್ಣನ್ನು ಕೈಹಿಡಿವುದು ಸರಿಯಲ್ಲವೆಂದು ತಿಳಿಸಿದರು. ಅಲ್ಲದೆ ಅವರು ಮಜಂದ್ರ ಪ್ರಾಂತದಲ್ಲಿ ರಕ್ಕಸರನ್ನು ಸದೆಬಡಿಯುತ್ತಿದ್ದ ಸಾಮನಿಗೆ ಪತ್ರದ ಮೂಲಕ ಈ ವಾರ್ತೆಯನ್ನು ತಿಳಿಸಿದರು

ಮಗನು ನಾಗಕುಲದ ಹೆಣ್ಣಿನಲ್ಲಿ ಅನುರಕ್ತನಾದುದು ಸಾಮನನ್ನು ಚಿಂತೆಯ ಕಡಲಲ್ಲಿ ಮುಳುಗಿಸಿತು ಅವನು ದೈವಜ್ಞರನ್ನೂ ವಿದ್ವಾಂಸರನ್ನೂ ಕರೆಯಿಸಿ ಅವರ ಸಲಹೆಯನ್ನು ಕೇಳಿದನು. ಅವರು ಜ್ಯೋತಿಷ ಶಾಸ್ತ್ರದ ಆಧಾರದಿಂದ ಜಾಲನು ರುದಾಬೆಯನ್ನು ಮದುವೆಯಾಗುವುದರ

ಪರಿಣಾಮವೇನೆಂಬುದನ್ನು ಪರಿಶೀಲಿಸತೊಡಗಿದರು. ತಮ್ಮ ಅರಿವಿನಿಂದ ಭವಿಷ್ಯದ ಗರ್ಭವನ್ನು ಭೇದಿಸಿ ಮುಂದಾಗುವುದನ್ನು ತಿಳಿಯಲು ಹವಣಿಸಿ ದರು. ಕೊನೆಗೆ ಅವರು "ಮಹಾಪ್ರಭು, ಗ್ರಹ ನಕ್ಷತ್ರಗಳು ನಿನಗೆ ಶುಭ ಸಂದೇಶವನ್ನು ಸಾರುತ್ತಿವೆ ಈ ವಿವಾಹ ಸೌಭಾಗ್ಯದಾಯಕವಾಗಿರುವುದ ರಿಂದ ನಿನ್ನ ಮಗನು ರುದಾಬೆಯ ಕೈಹಿಡಿಯುವುದನ್ನು ನೀನು ವಿರೋಧಿಸ ಬೇಡ. ಆಕೆಯ ಬಸಿರಲ್ಲಿ ಮಹಾವೀರನೆಂದು ಖ್ಯಾತಿ ಪಡೆಯುವ ಮಗ ನೊಬ್ಬನು ಉದಯಿಸುವನು ಅವನ ತೋಳ್ಬಲದ ನೆರವಿನಿಂದ ಇರಾನಿ ಗಳು ತಾರ್ತರರನ್ನು ಗೆಲ್ಲುವುದು ಮಾತ್ರವಲ್ಲದೆ ಇಡೀ ಪ್ರಪಂಚವನ್ನೇ ಸ್ವಾಧೀನಪಡಿಸಿಕೊಳ್ಳುವರು". ಎಂಬ ಭವಿಷ್ಯವನ್ನು ತಿಳಿಸಿದರು.

ತನ್ನ ಪೀಳಿಗೆಯಲ್ಲಿ ಇನ್ನೊಬ್ಬ ಮಹಾವೀರನು ಉದಯಹೊಂದುವ ನೆಂಬ ಭವಿಷ್ಯವಾಣಿಯನ್ನು ಕೇಳಿ ಸಾಮನು ಹಿರಿಹಿಗ್ಗಿದನಾಗಲೂ, "ನೀನು ಈಗಲೇ ಪ್ರೇಮಪಾಶದಿಂದ ಬಂಧಿತನಾಗುವುದು ಉಚಿತವಲ್ಲ. ನೀನು ರುದಾಬೆಯನ್ನು ಮದುವೆಯಾಗುವ ಮೊದಲು ನಾವು ರಾಜಾ ಮಿನುಚೆರನ ಅನುಮತಿಯನ್ನು ಪಡೆಯುವುದು ಅಗತ್ಯ. ಆದುದರಿಂದ ತುಸು ತಡೆ." ಎಂಬ ಸಂದೇಶವನ್ನು ಮಗನಿಗೆ ಕಳುಹಿಸಿದನು.

ತನ್ನ ಪೂರ್ವ ವೈರಿಗಳಾದ ನಾಗಕುಲದವರೊಡನೆ ಸಾಮನ ಕುಟುಂಬ ರಕ್ತಸಂಬಂಧ ಬೆಳೆಸಲಿಚ್ಛಿಸುತ್ತಿದೆ ಎಂಬ ವಾರ್ತೆ ರಾಜಾ ಮಿನುಚೆರನ ಮನಶ್ಶಾಂತಿಯನ್ನು ಭಂಗಪಡಿಸಿತು. ಅವನು ರಾಜಕಾರ್ಯಾಲೋಚನೆ ಗೆಂದು ಸಾಮನನ್ನು ಆಸ್ಥಾನಕ್ಕೆ ಬರಮಾಡಿಕೊಂಡನು. ರಕ್ಕಸರನ್ನೆಲ್ಲಾ ಸದೆಬಡಿದು ವಿಜಯಶ್ರೀಯೊಡನೆ ಸಾಮನು ರಾಜಾಸ್ಥಾನಕ್ಕೆ ಆಗಮಿಸಿದನು. ಸಾಮನ ಸಾಹಸಕೃತ್ಯಗಳು ರಾಜನನ್ನು ನಾಗಕುಲದ ಮಿಹ್ರಾಬನ ವಿನಾಶ ಕ್ಕಿರುವ ಹಂಚಿಕೆಯನ್ನೆಸಗಲು ಪ್ರೇರಿಸಿದುವು. ಸಾಮನು ಮಗನ ಅಪೇಕ್ಷೆ ಯನ್ನು ರಾಜನಿಗೆ ಅರಿಕೆಮಾಡಿ ಅವನ ಅನುಮತಿಯನ್ನು ಪಡೆಯಲು ಹವಣಿಸಿದನು. ಆದರೆ ರಾಜನು ಆ ಮಾತಿಗೆ ಕಿವಿಗೊಡದೆ ಅಧಿಕ ರೋಷ ದಿಂದ "ಕಾಬೂಲಿನ ಮೇಲೆ ಧಾಳಿ ನಡೆಸಿ, ನಾಡನ್ನೆಲ್ಲಾ ಸುಟ್ಟುರುಹಿ ಮಿಹ್ರಾಬನನ್ನೂ ನಾಗಕುಲಧವರನ್ನೂ ಧ್ವಂಸಮಾಡಲೇ ಬೇಕು." ಎಂದು ಸಾಮನಿಗೆ ಆಣತಿಯಿತ್ತನು. ಈ ರಾಜಾಜ್ಞೆಯನ್ನು ಕೇಳಿ ಸಾಮನಿಗೆ ದುಃಖ ವಾಯಿತು. ಅವನ ಮೋರೆ ಬಾಡಿತು. ಅವನು ಬೇರೆ ಉಪಾಯಗಾಣದೆ

[illegible] ನೆರವೇರಿಸಲು ಅಲ್ಲಿಂದ ತೆರಳಿದನು

ಕಾಬೂಲನ್ನು ಧ್ವಂಸಮಾಡಲು ಮಿನುಚೆರನ ಆಜ್ಞೆಯಾಗಿದೆ ಎಂಬ ಸುದ್ದಿ ಕಾಬೂಲನ್ನು ಸೇರಿತು. ಈ ಸುದ್ದಿ ಜಾಲನ ಕಿವಿಗೆ ಬಿದ್ದಕೂಡಲೇ ಜಾಲನು ಹಗಲಿರುಳೆನ್ನದೆ ಪಯಣಗೈದು ತಂದೆಯ ಬಳಿ ಸೇರಿ ರುದಾಬೆಯನ್ನು ವರಿಸಲು ಅನುಮತಿಸಬೇಕೆಂದು ತಂದೆಯ ಹೃದಯ ಕರಗುವಂತೆ ಪ್ರಾರ್ಥಿಸಿದನು ಆಗ ಸಾಮನು ರಾಜನಿಗೊಂದು ಪತ್ರವನ್ನು ಬರೆದು ಮಗನ ವಶದಲ್ಲಿ ಕೊಟ್ಟು ರಾಜಾಸ್ಥಾನಕ್ಕೆ ಕಳುಹಿದನು

ತನ್ನ ನಾಡು ಇರಾನಿಗಳ ಧಾಳಿಯಿಂದ ನಾಶವಾಗುವುದೆಂದು ಮಿಹ್ರಾಬನು ಭಯದಿಂದ ಕಂಪಿಸಿದನು. ಇದನ್ನು ಕೇಳಿ ಕಾಬೂಲನ್ನು ನಾಶಮಾಡಬಾರದೆಂದು ಚಕ್ರವರ್ತಿಗೆ ಸಲಹೆ ಕೊಡುವಂತೆ ಸಾಮನನ್ನು ಪ್ರಾರ್ಥಿಸಲು ಮಿಹ್ರಾಬನ ರಾಣಿ ನಿರ್ಧರಿಸಿದಳು. ಸುಂದರಿಯರಾದ ನರ್ತಕಿಯರು, ಆಭರಣಗಳು, ಉತ್ತಮ ದ್ರಾಕ್ಷಾರಸ, ಕರ್ಪೂರ, ಕಸ್ತೂರಿ ಮೊದಲಾದ ಸುಗಂಧ ದ್ರವ್ಯಗಳು ಇತ್ಯಾದಿ ಕಾಣಿಕೆಗಳೊಡನೆ ಅವಳು ಉತ್ತಮಾಶ್ವವನ್ನೇರಿ ಜಾಬೂಲಿಗೆ ಆಗಮಿಸಿದಳು

ರಾಜನ ಆಜ್ಞೆ ಮತ್ತು ಮಗ ಜಾಲನ ಮದುವೆ ಈ ಎರಡು ಕಾರ್ಯಗಳಲ್ಲಿ ಯಾವುದನ್ನು ಕೈಗೊಳ್ಳಬೇಕೆಂದು ಸಾಮನ ಮನಸ್ಸು ತೊಳಲಾಡಿತು ಅವನು ಬಹಳ ಆಲೋಚನೆ ಮಾಡಿದ ಅನಂತರ ರಾಣಿಯ ಕಾಣಿಕೆಗಳನ್ನು ಸ್ವೀಕರಿಸಿ, ಅವಳ ಕೋರಿಕೆಯನ್ನು ಈಡೇರಿಸಲು ಪರಿಶ್ರಮಿಸುವೆನೆಂದು ಆಕೆಗೆ ವಾಗ್ದಾನ ಮಾಡಿದನು.

ಜಾಲನು ಮಿನುಚೆರನನ್ನು ಕಂಡು, ತಂದೆ ಕೊಟ್ಟಿದ್ದ ಪತ್ರವನ್ನು ಒಪ್ಪಿಸಿದನು. ಆ ಪತ್ರದಲ್ಲಿ ಸಾಮನು ಜಾಲನ ಬಾಳ್ವೆ ಮತ್ತು ಬಯಕೆಗಳನ್ನು ಉದಾರ ಮನಸ್ಸಿನಿಂದ ಪರ್ಯಾಲೋಚಿಸಬೇಕೆಂದು ಅರಿಕೆ ಮಾಡಿಕೊಂಡಿದ್ದನು.

"ನಿನ್ನ ತಂದೆಯ ಪತ್ರ ಹಳೆಯ ಹುಣ್ಣನ್ನು ಕೆದಕಿದೆ. ಆದರೂ ಆ ವೀರನ ಕೋರಿಕೆಯನ್ನು ಈಡೇರಿಸುವೆನು ನಿನ್ನ ಬಯಕೆ ಈಡೇರುವುದು. ಆದರೆ ನಾನು ವಿದ್ವಾಂಸರೊಡನೆ ಮಾತಾಡಿದ ಮೇಲೆ ನನ್ನ ಅನುಮತಿ ದೊರಕುವುದು." ಎಂದು ಪತ್ರವನ್ನೋದಿದ ಅರಸನು ಉತ್ತರವಿತ್ತು ಜಾಲನನ್ನು ವಿಶ್ರಾಂತಿಗೆ ಕಳುಹಿಸಿದನು.

ರಾಜನ ಆಜ್ಞೆಯಂತೆ ಜ್ಯೋತಿಷಿಗಳು ವ್ಯೋಮ ಪಥದಲ್ಲಿ ಚಲಿಸುವ ನಕ್ಷತ್ರಗಳ ಮತ್ತು ಗ್ರಹಗಳ ಪರಿಶೀಲನೆಯನ್ನು ಮೂರು ಹಗಲು ಮೂರು ಇರುಳು ನಡೆಸಿದರು. ಎಲ್ಲಾ ಲಕ್ಷಣಗಳು ಅನುಕೂಲವಾಗಿ ತೋರಿ ಬಂದುವು. ಅವರು "ಮಹಾಪ್ರಭು, ನಕ್ಷತ್ರಗಳ ಚಲನೆಯಿಂದ ಮಿಹ್ರಾಬನ ಕುಮಾರಿಯೊಡನೆ ನಡೆಯಲಿರುವ ಜಾಲನ ಮದುವೆಯ ಪರಿಣಾಮ ವೇನೆಂಬುದನ್ನು ನಾವು ತಿಳಿದೆವು ರುದಾಬೆಯ ಒಡಲಿಂದ ಮಹಾವೀರ ನಾಗುವ ಮಗನೊಬ್ಬನು ಜನಿಸುವನು. ಅವನು ಸಿಂಹವನ್ನು ಜೀವ ಸಹಿತವಾಗಿ ಹಿಡಿದು ತರಬಲ್ಲ ಮಹಾಧೀರನಾಗುವನು. ಕೊಳುಗುಳ ದಲ್ಲಾಗಲಿ, ಔತಣದಲ್ಲಾಗಲಿ ಅವನಿಗೆ ನಾಟಿಯಾಗಬಲ್ಲವನು ಬೇರೊಬ್ಬ ನಿರಲಾರನು" ಎಂದು ಭವಿಷ್ಯ ನುಡಿದರು. ವಿದ್ವಾಂಸರ ನುಡಿಗೇಳಿ ಹರುಷ ಗೊಂಡ ರಾಜನು, "ನೀವು ಕಂಡ ಶುಭಶಕುನಗಳನ್ನು ನಾನು ಹೇಳುವ ತನಕ ಗೋಪ್ಯವಾಗಿರಿಸಿರಿ ಜಾಲನಿಗೆ ತೊಡಕಿನ ಪ್ರಶ್ನೆಗಳನ್ನು ಹಾಕಿ ಅವನ ಬುದ್ಧಿಶಕ್ತಿಯನ್ನು ಪರೀಕ್ಷಿಸಿರಿ" ಎಂದನು

ಕೂಡಲೇ ನಾಲ್ವರು ವಿದ್ವಾಂಸರು ಒಟ್ಟು ಕೂಡಿ, ಉತ್ತರ ಹೇಳಲು ಬಹು ತೊಡಕಿನ ಸಮಸ್ಯೆಗಳನ್ನು ತಯಾರಿಸಿ, ಜಾಲನನ್ನು ತಮ್ಮ ಬಳಿಗೆ ಬರಮಾಡಿಕೊಂಡರು. ಮೊದಲನೆಯ ಪ್ರಾಜ್ಞನು, "ಒಂದು ಮೈದಾನದಲ್ಲಿ ಹನ್ನೆರಡು ಚೆಲುವಾದ ಮರಗಳಿವೆ. ಅವುಗಳಲ್ಲಿ ಪ್ರತಿಯೊಂದಕ್ಕೂ ಮೂವತ್ತು ಶಾಖೆಗಳಿವೆ. ಈ ಕೊಂಬೆಗಳು ಬೆಳೆವುದೂ ಇಲ್ಲ; ಒಣಗುವುದೂ ಇಲ್ಲ. ಹಾಗಾದರೆ ಆ ಮರಗಳು ಯಾವುವು?" ಎಂದು ಪ್ರಶ್ನಿಸಿದನು.

ಎರಡನೆಯ ಪಂಡಿತನು. "ನಾನು ಎರಡು ಉತ್ತಮಾಶ್ವಗಳನ್ನು ನೋಡುತ್ತಿರುವೆನು. ಅವುಗಳಲ್ಲಿ ಒಂದು ವಜ್ರದಂತೆ ಹೊಳಪುಳ್ಳುದು; ಇನ್ನೊಂದು ಕಾಡಿಗೆಯಂತೆ ಕಪ್ಪಾದುದು. ಈ ಎರಡು ಕುದುರೆಗಳೂ ಎಡೆ ಬಿಡದೆ ಓಡುತ್ತಿವೆ. ಆದರೆ ಓಟದಲ್ಲಿ ಒಂದು ಇನ್ನೊಂದನ್ನು ಗೆಲ್ಲಲಾರದು. ಆ ಕುದುರೆಗಳು ಯಾವುವು?" ಎಂಬ ಸಮಸ್ಯೆಯನ್ನು ಜಾಲನ ಮುಂದಿರಿಸಿದನು.

ಮೂರನೆಯ ಶಾಸ್ತ್ರಜ್ಞನು "ರಾಜನ ಅರಮನೆಯ ಮುಂದೆ ಸಂಚರಿಸುತ್ತಿರುವ ಮೂವತ್ತು ಮಂದಿ ಸರದಾರರನ್ನು ನೋಡಿದೆ. ಅವರಲ್ಲಿ ಇಪ್ಪತ್ತೊಂಭತ್ತು ಮಂದಿ ಎಣಿಸಲು ಸಿಗುವರು. ಒಬ್ಬನು ಸಿಗುವುದಿಲ್ಲ." ಎಂಬ

ಒಗಟನ್ನು ಹೇಳಿದನು.

ನಾಲ್ಕನೆಯ ವಿದ್ವಾಂಸನು "ಒಂದು ಅಂದವಾದ ಉದ್ಯಾನವಿದೆ. ಆ ಉದ್ಯಾನದಲ್ಲಿ ಬಲಶಾಲಿಯಾದ ಒಬ್ಬನು ಒಂದು ಹರಿತವಾದ ಕುಡುಗೋಲನ್ನು ಹಿಡಿದುಕೊಂಡು ಹುಲ್ಲು, ಪೊದೆ, ಹೂಗಿಡ ಮೊದಲಾದ ಸಸ್ಯಾವಳಿಯನ್ನು ತರಿಯುತ್ತಿರುವನು ಕೆಲವು ಗಿಡಗಳನ್ನಾದರೂ ಉಳಿಸು ಎಂದು ಅವನನ್ನು ಪ್ರಾರ್ಥಿಸಿದರೂ ಸಹ ಅವನು ಆ ನುಡಿಗಳನ್ನು ಕಿವಿಗಳಿಗೆ ಹಾಕಿಕೊಳ್ಳದೆ ತರಿದೊಟ್ಟುತ್ತಿದ್ದಾನೆ? ಆ ಬಲಶಾಲಿ ಯಾರು?" ಎಂಬ ಪ್ರಶ್ನೆಯನ್ನು ಜಾಲನಿಗೆ ಕೇಳಿದನು.

ಈ ಪ್ರಶ್ನೆಗಳನ್ನು ಕೇಳಿ ಜಾಲನು ಸ್ವಲ್ಪ ಹೊತ್ತು ಯೋಚಿಸಿದನು. ಅವನ ಬುದ್ಧಿ ಪ್ರಶ್ನೆಗಳನ್ನೆಲ್ಲಾ ಮೆಲುಕು ಹಾಕಿತು. ಪಂಡಿತರು ಹೆಣೆದ ಒಗಟುಗಳ ಬಲೆಯನ್ನು ಭೇದಿಸಿತು. ಅವನು ಸ್ಪಷ್ಟ ವಾಣಿಯಲ್ಲಿ "ಬಯಲಿನಲ್ಲಿರತಕ್ಕ ಹನ್ನೆರಡು ಸುಂದರ ವೃಕ್ಷಗಳು ವರ್ಷದ ಹನ್ನೆರಡು ತಿಂಗಳುಗಳು. ಪ್ರತಿ ಮರದಲ್ಲಿ ಇರುವ ಮೂವತ್ತು ಕೊಂಬೆಗಳು ಪ್ರತಿಯೊಂದು ತಿಂಗಳಲ್ಲಿರುವ ಮೂವತ್ತು ದಿನಗಳಾಗಿವೆ. ಈ ಮೂವತ್ತು ದಿನಗಳು ಹೆಚ್ಚುಕಡಿಮೆಯಾಗವು." ಎಂದು ಮೊದಲನೆಯ ಪ್ರಶ್ನೆಯನ್ನು ಬಗೆಹರಿಸಿದನು

"ವಜ್ರದಂತೆ ಹೊಳಪುಳ್ಳ ಕುದುರೆ ಹಗಲು; ಕಾಡಿಗೆಯಂತೆ ಕಪ್ಪಾದ ಕುದುರೆ ಇರುಳು. ಹಗಲು ಕಳೆದರೆ ಇರುಳು ಬರುವುದು, ಇರುಳು ಕಳೆದರೆ ಹಗಲು ಬರುವುದು. ಹೀಗೆ ಅವು ವೇಗವಾಗಿ ಚಲಿಸುತ್ತಿರುತ್ತವೆ ಅವುಗಳ ಓಟದ ಸ್ಪರ್ಧೆ ಕೊನೆಗೊಳ್ಳದ ಕಾರ್ಯವಾಗಿದೆ." ಎಂದು ಹೇಳಿ ಜಾಲನು ಎರಡನೆಯ ಸಮಸ್ಯೆಯನ್ನೂ ಬಿಡಿಸಿದನು.

"ರಾಜನ ಅರಮನೆಯ ಮುಂದೆ ಸಂಚರಿಸುವ ಮೂವತ್ತು ಮಂದಿ ಸರದಾರರು ತಿಂಗಳಿನಲ್ಲಿರುವ ಮೂವತ್ತು ದಿನಗಳು. ಇಪ್ಪತ್ತೊಂಭತ್ತು ದಿನ ಚಂದ್ರನು ತೋರುವನು. ಮೂವತ್ತನೆಯ ದಿನ ಅಮಾವಾಸ್ಯೆಯಂದು ಚಂದ್ರನು ಗೋಚರಿಸನು. ಆದುದರಿಂದಲೇ ಮೂವತ್ತನೆಯ ಸರದಾರನು ನಮ್ಮ ದೃಷ್ಟಿಗೆ ಬೀಳುವುದಿಲ್ಲ." ಎಂದು ಅವನು ಮೂರನೆಯ ಒಗಟನ್ನೂ ಒಡೆದನು.

"ಹುಲ್ಲು, ಪೊದೆ ಮತ್ತು ಹೂಗಿಡಗಳಿಂದ ಕೂಡಿದ ಉದ್ಯಾನ ಜನನಿಬಿಡವಾದ ಈ ಪ್ರಪಂಚವಾಗಿದೆ. ತೋಟದಲ್ಲಿರುವ ಸಸ್ಯಗಳು ಪ್ರಪಂಚದ

ಜನರಾಗಿರುವರು. ಎಲ್ಲಾ ಸಸ್ಯಗಳನ್ನೂ ಕುಡುಗೋಲಿನಿಂದ ತರಿದು ನಾಶ ಪಡಿಸುತ್ತಿರುವ ಶಕ್ತಿಶಾಲಿ ಕಾಲಪುರುಷನಾಗಿರುವನು." ಎಂದು ಜಾಲನು ವಿದ್ವಾಂಸರ ಕೊನೆಯ ಪ್ರಶ್ನೆಯನ್ನು ಉತ್ತರಿಸಿದನು.

ಜಾಲನ ಕುಶಾಗ್ರ ಬುದ್ಧಿಯನ್ನು ಕಂಡು ರಾಜನೂ ವಿದ್ವಾಂಸರೂ ಸಂತೋಷಭರಿತರಾದರು ರಾಜನು ಧೀರರಾದ ಕೆಲವು ಮುಂದಿ ಯೋಧರಿಗೆ ಆಯುಧಪಾಣಿಗಳಾಗಲು ಆಜ್ಞಾಪಿಸಿದನು ಈ ಯೋಧರೊಡನೆ ಕದನ ಸ್ಪರ್ಧೆ ನಡೆಸಲು ಅರಸನು ಜಾಲನಿಗೆ ಅಪ್ಪಣೆ ಮಾಡಿದನು ಶಕ್ತಿ ಮತ್ತು ಕಲಿತನಗಳಿಂದ ಕೂಡಿದ ಈ ಯೋಧರೊಡನೆ ಹೋರಾಡಿ ತನ್ನ ಶಕ್ತಿ ಮತ್ತು ಯುಕ್ತಿಗಳನ್ನು ಒರಗೆ ಹಚ್ಚಲು ಜಾಲನು ಸಿದ್ಧನಾದನು. ಅವನು ಕರ ವಾಳವನ್ನೆತ್ತಿ ಕಾಳಗಕ್ಕೆ ಅಣಿಯಾದ ಯೋಧರ ಮೇಲೆ ಆಕ್ರಮಣ ನಡೆಸಿ ದನು. ಕುದುರೆಯೇರಿದ್ದ ಅವನು ವಿರೋಧಿಯೊಬ್ಬನ ಸೊಂಟದ ಪಟ್ಟಿ ಯನ್ನು ಹಿಡಿದು ಒಂದು ಕಡ್ಡಿಯನ್ನು ಎತ್ತುವಷ್ಟು ಸುಲಭವಾಗಿ ಮೇಲ ಕ್ಕೆತ್ತಿ ನೆಲದ ಮೇಲೆ ಒಗೆದನು.

ಈ ಅಚ್ಚರಿಯ ನೋಟವನ್ನು ನಿರೀಕ್ಷಿಸುತ್ತಿದ್ದ ಪ್ರೇಕ್ಷಕರು "ಈ ಜಗ ತ್ತಿನ ಅತ್ಯುತ್ತಮ ವೀರನೆಂದರೆ ಜಾಲನೇ ಸರಿ!" ಎಂದು ತರುಣ ವೀರನ ಮೇಲೆ ಹೊಗಳಿಕೆಯ ಮಳೆಯನ್ನು ಸುರಿಸಿದರು.

ಹೀಗೆ ರಾಜನು ಏರ್ಪಡಿಸಿದ ಪರೀಕ್ಷೆಗಳಲ್ಲೆಲ್ಲಾ ಜಾಲನು ವಿಜಯಿ ಯಾಗಿ, ರಾಜನಿಂದ ಪ್ರಶಂಸೆಯನ್ನು ಮತ್ತು ಪಾರಿತೋಷಕಗಳನ್ನೂ ಮದುವೆಗೆ ಒಪ್ಪಿಗೆಯನ್ನೂ ಪಡೆದು ತನ್ನ ಊರಿಗೆ ಮರಳಿದನು ಮತ್ತೆ ಜಾಬೂಲಿನಲ್ಲಿ ಅತಿ ವೈಭವದಿಂದ ರುದಾಬೆಯೊಡನೆ ಅವನ ವಿವಾಹವೂ ನಡೆಯಿತು. ತಂದೆ ಸಾಮನು ಈ ಶುಭಸಮಾರಂಭವನ್ನು ನಡೆಸಿ ಸಂತೋಷ ಸಾಗರದಲ್ಲಿ ತೇಲಾಡಿದನು.

ನವ ದಂಪತಿಗಳು ಕೆಲಕಾಲ ಸುಖಸಾಮ್ರಾಜ್ಯದಲ್ಲಿ ವಿಹರಿಸಿದರು. ವಿದ್ವಾಂಸರು ಮತ್ತು ದೈವಜ್ಞರು ಉಜ್ವಲ ಭವಿಷ್ಯವುಳ್ಳದೆಂದು ನುಡಿದಿದ್ದ ಕೂಸನ್ನು ರುದಾಬೆ ತನ್ನ ಬಸಿರಲ್ಲಿ ತಳೆದಳು. ಆದರೆ ತಿಂಗಳು ತುಂಬುತ್ತಾ ಬಂದಂತೆ ಅವಳ ಆರೋಗ್ಯ ಶಿಥಿಲವಾಗತೊಡಗಿತು. ಆಕೆಗೆ ನಿದ್ರಿಸಲೂ ವಿಶ್ರಮಿಸಲೂ ಆಗುತ್ತಿರಲಿಲ್ಲ. ಜಾಲನೂ ಅವನ ಅತ್ತೆಯೂ ರುದಾಬೆಯ ಬೇನೆಯನ್ನು ಕಂಡು ಚಿಂತೆಗೊಳಗಾದರು.

ಹೀಗೆ ತನ್ನ ಸಂಸಾರವನ್ನು ಚಿಂತೆ ಮತ್ತು ಸಿರಾಶೆಗಳ ಕಾರ್ಮು ಗಿಲು ಕವಿದಾಗ ಜಾಲನಿಗೆ ಹಿಂದೆ ಸಿಮುರಾಗ ಪಕ್ಷಿ ತನಗೆ ಕೊಟ್ಟ ಗರಿಗಳ ನೆನಪಾಯಿತು. ಅವನು ತನ್ನ ಭಂಡಾರದಲ್ಲಿ ಜೋಪಾನವಾಗಿ ಇರಿಸಿದ್ದ ಗರಿಗಳಲ್ಲಿ ಒಂದನ್ನು ತೆಗೆದು ಅಗ್ನಿಗೆ ಸಮರ್ಪಿಸಿದನು. ಕೂಡಲೇ ಸಿಮು ರಾಗ ಪಕ್ಷಿ ಜಾಲನಿಗೆ ಪ್ರತ್ಯಕ್ಷವಾಯಿತು!

"ವೀರನ ಕಣ್ಣುಗಳಿಂದೇಕೆ ನೀರು ಹರಿಯುತ್ತಿದೆ? ಬಲಶಾಲಿಗಳಲ್ಲಿ ಬಲ್ಲಿದನೆನಿಸುವ ಕುಮಾರನು ಉದಯಿಸಲಿರುವನು. ಚಿಂತೆ ಬೇಡ ಈ ಕಾಯಿಯನ್ನು ತಗೆದುಕೋ. ಅದನ್ನು ಹಾಲಿನಲ್ಲಿ ಅರೆದು ಕಸ್ತೂರಿ ಬೆರಸಿ ಗರ್ಭಿಣಿಗೆ ಕೊಟ್ಟರೆ ಸುಖವಾಗುವದು". ಎಂದು ನುಡಿದು ಆ ಅದ್ಭುತ ಪಕ್ಷಿ ಮಾಯವಾಯಿತು. ಜಾಲನು ಪಕ್ಷಿ ಹೇಳಿದ ಮದ್ದನ್ನು ತಯಾರಿಸಿ ತನ್ನ ಮಡದಿಗೆ ಕುಡಿಸಿದನು ಔಷಧಿಯ ಪ್ರಭಾವದಿಂದ ರುದಾಬೆ ನೋವನ್ನು ಮರೆತು ಸುಖನಿದ್ರೆ ಮಾಡಿದಳು. ಮುಂದೆ ಅವಳು ಸುಖ ವಾಗಿ ಗಂಡು ಮಗುವನ್ನು ಹೆತ್ತಳು. ಆ ಮಗು ಉದ್ಯಾನದ ಕುಸುಮ ರಾಜಿಯಂತೆ ಸುಂದರವಾಗಿತ್ತು ನಿದ್ರೆಯಿಂದ ತಾಯಿ ಎಚ್ಚತ್ತಾಗ ದಾದಿ ಶಿಶುವನ್ನು ಆಕೆಗೆ ತೋರಿಸಿದಳು ಕಂದನ ಮೊಗವನ್ನು ಕಂಡೊಡನೆ ತಾಯಿಯ ಬೆಸಲ ಬೇನೆ ಮಾಯವಾಗಿ ಮೊಗದಲ್ಲಿ ಮಂದಹಾಸ ಲಾಸ್ಯವಾ ಡಿತು. ಸುಂದರ ಬಾಲಕನನ್ನು ಕಂಡು ಅವಳು ಹಿರಿಹಿಗ್ಗಿದಳು. ಅವಳು ಶಿಶುವಿಗೆ "ರುಸ್ತುಂ" ಎಂದು ಹೆಸರಿಟ್ಟಳು. ಅವರ ನುಡಿಯಲ್ಲಿ 'ರುಸ್ತುಂ' ಎಂಬ ಪದಕ್ಕೆ ಬಿಡುಗಡೆ ಎಂಬ ಅರ್ಥವಿದ್ದಿತು ಮುಂದೆ ಈ ಬಾಲಕ ಇರಾನನ್ನು ಕಷ್ಟಸಂಕಷ್ಟಗಳಿಂದ ಪಾರುಗಾಣಿಸಬಲ್ಲ ಮಹಾವೀರನಾದನು.

ರುಸ್ತುಮನು ಜನಿಸಿದಾಗ ಜಾಬೂಲು ಕಾಬೂಲುಗಳಲ್ಲಿ ದೊಡ್ಡ ಹಬ್ಬವೇ ನಡೆಯಿತು. ಆ ಎರಡೂ ನಾಡಿನ ಜನರೂ ಆನಂದ ಸಾಗರದಲ್ಲಿ ತೇಲಾಡಿದರು.

ರುಸ್ತುಂ ಜನಿಸಿದ ವೇಳೆಯಲ್ಲಿ ಸಾನನು ಜಾಬೂಲಿನಲ್ಲಿರಲಿಲ್ಲ. ಅವನು ಮಜಂದ್ರದ ರಕ್ಕಸರೊಡನೆ ಕಾಳಗವೆಸಗುವುದರಲ್ಲಿ ನಿರತನಾಗಿ ದ್ದನು ಕುಶಲಳಾದ ಕಸೂತಿಗಾರ್ತಿಯೊಬ್ಬಳು ರೇಷ್ಮೆ ವಸ್ತ್ರದ ಮೇಲೆ ಬಾಲಕನ ಭಾವಚಿತ್ರವನ್ನು ಕಸೂತಿ ಹಾಕಿದಳು. ಆ ಶಿಶು ಆಯುಧಪಾಣಿ ಯಾಗಿ ಕುದುರೆ ಸವಾರಿ ಮಾಡುವಂತೆ ಚಿತ್ರಿತವಾಗಿದ್ದಿತು. ಒಬ್ಬ ದೂತನು

ಈ ಚಿತ್ರವನ್ನು ಅಜ್ಜನಿಗೆ ತೋರಿಸಿ ಮೊಮ್ಮಗನು ಹುಟ್ಟಿದ ಸಂತಸದ ಸುದ್ದಿ ಯನ್ನು ಅರುಹಲು ಯುದ್ಧರಂಗಕ್ಕೆ ತೆರಳಿದನು.

ಮೊಮ್ಮಗನು ಜನಿಸಿದ ಶುಭವಾರ್ತೆಯನ್ನು ಕೇಳಿ ವೃದ್ಧ ಸಾನನು ಹಿರಿಹಿಗ್ಗಿದನು ತಾನು ಧರಿಸಿದ ವಸ್ತ್ರಾಭರಣಗಳನ್ನು ವಾರ್ತೆಯನ್ನು ತಂದ ದೂತನಿಗೆ ಮೆಚ್ಚುಗೆಯಾಗಿ ಕೊಟ್ಟನು ಮೊಮ್ಮಗನ ಭಾವಚಿತ್ರ ವನ್ನು ನೋಡಿದಷ್ಟೂ ಅವನ ಮನಸ್ಸು ತಣಿಯಲಿಲ್ಲ ಅವನ ಜೀವ ಸಂತೋಷದ ಕಡಲಿನಲ್ಲಿ ಓಲಾಡಿತು.

# ಮೂರು

ಬಾಲ ರುಸ್ತುಮನ ಸುಕುಮಾರ ರುಸ್ತುಂ ಅತ್ಯಂತ ಸೋಜಿಗದ ಕೂಸಾಗಿ ಬೆಳೆಯತೊಡಗಿದನು ಎರಡು ತಿಂಗಳಲ್ಲಿಯೇ ಅವನಿಗೆ ತೊಟ್ಟಿಲು ಸಾಲದಾಯಿತು. ಆರು ತಿಂಗಳಲ್ಲಿಯೇ ಅವನು ತನ್ನ ಹಜ್ಜೆಗಳನ್ನಿರಿಸಿ ನಡೆ ಕಲಿಯತೊಡಗಿದನು. ತಂದೆಯ ಗದೆ ಅವನ ಮೆಚ್ಚಿಕೆಯ ಆಟಿಗೆ ಯಾಗಿ ಪರಿಣಮಿಸಿತು. ಮೂರು ವರ್ಷಗಳ ಹರೆಯದಲ್ಲಿಯೇ ಅವನು ಕುದುರೆ ಸವಾರಿ ಮಾಡಲಾರಂಭಿಸಿದನು ಬಿಲ್ಲನ್ನು ಬಾಗಿಸಿ ಹೆದೆಯೇರಿಸು ವುದು, ಬಾಣಗಳನ್ನು ಗುರಿಯಿಟ್ಟು ಹೊಡೆವುದು ಮೊದಲಾದ ಕಾರ್ಯಗಳು ಅವನಿಗೆ ಸುಲಭದಲ್ಲಿ ಅಭ್ಯಾಸವಾದುವು. ಒಬ್ಬ ಪ್ರಾಯಸ್ಥನು ಉಣ್ಣುವಷ್ಟು ರೊಟ್ಟಿ ಮಾಂಸಗಳು ಮೂರು ವರ್ಷ ಪ್ರಾಯದ ಆ ಬಾಲಕನಿಗೆ ಬೇಕಾದುವು. ಐದು ವರ್ಷ ಪ್ರಾಯವಾಗಲು ಅವನು ಐವರಿಗೆ ಬೇಕಾಗುವಷ್ಟು ತಿಂಡಿ ತಿನಿಸುಗಳನ್ನು ಭಕ್ಷಿಸತೊಡಗಿದನು. ಎಳವೆಯಲ್ಲಿಯೇ ಗರಡಿ ಮನೆಗಳನ್ನು ನುಗ್ಗಿ ಜಟ್ಟಿ ಕಾಳಗಗಳಲ್ಲಿ ಅತ್ಯಾಸಕ್ತಿ ವಹಿಸಿ ಕಾದತೊಡಗಿದನು. ಹತ್ತು ವರ್ಷಗಳ ಪ್ರಾಯವಾಗಲು ಯುದ್ಧಕ್ಕೆ ಸಂಬಂಧಿಸಿದ ಎಲ್ಲಾ ಬಗೆಯ ಕ್ರೀಡಾ ವಿನೋದಗಳಲ್ಲಿ ಭಾಗವಹಿಸಿ ಇತರ ವೀರರನ್ನೆಲ್ಲಾ ಸೋಲಿಸಿ ಮಿಗಿ ಲೆನಿಸಿದನು. ಗಿಡದ ಬೆಳವೆ ಮೊಳಕೆಯಲ್ಲಿ ತೋರುವುದು. ಅದರಂತೆ ರುಸ್ತುಮನ ಬಾಲವಿನೋದಗಳು ಅವನು ಮುಂದೆ ಮಹಾ ಪರಾಕ್ರಮಿ ಯಾಗುವನೆಂಬುದನ್ನು ಜಗತ್ತಿಗೆ ಸಾರುತ್ತಿದ್ದುವು

ಯುದ್ಧರಂಗದಲ್ಲಿ ಕಾದಾಡುತ್ತಿದ್ದ ಸಾನನಿಗೆ ಒಮ್ಮೆ ಮೊಮ್ಮಗನ

ಮೊಗನೋಡಬೇಕೆಂದು ಆಶೆಯಾಯಿತು ಕಾಬೂಲಿನಲ್ಲಿದ್ದ ಮಿಹ್ರಾಬ ನಿಗೆ ಮಗಳ ಮಗನ ಮೋರೆ ನೋಡಲು ತವಕವಾಯಿತು ಈರ್ವರೂ ಜಾಬೂಲಿಗೆ ಬಂದರು ಪಡೆಯೊಡನೆ ಮಿಹ್ರಾಬನು ಮೊದಲು ಜಾಬೂ ಲಿಗೆ ಆಗಮಿಸಿದನು. ಕೆಲ ದಿನಗಳಲ್ಲಿಯೇ ಸಾನನೂ ಬಂದನು. ತಂದೆ ಬಂದ ವಾರ್ತೆಯನ್ನು ಕೇಳಿ ಜಾಲನು ಮಗನೊಡನೆ ಸಾನನನ್ನು ಎದುರು ಗೊಳ್ಳಲು ಹೊರಟನು. ರುಸ್ತುಂ ಪುಟ್ಟ ಕುದುರೆಯೊಂದನ್ನು ಏರಿದ್ದನು. ಅವನ ಶಿರದ ಮೇಲೆ ರತ್ನ ಖಚಿತ ಮುಕುಟ ಹೊಳೆಗುತ್ತಿದ್ದಿತು ಸಾನನನ್ನು ದೂರದಿಂದಲೇ ಕಂಡು ಜಾಲನು ವಾಹನದಿಂದ ಇಳಿದು ತಂದೆಯನ್ನು ಭೇಟಿಯಾಗಲು ಪರಿವಾರದವರೊಡನೆ ಪಾದಚಾರಿಯಾಗಿ ಮುಂದೆ ಹೋದನು. ಮೊಮ್ಮಗನ ಆಕಾರ ಮತ್ತು ಸೌಂದರ್ಯಗಳನ್ನು ಕಂಡು ಸಾನನು ವಿಸ್ಮಯಾಕುಲನಾದನು. ಅವನು ಬಾಲಕನನ್ನೆತ್ತಿ ಪ್ರೀತಿಯಿಂದ ಮೈದಡವಿ ಆಶೀರ್ವದಿಸಿದನು ಮತ್ತೆ ಅವನು ಅಲ್ಲಿಯೇ ಪಾಳೆಯ ಹೂಡಲು ಪಡೆಗೆ ಆಜ್ಞಾಪಿಸಿದನು. ಪಾಳೆಯಗಾರನ ನಿವಾಸಕ್ಕೆಂದು ಒಂದು ದೊಡ್ಡ ಗೂಡಾರವನ್ನು ಹೂಡಿದರು ಪಾಳೆಯವು ಅಮೂಲ್ಯ ರತ್ನ ಖಚಿತ ತೋರಣಗಳಿಂದ ವಿರಾಜಿಸಿತು ಎಡೆಬಿಡದೆ ಔತಣಗಳು ನಡೆಯ ತೊಡಗಿದುವು ಗೂಡಾರಗಳಲ್ಲಿ ದ್ರಾಕ್ಷಾರಸದ ಹೊನಲು ಹರಿಯಿತು. ಕುಣಿದು ಕುಣಿದು ನರ್ತಕಿಯರ ಕಾಲುಗಳು ಬಳಲಿದುವು. ಸಾನನು ತನ್ನ ಎಡ ಪಾರ್ಶ್ವದಲ್ಲಿ ಮಿಹ್ರಾಬನನ್ನು ಕುಳ್ಳಿರಿಸಿದನು. ಮುದುಕನ ತೊಡೆಯ ಮೇಲೆ ಬಾಲಕ ರುಸ್ತುಂ ವಿರಾಜಿಸುತ್ತಿದ್ದನು. ಮಿಹ್ರಾಬನು "ಲೋಕೈಕ ವೀರನೆಂದರೆ ನಾನನೇ ಸರಿ. ನೀನು ವೀರಕುಲವೆಂಬ ವೃಕ್ಷದ ಬೇರಾಗಿದ್ದೀಯೆ ನಾನು ಆ ಮರದ ಒಂದು ಕೊಂಬೆ ಮಾತ್ರವಾಗಿದ್ದೇನೆ." ಎಂದು ಸಾನನನ್ನು ಸ್ತುತಿಮಾಡಿದನು.

ದ್ರಾಕ್ಷಾರಸ ಕುಡಿಯುತ್ತಿದ್ದಂತೆ ಅಮಲು ಮಿಹ್ರಾಬನ ನೆತ್ತಿಗೇ ರಿತು. ಅವನು ಆತ್ಮಸ್ತುತಿ ಮಾಡಿಕೊಳ್ಳಲಾರಂಭಿಸಿದನು. ಅವನ ಕೊರ ಳಿಂದ ನಾಗರಾಜನ ಸ್ತುತಿಗೀತೆಗಳು ಹೊಮ್ಮಿದುವು. ಆಗ ನಾಗಕುಲ ದವರು ಹಿಂದೆ ಎಸಗಿದ ದುಷ್ಕೃತ್ಯಗಳು ಸಾನನ ಸ್ಮೃತಿಪಥದಲ್ಲಿ ಪ್ರವೇಶಿಸಿ ದುವು. ಅವನು ಮೌನದಿಂದ "ಬಾಲಕ ರುಸ್ತುಂ ಸುಂದರಾಂಗನಾಗಿ ಧೈರ್ಯಶಾಲಿಯಾಗಿ ಸತ್ಕಾರ್ಯಗಳಲ್ಲಿ ಸ್ಥಿರೋತ್ಸಾಹಿಯಾಗಿ ಮತ್ತು ದೈವ

ಭೀತನಾಗಿ ಪ್ರವರ್ಧಮಾನನಾಗಲಿ.” ಎಂದು ದೇವರನ್ನು ಪ್ರಾರ್ಥಿಸಿದನು.

ಈ ಔತಣ ಸಮಾರಂಭಗಳು ಕೊನೆಗೊಂಡುವು. ಜಾಲನು ತನ್ನ ಅಧೀನವಿರುವ ಶಿಸ್ತಾನ ದುರ್ಗಕ್ಕೆ ರುಸ್ತುಮನನ್ನು ಕರೆದುಕೊಂಡು ಹೋದನು. ಈ ದುರ್ಗದಲ್ಲಿ ಇರಾನಿನ ಅರಸು ಮಿನುಚೆರನ ಬಿಳಿಯಾನೆ ಯಿದ್ದಿತು. ಒಂದು ಇರುಳು ಈ ಭಯಂಕರ ಗಜವು ಮದವೇರಿ ತನ್ನನ್ನು ಬಂಧಿಸಿದ್ದ ಲೋಹಶೃಂಖಲೆಗಳನ್ನು ಮುರಿದು ಹಾಕಿ, ನಗರದ ಬೀದಿಯಲ್ಲಿ ನುಗ್ಗಿ ಅಲೆಯುತ್ತಾ ಮನೆಮಠಗಳನ್ನೂ ಜನರನ್ನೂ ನಾಶಪಡಿಸತೊಡಗಿತು. ಆ ಕಾಲದಲ್ಲಿ ಜಾಲನು ಅಲ್ಲಿರಲಿಲ್ಲ, ಅವನು ಪರವೂರಿಗೆ ಪಯಣ ಬೆಳೆಸಿ ದ್ದನು. ಈ ವೇಳೆಯಲ್ಲಿ ರುಸ್ತುಂ ಹಾಸಿಗೆಯಲ್ಲಿ ಮಲಗಿ ನಿದ್ರಿಸುತ್ತಿದ್ದನು. ಆನೆಯ ಬೃಂಹಿತ ಮತ್ತು ಜನರ ಚೀತ್ಕಾರಗಳು ಅವನನ್ನು ನಿದ್ದೆಯಿಂದೆಚ್ಚ ರಿಸಿದುವು, ಈ ಕೂಗಾಟಗಳಿಗೆ ಕಾರಣವೇನೆಂಬುದನ್ನು ಸೇವಕನೊಬ್ಬ ನನ್ನು ವಿಚಾರಿಸಿ ತಿಳಿದು, ಅವನು ತಂದೆಯ ಲೋಹದ ಗದೆಯನ್ನು ಹೆಗಲ ಮೇಲೇರಿಸಿಕೊಂಡು ಮದಗಜವನ್ನು ಎದುರಿಸಲು ಹೊರಟನು. ಆಗ ಸೇವಕನು ಅವನನ್ನು ಅಡ್ಡಗಟ್ಟಿ, “ಈ ಕತ್ತಲಲ್ಲಿ ಮದಗಜವನ್ನೆದುರಿಸಲು ನಿನ್ನನ್ನು ಒಬ್ಬಂಟಿಗನನ್ನಾಗಿ ಕಳುಹಲಾರೆ “ ಎಂದು ತಡೆದನು.

ಸೇವಕನು ತನ್ನನ್ನು ತಡೆದುದನ್ನು ಕಂಡು ರುಸ್ತುಮನಿಗೆ ಸಿಟ್ಟು ಬಂದಿತು. ಅವನು ಕೈಯನ್ನೆತ್ತಿ ಸೇವಕನ ಕೆನ್ನೆಯ ಮೇಲೆ ಎರಡೇಟು ಏರಿಸಿದನು. ಇದನ್ನು ಕಂಡು ಅಲ್ಲಿದ್ದ ಸೇವಕರೆಲ್ಲ ಹಿಂಜರಿದರು. ಆಗ ಈ ಬಾಲ ವೀರನು ಗದೆಯಿಂದ ಬಾಗಿಲನ್ನು ಗುದ್ದಿ ಒಡೆದು ಬೀದಿಗೆ ಇಳಿದನು. ಕೋಪದಿಂದ ಕುರುಡಾದ ಆ ಮದ್ದಾನೆ ತನಗೆ ಎದುರಾಗಿ ಬಂದ ರುಸ್ತು ಮನ ಮೇಲೆ ಬೀಳಲು ಒಂದು ದೊಡ್ಡ ಪರ್ವತವು ಚಲಿಸಿ ಬರುವಂತೆ ವೇಗ ವಾಗಿ ಬಂದಿತು. ಅದರ ಬೃಂಹಿತ ಕಿವಿಗಳನ್ನು ಕಿವುಡಾಗಿಸುತ್ತಿದ್ದಿತು ಅದು ಸೊಂಡಿಲಿನಿಂದ ಬಾಲಕನನ್ನು ಹಿಡಿದೆತ್ತಿ ನೆಲಕ್ಕೆ ಅಪ್ಪಳಿಸಲು ಅಣಿ ಯಾಗುತ್ತಿತ್ತು. ರುಸ್ತುಂ ಗರ್ಜಿಸುತ್ತಾ ತನ್ನ ಗದೆಯನ್ನು ಮೇಲೆತ್ತಿ ಅದರ ಮಸ್ತಕಕ್ಕೆ ಗುರಿಯಿಟ್ಟು ಅಪ್ಪಳಿಸಿದನು. ಈ ಪ್ರಹಾರದಿಂದ ಆನೆಯ ತಲೆ ತಿರುಗಿತು. ಅದು ಹಿಂದೆ ಹಿಂದೆ ಹೆಜ್ಜೆಗಳನ್ನಿರಿಸುತ್ತಾ ದೊಡ್ಡ ಗುಡ್ಡ ಜರಿದುಬೀಳುವಂತೆ ನೆಲದ ಮೇಲೆ ಹೊರಳಿತು. ಇನ್ನೊಂದು ಕ್ಷಣದಲ್ಲಿ ಯೇ ಅದರ ಶರೀರದಿಂದ ಪ್ರಾಣ ಹೊರಟುಹೋಯಿತು. ಆ ಮೇಲೆ ಬಾಗಿ

ರುಸ್ತುಂ ಒಂದು ಉರುಳು ಹಗ್ಗವನ್ನು ತಂದು ಕುದುರೆಯ ಕೊರಳು ಉರುಳೊಳಗೆ ಸಿಗುವಂತೆ ಹಗ್ಗವನ್ನು ಎಸೆದನು ಕುದುರೆ ರೊಚ್ಚಿಗೆದ್ದು ಕೆನೆಯುತ್ತ, ಬಾಯನ್ನು ಅಗಲಿಸಿ ರಸ್ತುಮನನ್ನು ಕಡಿಯಲೆಂದು ಧಾವಿಸಿತು. ರುಸ್ತುಂ ಬೆಟ್ಟಗಳು ಬಿರಿವಂತೆ ಒಮ್ಮೆ ಗರ್ಜಿಸಲು ಅವನ ವೀರ ಗರ್ಜನೆ ಯನ್ನು ಕೇಳಿ ಕುದುರೆ ಸ್ತಂಭಿತವಾಯಿತು. ಅವನು ಮುಷ್ಟಿಯನ್ನು ಬಿಗಿ ಹಿಡಿದು ಕುದುರೆಯ ಬೆನ್ನ ಮೇಲೆ ಗುದ್ದಲು ಆ ಪ್ರಹಾರದ ಆಘಾತವನ್ನು ತಾಳಲಾರದೆ ಕುದುರೆ ನೆಲದ ಮೇಲೆ ಬಿದ್ದು ಹೊರಳಾಡಿತು. ಅನಂತರ ಅದು ರುಸ್ತುಮನ ಪಾದಗಳನ್ನು ಸಮೀಪಿಸಿ ತಲೆಬಾಗಿ ನಿಂತಿತು

ಆ ಕುದುರೆಯ ಮೈಬಣ್ಣ ಕೇಸರಿ. ಅಲ್ಲಲ್ಲಿ ಮೈಮೇಲೆ ಕೆಂಪು ಚುಕ್ಕೆ ಗಳು ಬೆಳಗುತ್ತಿದ್ದುವು ಕಣ್ಣುಗಳು ಇರುಳಿನಂತೆ ಕಪ್ಪಾಗಿದ್ದುವು. ಗೊರಸು ಗಳು ಉಕ್ಕಿಗಿಂತ ಗಟ್ಟಿಯಾಗಿದ್ದುವು. ರುಸ್ತುಮನು ಕುದುರೆಯ ಬೆನ್ನನ್ನು ಕೈಗಳಿಂದ ಒತ್ತಿ ಬಾಗಿಸಲು ಪ್ರಯತ್ನಿಸಿದನು. ಆದರೆ ಬೆನ್ನು ಬಂಡೆಗಲ್ಲಿನಂತೆ ಸ್ಥಿರವಾಗಿ ನಿಂತಿತು. "ಇದು ನನಗೊಪ್ಪುವ ಕುದುರೆಯಾಗಿದೆ!" ಎಂಬ ಹರ್ಷೋದ್ಗಾರ ವೀರನ ಗಂಟಲಿಂದ ಹೊರಟಿತು. "ಈ ಕುದುರೆಗೆ ಏನು ಬೆಲೆ ಕೊಡಲಿ?" ಎಂದು ಅವನು ವ್ಯಾಪಾರಿಯನ್ನು ಪ್ರಶ್ನಿಸಿದನು.

"ನಾವು ಈ ಕುದುರೆಯನ್ನು ರುಸ್ತುಮನ ರಕ್ಷ ಎಂಬ ಹೆಸರಿನಿಂದ ಕರೆಯುತ್ತೇವೆ. ನೀನು ರುಸ್ತುಮನಾಗಿದ್ದರೆ ಈ ಕುದುರೆಯನ್ನೇರಿ ಇರಾ ನನ್ನು ಕಾಪಾಡಲೆಂದು ಉಚಿತವಾಗಿ ಕೊಡುತ್ತೇವೆ" ಎಂದು ವರ್ತಕ ಮಾರ್ನುಡಿದು ಕುದುರೆಯನ್ನು ರುಸ್ತುಮನಿಗೊಪ್ಪಿಸಿದನು. ರಕ್ಷನಷ್ಟು ವೇಗ ವುಳ್ಳುದೂ ವಿಧೇಯತೆಯುಳ್ಳುದೂ ಆದ ಕುದುರೆ ಆ ಕಾಲದಲ್ಲಿ ಇರಾನಿ ನಲ್ಲಿಯೇ ಇರಲಿಲ್ಲವಂತೆ.

ಜಾಲನು ರುಸ್ತುಮನಿಗೆ ಕುದುರೆ ಸವಾರಿ, ವಿವಿಧ ಕೈದುಗಳ ಪ್ರಯೋಗ ಮೊದಲಾದ ಯುದ್ಧ ವಿದ್ಯೆಗಳನ್ನು ಕಲಿಸಿ ನಿಷ್ಣಾತನನ್ನಾಗಿ ಮಾಡಿದನು ದಿನಗಳೆದಂತೆ ಮಗನು ಶಸ್ತ್ರ ವಿದ್ಯೆಯಲ್ಲಿ ಪಂಡಿತನಾದುದನ್ನು ಕಂಡು ತಂದೆಗೆ ಸಂತೋಷವಾಯಿತು.

ಒಂದು ದಿನ ತರುಣ ವೀರನು "ಇತರರು ಬಳಸುವ ಗದೆಗಳು ತನ್ನ ತೋಳುಗಳಿಗೆ ಮರದ ಟೊಂಗೆಯಷ್ಟು ಹಗುರವಾಗಿವೆ. ಭಾರವುಳ್ಳ ಒಂದು ದೊಡ್ಡ ಗದೆಯನ್ನು ನನಗೆ ದಯಪಾಲಿಸಬೇಕು," ಎಂದು ತಂದೆಯನ್ನು

ವರ್ಷಗಳ ತನಕ ಹಗೆಗಳ ಮುತ್ತಿಗೆಯನ್ನು ಎದುರಿಸಿ ನಿಲ್ಲಬಲ್ಲರು. ಅವ ರಲ್ಲಿ ಇಲ್ಲದಿರುವ ಒಂದೇ ಒಂದು ವಸ್ತುವೆಂದರೆ, ಉಪ್ಪು! ಅವರು ಉಪ್ಪನ್ನು ಹೊರನಾಡುಗಳಿಂದ ಬರುವ ವರ್ತಕರಿಂದ ಕೊಂಡುಕೊಳ್ಳಬೇಕಾಗುವುದು.

"ನನ್ನ ಅಜ್ಜ ಒಂದು ವರ್ಷ ಕಾಲ ಆ ದುರ್ಗಕ್ಕೆ ಮುತ್ತಿಗೆಯನ್ನು ಹಾಕಿದನು. ಕೋಟೆಯ ಮೇಲಿದ್ದ ಹಗೆ ದೊಡ್ಡ ಬಂಡೆಗಲ್ಲೊಂದನ್ನು ಕೆಳಗುರುಳಿಸಿದನು ಅದು ನನ್ನ ಅಜ್ಜನ ತಲೆಯ ಮೇಲೆ ಬಿದ್ದು ಅವನನ್ನು ಕೊಂದಿತು. ಈ ದುಃಖವಾರ್ತೆ ನಿನ್ನ ಅಜ್ಜ ಸಾನನಿಗೆ ತಲಪಲು ಸೇಡು ತೀರಿಸಿಕೊಳ್ಳಲು ಅವನು ಪಣತೊಟ್ಟನು ಆ ದುರ್ಗದ ಮೇಲೆ ಧಾಳಿ ನಡೆಸಲು ಅವನು ದಂಡಯಾತ್ರೆಯನ್ನು ಕೈಗೊಂಡನು. ಆದರೆ ಕೋಟೆ ಯನ್ನು ಮುತ್ತಲಿಕ್ಕೆ ಸರಿಯಾದ ಮಾರ್ಗ ದೊರೆಯದುದರಿಂದ ಅವನು ನಿರಾಶೆಯಿಂದ ಹಿಂದಿರುಗಬೇಕಾಯಿತು ಅವನ ತೊಟ್ಟ ಪಣ ಈಡೇರದೆ ಹಾಗೆಯೇ ಉಳಿಯಿತು"

"ಮುದ್ದು ಕಂದಾ, ನಿನ್ನ ಮುತ್ತಜ್ಜನನ್ನು ಕೊಂದ ಹಗೆಗಳಿಗೆ ನೀನೀಗ ಪ್ರತೀಕಾರವೆಸಗಬೇಕಾಗಿದೆ ನೀನು ಹಗೆಗಳಿಗೆ ಅಪರಿಚಿತನಾಗಿ ರುವುದರಿಂದ ಶತ್ರುದುರ್ಗದೊಳಗೆ ಸುಲಭನಾಗಿ ನುಗ್ಗಬಹುದು. ನೀನು ಕೋಟೆಯೊಳಗೆ ನುಗ್ಗಲು ಶಕ್ತನಾದರೆ ನನ್ನ ಅಜ್ಜ ನರಿಮಾನನಿಂದ, ನಿನ್ನ ಅಜ್ಜ ಸಾನನಿಂದ ಪೂರೈಸಲಾಗದ ಕಾರ್ಯವನ್ನು ಎಸಗಲು ನೀನು ಸಮ ರ್ಥನಾಗುವೆ. ನಿನ್ನ ಗೆಲುವು ವೃದ್ಧ ಸಾನನ ಹೃದಯವನ್ನು ಆಹ್ಲಾದ ಗೊಳಿಸದಿರದು." ಎಂದನು

ಅದನ್ನು ಕೇಳಿ, "ಆ ದುರ್ಗವನ್ನೇ ನೆಲಸಮ ಮಾಡಿದರಾಯಿತಲ್ಲ!" ಎಂದು ಉತ್ಸಾಹಾತಿರೇಕದಿಂದ ರುಸ್ತುಂ ನುಡಿದನು.

"ನಿನ್ನ ಹೃದಯ ಪರ್ವತದಂತೆ ಸ್ಥಿರವಾದುದೆಂಬುದು ನಿಜ. ಆದರೆ ಆ ದುರ್ಗ ವಜ್ರದಂತೆ ಭದ್ರವಾದುದು ತಂತ್ರದಿಂದಲ್ಲದೆ ಕೋಟೆಯೊಳಗೆ ಪ್ರವೇಶಿಸಲು ಸಾಧ್ಯವಾಗದು." ಎಂದು ಜಾಲನು ಹೇಳಿದಾಗ, ಅವನು "ಹಾಗಾದರೆ ಯಾವ ಉಪಾಯವನ್ನು ಕೈಗೊಳ್ಳುವುದು? ಗದೆಯಿಂದ ದುರ್ಗದ ಗೋಡೆಗಳನ್ನು ಬಡಿದು ಪ್ರಯೋಜನವಿಲ್ಲೆಂದು ನೀನೇ ಹೇಳುತ್ತಿರುವೆಯಲ್ಲ. ದುರ್ಗದೊಳಗೆ ನುಗ್ಗುವ ಬಗೆಯೇನು?" ಎಂದು ಪ್ರಶ್ನಿಸಿದನು.

"ನೋಡು, ದುರ್ಗದ ಜನರಿಗೆ ದುರ್ಲಭವೆನಿಸಿದ ವಸ್ತು ಉಪ್ಪಾಗಿದೆ ಯೆಂದು ನಾನು ಆಗಲೇ ಹೇಳಿದೆನಲ್ಲ! ವೀರನು ಯುದ್ಧದಲ್ಲಿ ತಂತ್ರ ಗಳನ್ನೂ ಅಪಾಯುಗಳನ್ನೂ ನಿವಾರಿಸುವ ದುರಾಲೋಚನೆಗಳನ್ನು ಎಂದೂ ತಿರಸ್ಕರಿಸಬಾರದು. ನೀನೂ ಜತೆಯುಲ್ಲಿರುವ ಸೈನಿಕರೂ ವೇಷಗಳನ್ನು ಮಾರ್ಪಡಿಸುವುದು ಅಗತ್ಯ. ನೀನು ವ್ಯಾಪಾರಿಯ ಸೋಗನ್ನು ಧರಿಸಿ, ಉಪ್ಪಿನ ಮೂಟೆಗಳನ್ನು ಒಂಟೆಗಳ ಮೇಲೆ ಹೇರಿಕೊಂಡು ಹೋಗು. ನಿನ್ನ ನಚ್ಚಿನ ಯೋಧರೂ ಹೀಗೆಯೇ ಪ್ರಚ್ಛನ್ನ ವೇಷದಲ್ಲಿರಲಿ ನಿಮ್ಮ ಆಯುಧ ಗಳನ್ನೆಲ್ಲಾ ಉಪ್ಪಿನ ಮೂಟೆಗಳಲ್ಲಿ ಅಡಗಿಸಿಟ್ಟುಕೊಳ್ಳಿರಿ ಹಗೆಗಳು ನೀವು ಉಪ್ಪಿನ ವ್ಯಾಪಾರಿಗಳೆಂದು ಆದರದಿಂದ ದುರ್ಗದೊಳಗೆ ಬರಮಾಡಿಕೊಳ್ಳು ವರು. ಎಲ್ಲರೂ ದುರ್ಗದೊಳಗೆ ಪ್ರವೇಶಿಸುವ ತನಕ ನಿಮ್ಮ ಉಪ್ಪಿನ ಹೇರುಗಳನ್ನು ಬಿಚ್ಚಬೇಡಿರಿ" ಹೀಗೆಂದು ಜಾಲನು ಸೈಪೆಂಡ ದುರ್ಗದೊ ಳಗೆ ಪ್ರವೇಶಿಸುವ ಹಂಚಿಕೆಯನ್ನು ಮಗನಿಗೆ ತಿಳಿಸಿದನು.

ಜಾಲನು ಒಂಟೆಗಳ ನೆರವಿಯೊಂದನ್ನು ಜತೆಗೂಡಿಸಿದನು. ಚೀಲ ಗಳಲ್ಲಿ ಉಪ್ಪು ತುಂಬಿಸಿ ಸಿದ್ಧಗೊಳಿಸಿದನು. ಈ ದಂಡಯಾತ್ರೆಯಲ್ಲಿ ನೆರ ವಾಗಲು ರುಸ್ತುಂ ಉತ್ತಮ ಯೋಧರನ್ನು ಆರಿಸಿ, ಪ್ರತಿಯೊಬ್ಬ ವೀರನೂ ಹೇಗೆ ವರ್ತಿಸಬೇಕೆಂಬು ಅವರಿಗೆ ವಿವರವಾಗಿ ತಿಳಿಸಿದನು. ಅವರೆಲ್ಲರೂ ಪಡೆಯಾಳುಗಳ ವೇಷಗಳನ್ನು ಬಿಸುಟು ಬಣಜಿಗರ ಸೋಗನ್ನು ತಳೆದರು. ಈ ವಿಚಿತ್ರ ವ್ಯಾಪಾರಿಗಳ ತಂಡ ಒಂದು ಶುಭಮುಹೂರ್ತದಲ್ಲಿ ಉಪ್ಪಿನ ಚೀಲಗಳನ್ನು ಹೊತ್ತ ಒಂಟೆಗಳೊಡನೆ ಶಿಸ್ತಾನದ ಸಂತೆಯಿಂದ ಹೊರಟಿತು.

ಈ ಕಪಟ ವರ್ತಕರು ದೀರ್ಘ ಪ್ರವಾಸವನ್ನು ಮಾಡಿ ಕೊನೆಗೆ ಸೈಪೆಂಡ ಪರ್ವತದ ತಪ್ಪಲನ್ನು ಸೇರಿದರು. ಪರ್ವತದ ತುದಿಯಲ್ಲಿದ್ದ ಪಹರೆಯವನು ತಪ್ಪಲಲ್ಲಿ ಸಾಗುತ್ತಿರುವ ಒಂಟೆಗಳ ಸಾಲನ್ನು ನೋಡಿ, ದೂತರ ಮೂಲಕ ತನ್ನ ಅರಸನಿಗೆ "ಪರ್ವತದ ತಪ್ಪಲಿನಲ್ಲಿ ವ್ಯಾಪಾರಿಗಳ ಗುಂಪೊಂದು ಒಂಟೆಗಳೊಡನೆ ಬರುತ್ತಲಿದೆ. ಅವರು ಉಪ್ಪಿನ ವ್ಯಾಪಾರಿ ಗಳಂತೆ ತೋರುವರು. ಅವರಿಂದ ನಮಗೆ ಬೇಕಾದಷ್ಟು ಉಪ್ಪನ್ನು ಪಡೆದು ಕೊಳ್ಳಬಹುದು." ಎಂಬ ಸುದ್ದಿಯನ್ನು ಕಳುಹಿದನು.

ತಮ್ಮ ದುರ್ಗದ ಸಮೀಪಕ್ಕೆ ಬಣಜಿಗರ ತಂಡವೊಂದು ಬಂದುದನ್ನ ರಿತು ರಾಜನಿಗೆ ಸಂತೋಷವಾಯಿತು. ಅವನು ಒಂಟೆಗಳ ಮೇಲಿರುವ

ಹೇರುಗಳೇನೆಂಬುದನ್ನು ವಿಚಾರಿಸಲು ಒಬ್ಬ ದೂತನನ್ನು ಕಳುಹಿದನು. ಈ ದೂತನು ಪರ್ವತವನ್ನಿಳಿದು ಬಂದು ತಪ್ಪಲಲ್ಲಿ ಬೀಡುಬಿಟ್ಟ ಬಣಜಿಗರನ್ನು ಕಂಡು ಅವರು ತಂದ ಸರಕೇನೆಂಬುದನ್ನು ವಿಚಾರಿಸಿದನು.

ಅವನು ಉಪ್ಪಿನ ವ್ಯಾಪಾರಿಗಳೆಂದು ಖಂಡಿತಮಾಡಿಕೊಂಡು ಹಿಂದಿರುಗಿ ಹೋಗಿ ರಾಜನಿಗೆ ತಿಳಿಸಿದನು.

ವ್ಯಾಪಾರಿಗಳ ನಾಯಕನನ್ನು ನಂಬಿದ ಅರಸನು ವರ್ತಕರನ್ನು ದುರ್ಗದೊಳಗೆ ಬರಮಾಡಿಕೊಳ್ಳಲು ದುರ್ಗದ ಮಹಾದ್ವಾರವನ್ನು ತೆರೆಯಲು ಆಜ್ಞಾಪಿಸಿದನು ಬಣಜಿಗರು ತಮ್ಮ ಒಂಟೆಗಳೊಡನೆ ದುರ್ಗದೊಳಗೆ ಪ್ರವೇಶಿಸಿ, ಉಪ್ಪಿನ ವ್ಯಾಪಾರ ಮಾಡುವ ಮೊದಲು ಗೂಡಾರಗಳನ್ನು ಹೊಡಿದರು ತುಸು ವಿಶ್ರಮಿಸಿ ಪಯಣದ ಬಳಲಿಕೆಯನ್ನು ನೀಗುವುದರಲ್ಲಿ ನಿರತರಾದರು ಕಡಿದಾದ ಬೆಟ್ಟವನ್ನೇರಿ ಬಂದ ಒಂಟೆಗಳೂ ತಮ್ಮ ದಣಿವನ್ನು ಆರಿಸಿಕೊಂಡುವು. ದುರ್ಗದೊಳಗಿದ್ದ ಗಂಡಸರು, ಹೆಂಗುಸರು, ಮಕ್ಕಳು, ಮರಿಗಳು, ಮುದುಕರು ಎಲ್ಲರೂ ಉಪ್ಪುಕೊಳ್ಳಲೆಂದು ರುಸ್ತುಮನ ಪಾಳೆಯುವನ್ನು ಮುತ್ತಿದರು. ಉಪ್ಪುಕೊಳ್ಳಲು ಅವರು ಅತ್ಯಾಸಕ್ತಿಯುಳ್ಳವರಾದುದರಿಂದ ಬಂಗಾರದ ಕಸೂತಿ ಹಾಕಿದ ರೇಶ್ಮೆ ಅರಿವೆಗಳು, ಶಾಲುಗಳು, ಚಿನ್ನದ ಸಲಾಕೆಗಳು, ಅಮೂಲ್ಯವಾದ ರತ್ನಾಭರಣಗಳು ಇತ್ಯಾದಿ ವಸ್ತುಗಳನ್ನು ತಾವು ಪಡೆದ ಉಪ್ಪಿಗೆ ಬದಲಾಗಿ ಕೊಡಲೆಂದು ತಂದರು. ಉಪ್ಪಿನ ವ್ಯಾಪಾರ ಮಾಡಿದರು. ಈ ಬಣಜಿಗರು ತಮ್ಮ ದುರ್ಗವನ್ನು ನೆಲಸಮ ಮಾಡಲು ಬಂದ ಹಗೆಗಳೆಂಬ ಊಹೆ ಅವರಿಗೆ ಕನಸಿನಲ್ಲಿಯೂ ಸುಳಿಯಲಿಲ್ಲ.

ನೇಸರು ಪಡುವಣದಲ್ಲಿ ಅಸ್ತಮಿಸಿದನು. ಇರುಳು ಇಳೆಯನ್ನು ಆವರಿಸಿತು. ಅರಸನ ಅಪ್ಪಣೆಯಂತೆ ಅರಸನ ಭೇಟಿಗೆಂದು ರುಸ್ತುಂ ತನ್ನ ಒಂಟೆಯೊಡನೆ ರಾಜಗೃಹಕ್ಕೆ ನಡೆದನು. ನಾಯಕನ ಸೂಚನೆಯಂತೆ ಇತರ ವ್ಯಾಪಾರಿಗಳೂ ಉಪ್ಪಿನ ವ್ಯಾಪಾರವನ್ನು ನಿಲ್ಲಿಸಿ ತಮ್ಮ ಮುಂದಾಳನ್ನು ಹಿಂಬಾಲಿಸಿದರು.

ವ್ಯಾಪಾರ ಮಾಡಲೆಂದು ಬಂದ ವರ್ತಕರು ಇರುಳು ರಾಜಮಂದಿರದೆಡೆಗೆ ಚಲಿಸುವುದನ್ನು ಕಂಡು ಅವರು ಆವುದೋ ಒಂದು ಆಪತ್ತನ್ನು ತರಲಿದ್ದಾರೆಂದು ಜನರು ಭೀತಾಕುಲರಾದರು. ಅರಮನೆಗೆ ಆಗಮಿಸಿದ ರುಸ್ತು

ಮನನ್ನು ಎದುರುಗೊಳ್ಳಲೆಂದು ರಾಜನು ಹೊರಬಾಗಿಲಿಗೆ ಬಂದನು. ರುಸ್ತುಂ ಕೂಡಲೇ ತನ್ನ ಗದೆಯನ್ನೆತ್ತಿ ರಾಜನ ತಲೆಯ ಮೇಲೆ ಒಂದೇಟು ಬಿಟ್ಟು ಬಿಟ್ಟನು. ಕೂಡಲೇ ಅರಸನು ನೆತ್ತಿಯೊಡೆದು ನೆಲಕ್ಕೆ ಉರುಳಿ ಪ್ರಾಣಬಿಟ್ಟನು! ತಮ್ಮ ರಾಜನು ಮಡಿದುದನ್ನು ಕಂಡು ಅಲ್ಲಿದ್ದ ಸೈನಿಕರು ಗುಂಪುಗಟ್ಟಿ ರುಸ್ತುಮನೊಡನೆ ಕದನಕ್ಕೆ ತೊಡಗಿದರು ಕರವಾಳಗಳ ಪ್ರಭೆ ಕೊನೆಯಿಲ್ಲದೆ ಹಬ್ಬಿದ ಕತ್ತಲೆಯನ್ನು ನಿವಾರಿಸಿತು. ರುಸ್ತುಮನೂ ಅವನ ಜತೆಗಾರರೂ ಹಗೆಗಳನ್ನು ತರಿವಂತೆ ತರಿದೊಡ್ಡಿದರು ಇರುಳಿಡೀ ಹೋರಾಟ ನಡೆಯಿತು. ಬೆಳಕು ಹರಿದಾಗ ಅವರನ್ನು ಎದುರಿಸಲು ದುರ್ಗ ದೊಳಗೆ ಒಬ್ಬನೇ ಒಬ್ಬ ವೀರನು ಉಳಿದಿರಲಿಲ್ಲ!

ಅಮೂಲ್ಯ ರತ್ನ ಮತ್ತು ಬಂಗಾರಗಳನ್ನು ನಿಕ್ಷೇಪಿಸಿದ್ದ ಗೋಪುರ ನಗರ ಮಧ್ಯದಲ್ಲಿತ್ತು ರುಸ್ತುಂ ಈ ಗೋಪುರವಿದ್ದಲ್ಲಿಗೆ ಪರಿವಾರದೊಡನೆ ತೆರಳಿ ಬಲಿಷ್ಠವಾದ ಉಕ್ಕಿನಿಂದ ನಿರ್ಮಿತವಾದ ಅದರ ಹೊರಬಾಗಿಲನ್ನು ತನ್ನ ಗಂಡುಗೊಡಲಿಯಿಂದ ಭೇದಿಸಿದನು. ಈ ಮಂದಿರದೊಳಗೆ ಬೆಲೆ ಕಟ್ಟಲು ಸಾಧ್ಯವಿಲ್ಲದ ಅಮೂಲ್ಯವಾದ ರತ್ನಾಭರಣಗಳೂ, ಬೆಳ್ಳಿ ಬಂಗಾರದ ಗಟ್ಟಿಗಳೂ ಇದ್ದುವು. ಅದಲ್ಲದೆ, ಕುಶಲಕಲಾಸಂಪನ್ನತೆಯನ್ನು ತೋರುವ ಆಶ್ಚರ್ಯಕರವಾದ ಒಂದು ಗುಡಿಯಿದ್ದಿತು ಅದರ ಒಳಮಾಡು ಬಂಗಾರ ದಿಂದ ನಿರ್ಮಿತವಾದುದು. ಅದರಲ್ಲಿ ಮುತ್ತು ಮತ್ತು ರತ್ನಗಳ ಗೊಂಚಲು ಗಳು ತೂಗುತ್ತಿದ್ದುವು. ರುಸ್ತುಮನ ಅಪ್ಪಣೆಯಂತೆ ಪ್ರತಿಯೊಬ್ಬ ವೀರನೂ ತನಗೆ ಸಾಕೆನಿಸುವಷ್ಟು ರತ್ನಾಭರಣ ಬೆಳ್ಳಿ ಮತ್ತು ಬಂಗಾರ ಗಳನ್ನು ತನ್ನ ಬಳಿಯಿದ್ದ ಚೀಲಗಳಲ್ಲಿ ತುಂಬಿಸಿಕೊಂಡನು. ಉಳಿದುದನ್ನು ರುಸ್ತುಂ ಸ್ವಾಧೀನಪಡಿಸಿಕೊಂಡು, ಸಿಕ್ಕಿದ ದ್ರವ್ಯವನ್ನು ಏನು ಮಾಡಬೇ ಕೆಂದು ತಂದೆಯ ಆಲೋಚನೆ ಪಡೆಯಲು ದೂತನೊಬ್ಬನನ್ನು ಶಿಸ್ತಾನಕ್ಕೆ ಕಳುಹಿದನು.

ಕುಮಾರನು ಕೈಗೊಂಡ ಸಾಹಸೋದ್ಯಮ ವಿಜಯಪ್ರದವಾಯಿತೆಂಬು ದನ್ನು ತಿಳಿದು ಜಾಲನು ಹರ್ಷ ಸಾಗರದಲ್ಲಿ ತೇಲಿದನು. “ನಿನ್ನ ಸಾಹಸ ಕಾರ್ಯ ಸ್ವರ್ಗದಲ್ಲಿರುವ ನರಿಮಾನನು ಹೆಮ್ಮೆಯಿಂದ ತಲೆಯೆತ್ತಿ ನಡೆ ವಂತೆ ಮಾಡಿದೆ. ಇಂದು ಸೇಡಿಗೆ ಹಾಯ್ತೊರೆಯುತ್ತಿರುವ ಅವನ ಆತ್ಮಕ್ಕೆ ಶಾಂತಿ ಲಭಿಸಿತು. ನಾನು ಈ ದೂತನೊಡನೆ ಒಂದು ಸಾವಿರ ಒಂಟೆಗಳನ್ನು

ಕಳುಹಿರುವೆನು. ಹಗೆಗಳ ಸಂಪತ್ತೆಲ್ಲವನ್ನೂ ಈ ಒಂಟೆಗಳ ಮೇಲೆ ಹೇರಿ ಶಿಸ್ತಾನಕ್ಕೆ ತೆಗೆದುಕೊಂಡು ಬಾ. ಹಗೆಗಳ ದುರ್ಗವನ್ನು ನೆಲಸಮ ಮಾಡು" ಎಂಬ ಮರುಸಂದೇಶವನ್ನು ಜಾಲನು ಕುಮಾರ ರುಸ್ತುಮನಿಗೆ ಕಳುಹಿದನು.

ಮೇಲೆ ಹೇಳಿದ ಸುವರ್ಣ ಮುತ್ತು ರತ್ನಗಳಲ್ಲದೆ ಆ ಮಂದಿರದೊಳಗೆ ದಿವ್ಯವಾದ ಕನಕಹಾರಗಳೂ ಬಳೆಗಳೂ ನೂಪುರಗಳೂ ಇದ್ದುವು. ಬೆಳ್ಳಿ ಬಂಗಾರಗಳ ನೂಲುಗಳಿಂದ ನಿರ್ಮಿತವಾದ ಚೀನಾಂಬರಗಳೂ ಇದ್ದುವು. ರುಸ್ತುಂ ಈ ಸಂಪತ್ತುಗಳನ್ನೆಲ್ಲಾ ಒಟ್ಟು ಕೂಡಿಸಿ, ಸಾವಿರಾರು ಒಂಟೆಗಳ ಮೇಲೆ ಶಿಸ್ತಾನಕ್ಕೆ ಸಾಗಿಸಿದನು. ಕೋಟೆಯ ಗೋಡೆಗಳ ಒಂದೇ ಒಂದು ಕಲ್ಲು ಸಹ ಉಳಿಯದಂತೆ ದುರ್ಗವನ್ನು ಸಂಪೂರ್ಣವಾಗಿ ಧ್ವಂಸಮಾಡಿದನು.

ವೀರಶ್ರೀ ಮತ್ತು ಭಾಗ್ಯಶ್ರೀಗಳನ್ನು ತನ್ನ ಭುಜಾಗ್ರಗಳಲ್ಲಿ ಬಂಧಿಸಿದ ರುಸ್ತುಂ ಶಿಸ್ತಾನಕ್ಕೆ ಮರಳಿದಾಗ ಜಾಲನು ನಾಡಿನ ಪ್ರಜೆಗಳ ಕಣ್ಮುಂದೆ ಕುಮಾರನನ್ನು ವಿಶೇಷವಾಗಿ ಗೌರವಿಸಿದನು. ರುದಾಬೆ ಮಗನನ್ನು ಎದೆಗಪ್ಪಿಕೊಂಡು ಹೆಮ್ಮೆಯಿಂದ ಒಲವಿನಿಂದ ಅವನ ಹಣೆಯನ್ನು ಚುಂಬಿಸಿದಳು. ಆ ದಿನ ನಗರದಲ್ಲೆಲ್ಲಾ ಅತಿ ಸಂಭ್ರಮದ ಆನಂದೋತ್ಸವ ಜರಗಿತು.

## ನಾಲ್ಕು

ರುಸ್ತುಂ ತಾರುಣ್ಯದಲ್ಲಿ ಕಾಲಿಟ್ಟಾಗ ಇರಾನಿನ ಸಾಮ್ರಾಜ್ಯಕ್ಕೆ ಕೆಲವು ವರ್ಷಗಳ ವರೆಗೆ ಕಡಲಲ್ಲಿ ಒಂದರ ಅನಂತರ ಇನ್ನೊಂದರಂತೆ ಅಲೆಗಳು ಬರುವಂತೆ ಅನೇಕ ಸಂಕಟಗಳೂ ವಿಪತ್ತುಗಳೂ ಪ್ರಾಪ್ತವಾದುವು. ಆದರೆ ವೃದ್ಧನಾದ ಮತ್ತು ಹಾಲುಗೂದಲಿನ ಜಾಲ ಇವರ ಅವಟೆಂಬ ನೇಸರು ಈ ವಿಪತ್ತುಗಳ ತಿಮಿರವನ್ನು ಪರಿಹರಿಸಿದವು. ವಿವೇಕಿಯೂ ಮಹಾ ಪುರುಷನೂ ಆದ ಮಿನುಚೆರ ರಾಜನು ತನ್ನ ಜೀವನ ಯಾತ್ರೆ ಮುಗಿಯುವ ಹೊತ್ತು ಸನ್ನಿಹಿತವಾಗಿದೆಯೆಂದು ತಿಳಿದು ರಾಜ್ಯಭಾರದ ಹೊರೆಯನ್ನು ಮಗನ ಮಸ್ತಕದ ಮೇಲಿರಿಸಿ ರಾಜ್ಯಾಭಿಷೇಕ ಮಾಡಿ "ನ್ಯಾಯ ಮತ್ತು ಧರ್ಮ ಮಾರ್ಗಗಳಿಂದ ರಾಜ್ಯಭಾರವೆಸಗಬೇಕೆ"ಂದು ಮಗನಿಗೆ ಉಪದೇಶಿ

ಸಿದನು. ಅವನು, "ರಾಜ್ಯವನ್ನು ಹಗೆಗಳು ಆಕ್ರಮಿಸಿದಾಗ ರಾಜ್ಯರಕ್ಷಣೆಗೆ ವೃದ್ಧನಾದ ಸಾಸ, ಹಾಲುಗೂದಲಿನ ಜಾಲ ಮತ್ತು ಆ ವಂಶವೃಕ್ಷದ ನೂತನ ಶಾಖೆಯಾದ ರುಸ್ತುಂ ಇವರನ್ನು ಬರಮಾಡಿಕೋ. ಇಂದು ಬೇರೊಂದು ಊರಿನಲ್ಲಿ ನಾಳೆ ಮಗದೊಂದು ಊರಿನಲ್ಲಿ ವಿಹರಿಸುತ್ತಿರುವ ಕಾಲನು ನನ್ನ ಸರದಿ ಬಂದಾಗ ಇಲ್ಲಿಗೂ ಬಂದೇ ಬರುವನು; ಓ ಕೊಡದ ನಾಡಿಗೆ ಪಯಣಗೈಯ್ಯಲು ನನ್ನನ್ನು ಆಹ್ವಾನಿಸುವನು. ನಾನು ಅಂತಿಮ ಯಾತ್ರೆಯನ್ನು ಕೈಗೊಳ್ಳಬೇಕಾಗುವುದು." ಎಂದು ನೂತನ ರಾಜನಿಗೆ ಉಪದೇಶಿಸಿದನು.

ಹೊಸ ಅರಸನಿಗೆ ತಂದೆಯ ಉಪದೇಶಾಮೃತ ಅಷ್ಟೊಂದು ಸೊಗಸೆನಿಸಲಿಲ್ಲ. ಹಳೆಯ ರಾಜ್ಯಭಾರ ಸಂಪ್ರದಾಯಗಳನ್ನು ಅವನು ಮನ್ನಿಸಲಿಲ್ಲ. ಇದರಿಂದ ದೇಶದಲ್ಲಿ ಹಿಂಸೆ ಮತ್ತು ಅತ್ಯಾಚಾರಗಳು ಹೆಚ್ಚಿದುವು. ಪ್ರಜೆಗಳು ಹೊಸ ಅರಸನ ದಬ್ಬಾಳಿಕೆಯನ್ನು ಸಹಿಸದಾದರು. ಅವರು ಸಾಸನಿಗೆ, "ನೀನು ಇರಾನಿನ ರಾಜನಾಗು," ಎಂದು ಮೊರೆಯಿಟ್ಟರು.

ಆ ವೃದ್ಧ ಯೋಧ "ನಾನು ಗತಿಸಿದ ಅರಸು ಮಿನುಚೆರನ ವಂಶದಲ್ಲಿ ನಿಷ್ಠೆಯುಳ್ಳವನು. ಆ ವಂಶದ ಸೇವೆಗೆ ಈ ಒಡಲು ಮೀಸಲಾಗಿದೆ." ಎಂದು ಜನರ ಮೊರೆಗೆ ಉತ್ತರಿಸಿದನು.

ಆ ಕಾಲದಲ್ಲಿ ತಾರ್ತರರು ಇರಾನಿನ ಕಡು ಹಗೆಗಳಾಗಿದ್ದರು. ಆ ತಾರ್ತರರ ರಾಜಕುಮಾರನ ಹೆಸರು ಅಫ್ರಸಿಯಾಬನೆಂದು. ಇರಾನನ್ನು ಸ್ವಾಧೀನಪಡಿಸಿಕೊಳ್ಳಬೇಕೆಂಬ ಹಂಬಲ ಅವನ ಎದೆಯಲ್ಲಿ ಬಹುದಿನಗಳಿಂದ ನೆಲಸಿದ್ದಿತು. ಇರಾನನ್ನು ವಶಪಡಿಸಿಕೊಳ್ಳಲು ಇದೇ ಸುವರ್ಣಾವಸರವೆಂದು ಅವನು ಭಾವಿಸಿದನು. ಅವನು ದೊಡ್ಡ ಸೇನೆಯೊಂದನ್ನು ಕಲೆಹಾಕಿ ಇರಾನಿನ ಮೇಲೆ ದಂಡೆತ್ತಿ ಬರುವ ಸಿದ್ಧತೆಗಳನ್ನು ನಡೆಸಿದನು.

ಈ ಸುದ್ದಿ ಇರಾನಿನ ರಾಜನಿಗೆ ತಿಳಿಯಿತು. ತಂದೆ ಮರಣಶಯ್ಯೆಯಿಂದ ಆಡಿದ ಉಪದೇಶ ವಚನಗಳು ಅವನ ಸ್ಮೃತಿಪಥದಲ್ಲಿ ಪ್ರವೇಶಿಸಿದುವು. ಅವನು ಸಾಸನ ಸಲಹೆಯನ್ನು ಕೇಳಿದನು. ಆ ವೃದ್ಧನು "ನೀನು ನಿನ್ನ ಹಿರಿಯರನ್ನು ಸ್ಮರಿಸು. ಅವರು ಅವಲಂಬಿಸಿದ ನ್ಯಾಯಮಾರ್ಗದಲ್ಲಿಯೇ ರಾಜ್ಯವಾಳು. ಆಗ ವಿಪತ್ಕಾಲದಲ್ಲಿ ನಿನಗೆ ಪ್ರಜೆಗಳ ನೆರವು ಸಿಗುವುದು." ಎಂದು ಬೋಧಿಸಿದನು. ಮತ್ತೆ ಕೆಲ ದಿನಗಳಲ್ಲಿಯೇ

ಆ ವೃದ್ಧವೀರನು ರೋಗಗ್ರಸ್ತನಾಗಿ, ಅಗಲಿದ ರಾಜನನ್ನು ಸೇರಲೆಂಬಂತೆ ಪರಲೋಕ ಯಾತ್ರೆಯನ್ನು ಕೈಕೊಂಡನು.

ಇರಾನನ್ನು ಆಕ್ರಮಿಸಿ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಅಫ್ರಸಿಯಾಬನ ಉತ್ಕಟಾಕಾಂಕ್ಷೆಯಾಗಿದ್ದಿತು. ಅವನು ದೊಡ್ಡ ಪಡೆಯೊಂದನ್ನು ಕಲೆಹಾಕಿ ಇರಾನಿನ ಮೇಲೆ ದಂಡೆತ್ತಿ ಬಂದನು ಸೈನಿಕರ ಸೆರಳು ಮರುಭೂಮಿಯನ್ನು ಕತ್ತಲಿಸಿತು. ಅವರ ಪಾದಧೂಳಿ ನಭೋಮಂಡಲವನ್ನು ಮುಸುಕಿತು. ಆನೆಗಳ ಬೃಂಹಿತಗಳು ಬೆಟ್ಟಗಳನ್ನು ನಡುಗಿಸಿದುವು. ಕಹಳೆಗಳ ಮೊಳಗುಗಳು ದಿಗಂತದಲ್ಲಿ ಮಾರುಲಿದುವು. ರಣವಾದ್ಯಗಳ ಭೀಷಣ ನಿನಾದಗಳು ರಾಜನ ಹೃದಯವನ್ನು ವಿದೀರ್ಣಗೊಳಿಸಿದುವು. ಇರಾನಿನ ವೀರಾಳುಗಳು ಧೈರ್ಯದಿಂದ ಕಾದಾಡಿದರು ಆದರೆ ಉಕ್ಕಿ ಬರುತ್ತಿರುವ ಕಡಲನ್ನು ಬಿದಿರ ಮೆಳೆ ಎಂತು ತಡೆಯಬಲ್ಲುದು? ಹಗೆಗಳನ್ನು ತಡೆದು ನಿಲ್ಲಿಸುವುದು ಇರಾನಿನ ಯೋಧರಿಗೆ ಅಸದಳವೆನಿಸಿತು ಅವರು ಯುದ್ಧರಂಗದಲ್ಲಿ ಪರಾಜಿತರಾಗಿ ಹಿಮ್ಮೆಟ್ಟಿದರು.

ಜಾಲನಿಗೆ ರಾಜನ ಕರೆ ಬಂತು. ಅವನು ಮಾವ ಮಿಹ್ರಾಬನೊಡನೆ ಕೊಳುಗುಳದಲ್ಲಿ ಹಗೆಗಳನ್ನು ಎದುರಿಸಲು ಅಣಿಯಾದನು ಈ ವೇಳೆಯಲ್ಲಿ ವೀರ ರುಸ್ತುಂ ಮಾರಿ ಬೇನೆಗೆ ಗುರಿಯಾದುದರಿಂದ ಹಾಸಿಗೆ ಹಿಡಿದು ನರಳುತ್ತಿದ್ದನು. ಆದುದರಿಂದ ಅವನಿಗೆ ಯುದ್ಧದಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ.

ಜಾಲನು ರಣಕ್ಷೇತ್ರದಲ್ಲಿ ತಾರ್ತರರನ್ನು ವೀರಾವೇಷದಿಂದ ಎದುರಿಸಿದನು. ಶತ್ರುಪಕ್ಷದ ನಾಯಕನೊಬ್ಬನು ಕೊಡಲಿಯನ್ನು ಪ್ರಯೋಗಿಸಿ ಜಾಲನ ಲೋಹ ಕವಚವನ್ನು ಸೀಳಿದನು. ಜಾಲನು ಕೋಪಗೊಂಡ ಪ್ರಳಯ ಭೈರವನಾದನು. ಅವನು ಕುದುರೆಯಿಂದಿಳಿದು ತಂದೆ ಸಾಮನ ಗದೆಯನ್ನು ಹಿಡಿದೆತ್ತಿ ಹಗೆಯ ನೆತ್ತಿಗೆ ಹೊಡೆದನು. ತಾರ್ತರ ನಾಯಕನ ಮಸ್ತಕ ನುಚ್ಚುನುರಿಯಾಯಿತು. ದೇಹದಿಂದ ಕೋಡಿವರಿದ ನೆತ್ತರ ಹೊನಲು ನೆಲವನ್ನು ಕೆಂಪಾಗಿಸಿತು. ಜಾಲನ ಗದೆಯ ಹೊಯ್ಲುಗಳನ್ನು ತಾರ್ತರ ಸೈನಿಕರು ತಾಳದಾದರು. ಅರಿಸೇನೆ ಭಯದಿಂದ ತತ್ತರಿಸಿತು. ಕೊನೆಗೆ ಹಗೆಗಳು ರಣರಂಗದಿಂದ ಹಿಮ್ಮೆಟ್ಟಿ ಕಾಲಿಗೆ ಬುದ್ಧಿ ಹೇಳಿದರು. ಜಾಲನು ಕುದುರೆಯೇರಿ ಹಗೆಗಳನ್ನು ಹಿಂಬಾಲಿಸಿದನು. ಅವರು ಈ

ಕಾಲಯಮುನ ದವಡೆಯಿಂದ ಪಾರಾದರೆ ಸಾಕೆಂದು ಪಲಾಯನ ಮಾಡಿ ದರು. ಹೀಗೆ ಹಾಲುಗೂದಲಿನ ಜಾಲನು ಅಪ್ರಸಿಯಾಬನ ದೌರ್ಜನ್ಯ ದಿಂದ ಮೃತ ಚಕ್ರವರ್ತಿಯ ಕುಮಾರರನ್ನು ಕಾಪಾಡಿ, ಆಕ್ರಮಣಗಾರ ರನ್ನು ನಾಡಿನಿಂದ ಹೊಡೆದೋಡಿಸಿ ತನ್ನ ಅವಿಚಲ ಸ್ವಾಮಿನಿಷ್ಠೆಯನ್ನು ಜಗತ್ತಿಗೆ ತೋರಿಸಿದನು

ಯುದ್ಧರಂಗದಲ್ಲಿ ಸೋತು ಹಿಮ್ಮೆಟ್ಟಿದರೂ ಅಫ್ರಸಿಯಾಬನ ರಾಜ್ಯ ತೃಷ್ಣೆ ಮಾತ್ರ ಹಿಂಗಲಿಲ್ಲ. ಇರಾನನ್ನು ಜೈಸಬೇಕೆಂಬ ಕಾಂಕ್ಷೆ ಅವನ ಎದೆ ಯಲ್ಲಿ ಇನ್ನಷ್ಟು ಉಗ್ರವಾಗಿ ಪ್ರಜ್ವಲಿಸತೊಡಗಿತು. ತನ್ನ ಸೇನೆಗಳನ್ನು ಬಲ ಪಡಿಸಲು ಅವನು ಅವಿಶ್ರಾಂತ ಪರಿಶ್ರಮವನ್ನು ಕೈಗೊಂಡನು. ಕೆಲವು ವರ್ಷಗಳಲ್ಲಿ ಮೊದಲಿಗಿಂತಲೂ ಅಧಿಕವಾದ ಸೇನೆಯನ್ನು ಸಂಗ್ರಹಿಸಿ ಇರಾ ನಿನ ಮೇಲೆ ದಂಡೆತ್ತಿ ಬಂದನು. ಈಗ ಇರಾನಿನಲ್ಲಿ ಅರಸನಿರಲಿಲ್ಲ. ಅವನು ಇಹಲೋಕವನ್ನು ಬಿಟ್ಟು ಆಗಲೇ ಕೆಲವು ಕಾಲವಾಗಿತ್ತು. ಅಫ್ರಸಿಯಾಬನು ದಂಡೆತ್ತಿ ಬರುವನೆಂಬ ವಾರ್ತೆಯನ್ನು ಕೇಳಿ ಇರಾನಿನ ರಾಜಕುಮಾರರು ಭಯಕಂಪಿತರಾಗಿ ತಲೆಮರೆಸಿಕೊಂಡು ರಾಜಧಾನಿಯನ್ನು ಬಿಟ್ಟು ಓಡಿ ಹೋದರು ರಾಜಧಾನಿಯಲ್ಲಿದ್ದ ಸರದಾರರು ಅಫ್ರಸಿಯಾಬನ ಆಕ್ರಮ ಣದ ಸುದ್ದಿಯನ್ನು ಕೇಳಿ ಶಿಸ್ತಾನಕ್ಕೆ ಓಡಿಬಂದರು ಅವರು "ಯುದ್ಧದಲ್ಲಿ ನಮ್ಮ ಮುಂದಾಳಾಗಿ ಕಾದಾಡಲು ನಮಗೆ ಚಕ್ರವರ್ತಿಯಾಗಲೀ ನಾಯಕ ನಾಗಲೀ ಇಲ್ಲ. ತಾರ್ತರರಿಂದ ನಾಡನ್ನು ಸಲಹಲು ನೀನೇಕೆ ಬರಲೊಲ್ಲೆ?" ಎಂದು ಜಾಲನನ್ನು ಪ್ರಾರ್ಥಿಸಿದರು.

"ಈಗ ನಾನು ಒಬ್ಬ ಹಗೆಗಲ್ಲದೆ ಬೇರಾರಿಗೂ ಅಂಜುವುದಿಲ್ಲ. ಅವ ನೀಗ ನನ್ನನ್ನು ಸೋಂಕಿದ್ದಾನೆ. ವೃದ್ಧಾಪ್ಯವೆಂಬುದೇ ಆ ಹಗೆ. ನಾನು ಕೈದುಕೊಳ್ಳಲು ಈಗ ಮುದುಕನಾಗಿದ್ದೇನೆ. ಆದರೆ ದೈವಾನುಗ್ರಹದಿಂದ ನಿಮ್ಮ ರಕ್ಷಣೆಗೆ ನಮ್ಮ ಕುಲವೃಕ್ಷದ ನೂತನ ಶಾಖೆಯಾದ ರುಸ್ತುಮನಿ ದ್ದಾನೆ." ಎಂದು ಆ ಸರದಾರರನ್ನು ಜಾಲ ಸಮಾಧಾನಪಡಿಸಿದನು.

ಇರಾನಿನ ಸೇನೆಗೆ ರುಸ್ತುಮನನ್ನೇ ದಂಡನಾಯಕನನ್ನಾಗಿ ನಿಯ ಮಿಸಬೇಕೆಂದು ಜಾಲನ ಆಲೋಚನೆಯಾಗಿತ್ತು. ಅವನು ಮಗನನ್ನು ಬರಲು ಹೇಳಿಕಳುಹಿಸಿದನು. ರುಸ್ತುಮನು ಬಂದು ತಂದೆಯ ಪಾದಗಳಿಗೆ ನಮಿಸಿ ನಿಂತನು.

"ಕಂದಾ, ನೀನಿನ್ನೂ ತರುಣನಾಗಿದ್ದೀಯೆ. ನೀನು ಅರಮನೆಯಲ್ಲಿಯೇ ಉಳಿದು ವಿನೋದ ವಿಹಾರಗಳಲ್ಲಿ ಸೊಗವನ್ನು ಉಣ್ಣುವುದು ನ್ಯಾಯವೂ ಸಹಜವೂ ಆಗಿದೆ. ಸೇಡಿಗೋಸುಗ ಹಾತೊರೆಯುತ್ತಿರುವ ಭೀಕರ ತಾರ್ತರ ಸೇನೆಯೊಡನೆ ಯುದ್ಧ ಮಾಡಲು ನಾನು ನಿನ್ನನ್ನು ಕಳುಹಿಕೊಡುವ ಯೋಚನೆಗೆ ಒಳಗಾಗಿದ್ದೇನೆ" ಎಂದು ಜಾಲನು ಮಗನಿಗೆ ಹೇಳಿದನು.

"ಅಪ್ಪಾ, ನೀನು ಹೇಳಿದಂತೆ ನಾನು ತರುಣನೆಂಬುದು ನಿಜ ನಾನು ಸ್ಪೆಂಡ ಪರ್ವತದ ದುರ್ಗವನ್ನು ವಶಪಡಿಸಿಕೊಂಡಾಗ ಎಳೆಯನಾಗಿದ್ದೆ. ಬಿಳಿಯಾನೆಯನ್ನು ಕೊಂದಾಗ ನಾನು ಕೇವಲ ಬಾಲಕನಾಗಿದ್ದೆ ನನ್ನ ಜೀವ ಅರಮನೆಯ ಸುಖಭೋಗಗಳನ್ನೋ, ಉದ್ಯಾನ ವಿಹಾರಗಳನ್ನೋ ಅಥವಾ ನರ್ತಕಿಯರ ಗಾಯನ ನರ್ತನಗಳನ್ನೋ ಬಯಸುತ್ತಲಿಲ್ಲ ನನಗೊಂದು ಕುದುರೆ, ಈ ತೋಳುಗಳಿಗೊಪ್ಪುವ ಗದೆ, ಇವೆರಡನ್ನು ಕೊಡು ಆ ಮೇಲೆ ರಣರಂಗದಲ್ಲಿ ನದೆಬಡಿಯಲಿರುವ ವಿರೋಧಿ ವರ್ಗವನ್ನು ತೋರಿಸು" ಎಂದು ವಿನೀತಭಾವದಲ್ಲಿ ತಂದೆಗೆ ನಮಿಸಿ ರುಸ್ತುಂ ಮಾರ್ನುಡಿದನು.

ಪುತ್ರನ ವೀರ ವಚನಗಳನ್ನು ಕೇಳಿ ಜಾಲನಿಗೆ ಸಂತೋಷವಾಯಿತು. ಅವನು ಲಾಯದಲ್ಲಿರುವ ಕುದುರೆಗಳನ್ನೆಲ್ಲಾ ಮಗನಿಗೆ ತೋರಿಸಿದನು. ರುಸ್ತುಂ ಆ ಕುದುರೆಗಳ ಬೆನ್ನುಗಳನ್ನು ಕೈಗಳಿಂದ ಅಮುಕುವಾಗ ಬೆನ್ನುಗಳು ಬಾಗಿ ನೆಲವನ್ನು ಮುಟ್ಟಿದುವು. ಈ ಅಶ್ವಗಳು ರುಸ್ತುಮನ ಮೆಚ್ಚಿಗೆ ಪಡೆಯಲಿಲ್ಲ. ಅವು ತನ್ನ ಶರೀರ ಭಾರವನ್ನು ಹೊರಲಾರವೆಂದು ಅವನು ಗ್ರಹಿಸಿ ಅವನ್ನು ತಿರಸ್ಕರಿಸಿದನು. ಈ ವೇಳೆಯಲ್ಲಿ ಹಿಂದೂಸ್ತಾನದಿಂದ ಕೆಲವರು ಅಶ್ವ ವ್ಯಾಪಾರಿಗಳು ಶಿಸ್ತಾನಕ್ಕೆ ಬಂದರು ಅವರು ಮಾರಲೆಂದು ಉತ್ತಮವಾದ ಕುದುರೆಗಳನ್ನು ತಂದಿದ್ದರು. ಈ ಗುಂಪಿನಲ್ಲಿ ಒಂದು ಸುಂದರವಾದ ಕುದರೆಯಿದ್ದಿತು. ಅದು ಇತರ ಅಶ್ವಗಳಿಗಿಂತಲೂ ಉನ್ನತವೂ ಬಲಿಷ್ಠವೂ ಆಗಿತ್ತು. ಈ ಉತ್ತಮಾಶ್ವ ರುಸ್ತುಮನ ಕಣ್ಮನಗಳನ್ನು ಸೆಳೆಯಿತು. ಅವನು ಆ ಕುದುರೆಯ ಮೈಯನ್ನು ಸ್ಪರ್ಶಿಸಿ ತಡವಲೆಂದು ಮುಂದೆ ಹೋದಾಗ ಆ ಬಣಜಿಗರಲ್ಲೊಬ್ಬನು "ಜೋಕೆ! ಆ ಕುದುರೆಯನ್ನು ಮುಟ್ಟಬೇಡ; ತನ್ನನ್ನು ಸ್ಪರ್ಶಿಸಿದ ಅನೇಕ ಮಂದಿಯನ್ನು ಅದು ಕೊಂದು ಹಾಕಿದೆ." ಎಂದು ರಸ್ತುಮನನ್ನು ಎಚ್ಚರಿಸಿದನು.

ರುಸ್ತುಂ ಒಂದು ಉರುಳು ಹಗ್ಗವನ್ನು ತಂದು ಕುದುರೆಯ ಕೊರಳು ಉರುಳೊಳಗೆ ಸಿಗುವಂತೆ ಹಗ್ಗವನ್ನು ಎಸೆದನು. ಕುದುರೆ ರೊಚ್ಚಿಗೆದ್ದು ಕೆನೆಯುತ್ತ, ಬಾಯನ್ನು ಅಗಲಿಸಿ ರುಸ್ತುಮನನ್ನು ಕಡಿಯಬೆಂದು ಧಾವಿಸಿತು. ರುಸ್ತುಂ ಬೆಟ್ಟಗಳು ಬಿರಿವಂತೆ ಒಮ್ಮೆ ಗರ್ಜಿಸಲು ಅವನ ವೀರ ಗರ್ಜನೆಯನ್ನು ಕೇಳಿ ಕುದುರೆ ಸ್ತಂಭಿತವಾಯಿತು. ಅವನು ಮುಷ್ಟಿಯನ್ನು ಬಿಗಿಹಿಡಿದು ಕುದುರೆಯ ಬೆನ್ನ ಮೇಲೆ ಗುದ್ದಲು ಆ ಪ್ರಹಾರದ ಆಘಾತವನ್ನು ತಾಳಲಾರದೆ ಕುದುರೆ ನೆಲದ ಮೇಲೆ ಬಿದ್ದು ಹೊರಳಾಡಿತು. ಅನಂತರ ಅದು ರುಸ್ತುಮನ ಪಾದಗಳನ್ನು ಸಮೀಪಿಸಿ ತಲೆಬಾಗಿ ನಿಂತಿತು.

ಆ ಕುದುರೆಯ ಮೈಬಣ್ಣ ಕೇಸರಿ. ಅಲ್ಲಲ್ಲಿ ಮೈಮೇಲೆ ಕೆಂಪು ಚುಕ್ಕೆಗಳು ಬೆಳಗುತ್ತಿದ್ದುವು. ಕಣ್ಣುಗಳು ಇರುಳಿನಂತೆ ಕಪ್ಪಾಗಿದ್ದುವು. ಗೊರಸುಗಳು ಉಕ್ಕಿಗಿಂತ ಗಟ್ಟಿಯಾಗಿದ್ದುವು. ರುಸ್ತುಮನು ಕುದುರೆಯ ಬೆನ್ನನ್ನು ಕೈಗಳಿಂದ ಒತ್ತಿ ಬಾಗಿಸಲು ಪ್ರಯತ್ನಿಸಿದನು. ಆದರೆ ಬೆನ್ನು ಬಂಡೆಗಲ್ಲಿನಂತೆ ಸ್ಥಿರವಾಗಿ ನಿಂತಿತು. “ಇದು ನನಗೊಪ್ಪುವ ಕುದುರೆಯಾಗಿದೆ!” ಎಂಬ ಹರ್ಷೋದ್ಗಾರ ವೀರನ ಗಂಟಲಿಂದ ಹೊರಟಿತು. “ಈ ಕುದುರೆಗೆ ಏನು ಬೆಲೆ ಕೊಡಲಿ?” ಎಂದು ಅವನು ವ್ಯಾಪಾರಿಯನ್ನು ಪ್ರಶ್ನಿಸಿದನು.

“ನಾವು ಈ ಕುದುರೆಯನ್ನು ರುಸ್ತುಮನ ರಕ್ಷ ಎಂಬ ಹೆಸರಿನಿಂದ ಕರೆಯುತ್ತೇವೆ. ನೀನು ರುಸ್ತುಮನಾಗಿದ್ದರೆ ಈ ಕುದುರೆಯನ್ನೇರಿ ಇರಾನನ್ನು ಕಾಪಾಡಲೆಂದು ಉಚಿತವಾಗಿ ಕೊಡುತ್ತೇವೆ” ಎಂದು ವರ್ತಕ ಮಾರ್ನುಡಿದು ಕುದುರೆಯನ್ನು ರುಸ್ತುಮನಿಗೊಪ್ಪಿಸಿದನು. ರಕ್ಷನಷ್ಟು ವೇಗವುಳ್ಳುದೂ ವಿಧೇಯತೆಯುಳ್ಳುದೂ ಆದ ಕುದುರೆ ಆ ಕಾಲದಲ್ಲಿ ಇರಾನಿನಲ್ಲಿಯೇ ಇರಲಿಲ್ಲವಂತೆ.

ಜಾಲನು ರುಸ್ತುಮನಿಗೆ ಕುದುರೆ ಸವಾರಿ, ವಿವಿಧ ಕೈದುಗಳ ಪ್ರಯೋಗ ಮೊದಲಾದ ಯುದ್ಧ ವಿದ್ಯೆಗಳನ್ನು ಕಲಿಸಿ ನಿಷ್ಣಾತನನ್ನಾಗಿ ಮಾಡಿದನು. ದಿನಗಳೆದಂತೆ ಮಗನು ಶಸ್ತ್ರ ವಿದ್ಯೆಯಲ್ಲಿ ಪಂಡಿತನಾದುದನ್ನು ಕಂಡು ತಂದೆಗೆ ಸಂತೋಷವಾಯಿತು.

ಒಂದು ದಿನ ತರುಣ ವೀರನು “ಇತರರು ಬಳಸುವ ಗದೆಗಳು ತನ್ನ ತೋಳುಗಳಿಗೆ ಮರದ ಟೊಂಗೆಯಷ್ಟು ಹಗುರವಾಗಿವೆ. ಭಾರವುಳ್ಳ ಒಂದು ದೊಡ್ಡ ಗದೆಯನ್ನು ನನಗೆ ದಯಪಾಲಿಸಬೇಕು,” ಎಂದು ತಂದೆಯನ್ನು

ಪ್ರಾರ್ಥಿಸಿದನು.

ಆಯುಧ ಶಾಲೆಯಲ್ಲಿ ಸಾನಸ ಗದೆಯೊಂದು ಇದ್ದಿತು. ಅದು ಬಲಿಷ್ಠವಾದ ಗದೆ, ಹಲವು ಯುದ್ಧಗಳಲ್ಲಿ ಸಾನಸಿಗೆ ಜಯವನ್ನೊದಗಿಸಿದ ಗದೆ. ಒಮ್ಮೆ ರುಸ್ತುಂ ಆಯುಧಾಗಾರಕ್ಕೆ ಹೋಗಿದ್ದಾಗ ಈ ಗದೆ ಅವನ ದೃಷ್ಟಿಗೆ ಬಿತ್ತು. ಅದನ್ನು ಕಾಣಲು ಅವನ ಕಣ್ಣುಗಳು ಪ್ರಕಾಶಮಾನವಾದುವು. ಅವನು ಆ ಗದೆಯನ್ನು ತೆಗೆದುಕೊಂಡು ಕೆಲ ದಿನಗಳಲ್ಲಿಯೇ ಅದನ್ನು ತಿರುಗಿಸಿ ಬಳಸುವ ರೀತಿಯನ್ನು ಚೆನ್ನಾಗಿ ಅಭ್ಯಾಸ ಮಾಡಿದನು.

ಆ ಮೇಲೆ ಕೆಲವೇ ದಿನಗಳಲ್ಲಿ ರುಸ್ತುಂ ಒಂದು ದೊಡ್ಡ ದಂಡನ್ನು ಸಂಗ್ರಹಿಸಿ ಅದಕ್ಕೆ ತಾನೇ ದಂಡನಾಯಕನಾದನು. ಈ ಪಡೆ ಅಫ್ರಸಿಯಾಬನನ್ನು ಎದುರಿಸಲು ದಂಡಯಾತ್ರೆಯನ್ನು ಕೈಗೊಂಡಿತು. ಜಾಲನು ಈ ದಂಡಯಾತ್ರೆಯಲ್ಲಿ ಭಾಗವಹಿಸಲಿಲ್ಲ ಕೊಳುಗುಳದಿಂದ ದೂತರು ವಾರ್ತೆಯನ್ನು ತಂದ ಅನಂತರ ತಾನು ರಣರಂಗಕ್ಕೆ ಹೋಗುವುದಾಗಿ ನಿರ್ಧರಿಸಿ, ಅರಮನೆಯಲ್ಲೇ ಉಳಿದಿದ್ದನು.

ಇರಾನನ್ನು ಆಕ್ರಮಿಸಿದ ಅಫ್ರಸಿಯಾಬನು "ಈ ಜಾಲನು ಹಣ್ಣು ಹಣ್ಣು ಮುದುಕನಾಗಿದ್ದಾನೆ ಮಗ ರುಸ್ತುಂ ಇನ್ನೂ ಮೀಸೆ ಮೊಳೆಯದ ಹುಡುಗ. ಹಾ! ಹಾ! ಎನ್ನುವುದರೊಳಗೆ ಇರಾನನ್ನು ಗೆದ್ದು ತಾರ್ತರ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವೆನು." ಎಂದು ತನ್ನ ಸೇನಾ ನಾಯಕರೊಡನೆ ಹೇಳಿದ. ಈ ಆತ್ಮಸ್ತುತಿ ಜಾಲನ ಕಿವಿಗಳಿಗೆ ಬಿದ್ದಿತು. "ಶೂನ್ಯವಾದ ಇರಾನಿನ ಸಿಂಹಾಸನದ ಮೇಲೆ ಕುಳ್ಳಿರಿಸಲು ರಾಜಕುಟುಂಬದ ಬಾಲಕನೊಬ್ಬನಿದ್ದಿದ್ದರೆ ಒಳ್ಳಿತಾಗುತ್ತಿದ್ದಿತು" ಎಂದು ಅವನು ಆಲೋಚಿಸಿ, ಹಿಂದಿನ ಚಕ್ರವರ್ತಿಯ ಸಂತಾನದವರು ಯಾರಾದರೂ ಇರುವರೇ ಎಂದು ಅರಸಲು ಅವನು ರಾಜ್ಯದ ಉದ್ದಗಲಕ್ಕೂ ಚಾರರನ್ನು ಅಟ್ಟಿದನು. ಹೀಗೆ ಅನ್ವೇಷಣೆಗೆ ತೆರಳಿದ ಚಾರರಲ್ಲಿ ಒಬ್ಬನು ಬಂದು "ಚಕ್ರವರ್ತಿಯ ಮಗ ಕಾಯಕೋಬಾದ ಎಂಬ ಕುಮಾರನು ಎಲ್‌ಬ್ರೂಜ ಪರ್ವತದಲ್ಲಿ ಅಡಗಿರುವನು. ಅವನು ಮೇಧಾವಿಯೂ ಶೂರನೂ ಆಗಿರುವನು." ಎಂಬ ಸುದ್ದಿಯನ್ನು ತಂದನು.

ಈ ವಾರ್ತೆ ಜಾಲನ ಚಿತ್ತಕ್ಕೆ ಸಂತಸವನ್ನಿತ್ತಿತು. ಅವನು ಸೇನಾ ನಾಯಕರನ್ನು ಕರೆದು, ನಮಗೊಬ್ಬ ರಾಜನಿದ್ದರೆ, ನಮ್ಮ ಸೇನಾ ಸಮೂಹದಲ್ಲಿ ಐಕ್ಯಮತ್ಯ ನೆಲಸುವುದು ಅರಸನಿಲ್ಲದ ರಾಜ್ಯ ಚಂದ್ರನಿಲ್ಲದ ಇರು

ಳಂತೆ ಎಂದು ನುಡಿದು ಸಿಂಹಾಸನದ ಹಕ್ಕುದಾರನು ಎಲ್‌ಬ್ರೂಜ ಪರ್ವತ ದಲ್ಲಿರುವನೆಂಬ ಗೋಪ್ಯ ವಿಷಯವನ್ನು ಅವರಿಗೆ ಅರುಹಿದನು. ಕಾಯು ಕೋಬಾದನೇ ಮುಂದಿನ ಚಕ್ರವರ್ತಿಯಾಗಬೇಕೆಂದು ನಾಯಕರೂ ಪ್ರಧಾನಿ ಗಳೂ ಒಕ್ಕೊರಳಿನಿಂದ ಒಪ್ಪಿದರು ಸೇನೆಯ ಮುಂದಾಳುತನವನ್ನು ವಹಿಸಿ ಯೋಧರಲ್ಲಿ ನವೋತ್ಸಾಹವನ್ನು ಕುದುರಿಸಲು ರಾಜಕುಮಾರನನ್ನು ಕರೆತರಬೇಕೆಂದು ನಿರ್ಧರಿಸಿದರು ತಂದೆಯ ಆಜ್ಞೆಯಂತೆ ಕಾಯುಕೋಬಾ ದನನ್ನು ಎಲ್‌ಬ್ರೂಜ ಪರ್ವತದಿಂದ ಕರೆತರಲು ಪರಿವಾರ ಸಮೇತನಾಗಿ ರುಸ್ತುಮನೇ ತೆರಳಿದನು

ರುಸ್ತುಮನ ಕುದುರೆ ರಕ್ಷ ಕೆನೆಯುತ್ತಾ ಮಾರ್ಗವನ್ನು ಆಕ್ರಮಿಸುವ ಪರಿಯನ್ನು ಕಂಡು ಶತ್ರು ಸೈನಿಕರು ದಿಗಿಲಿನಿಂದ ನಡುಗಿದರು. ಕೆಲವರು ಕುದುರೆಯನ್ನು ತಡೆದು ನಿಲ್ಲಿಸುವ ಸಾಹಸಕ್ಕೆ ತೊಡಗಿ, ಅದರ ಕಾಲ ತುಳಿ ತಕ್ಕೆ ಸಿಲುಕಿ ನುಗ್ಗಾದರು ಕೆಲವರು ರುಸ್ತುಮನ ಭೀಮಗದಾಪ್ರಹಾರ ಗಳಿಗೆ ತಮ್ಮ ತಲೆಗಳನ್ನು ಒಪ್ಪಿಸಿದರು ರುಸ್ತುಂ ಪ್ರಯಾಣ ಮಾಡಿ ಎಲ್ ಬ್ರೂಜ ಪರ್ವತದ ತಪ್ಪಲನ್ನು ಸೇರಿದನು. ಅಲ್ಲಿ ಒಂದು ಅರಮನೆಯೂ ಒಂದು ರಮ್ಯೋದ್ಯಾನವೂ ದೃಗ್ಗೋಚರವಾದುವು. ಅಲ್ಲಿ ಶೀತಲೋದಕ ಭರಿತ ವಾದ ತೊರೆಯೊಂದು ಪ್ರವಹಿಸುತ್ತಿದ್ದಿತು. ಈ ತೊರೆಯ ಪಕ್ಕದಲ್ಲಿ ಸುಂದರ ತರುಣನೊಬ್ಬನು ಕುಳಿತಿದ್ದನು. ಹಲವು ಮಂದಿ ಯುವಕರು ಅವನನ್ನು ಬಳಸಿದ್ದರು. ರುಸ್ತುಮನನ್ನು ಕಾಣಲು ಅವರು "ನೀನೂ ನಮ್ಮೊಡನಿರು; ನಮ್ಮ ಔತಣ ವಿಹಾರಗಳಲ್ಲಿ ಪಾಲುಗಾರನಾಗು." ಎಂದು ಪ್ರೀತಿಯಿಂದ ಆಮಂತ್ರಿಸಿದರು

"ಈಗ ಔತಣಕ್ಕೆ ಸಮಯವಿಲ್ಲ ನಮ್ಮ ಇರಾನ್ ಆಳಲಿನ ನಾಡಾ ಗಿದೆ ಹಗೆಗಳು ರಾಜ್ಯವನ್ನು ಸುಲಿಗೆ ಮಾಡುತ್ತಿರುವರು. ದೇಶವನ್ನು ಆಳಲು ರಾಜನಿಲ್ಲ. ನಾನು ಎಲ್‌ಬ್ರೂಜ ಪರ್ವತಕ್ಕೆ ತೆರಳುತ್ತಿರುವೆನು" ಎಂದು ರುಸ್ತುಂ ಉತ್ತರಿಸಿದಾಗ, "ಅಲ್ಲಿ ಯಾರನ್ನು ಕಾಣಲು ನೀನು ತೆರಳು ತ್ತಿರುವೆ?" ಎಂದು ಆ ಸುಂದರ ತರುಣನು ರುಸ್ತುಮನಿಗೆ ಮರು ಪ್ರಶ್ನೆ ಹಾಕಿದನು.

"ರಾಜಕುಮಾರ ಕಾಯುಕೋಬಾದನನ್ನು ಕಾಣಬೇಕಾಗಿದೆ."

"ನೀನು ಆತನನ್ನು ಹೇಗೆ ಅರಿಯಬಲ್ಲೆ ಎಂದು ತಿಳಿಸಿದರೆ, ನಾವು

ನಿನಗೆ ಆತನ ವಾರ್ತೆಯನ್ನು ಅರುಹುವೆವು."

ರುಸ್ತುಂ ರಕ್ಷನ ಬೆನ್ನಮೇಲಿನಿಂದಿಳಿದು, ತನ್ನ ಪಯಣದ ಉದ್ದೇಶವನ್ನು ಅವರಿಗೆ ತಿಳಿಸಿದನು. ಆಗ ಅವರ ನಡುವೆ ನಿಂತಿದ್ದ ಯುವಕನು ಮುಂದೆ ಬಂದು "ನೋಡು, ನೀನು ಅರಸುತ್ತಿರುವ ಕಾಯಕೋಬಾದನೇ ನಾನು." ಎಂದು ಹೇಳಿ ರುಸ್ತುಮನಿಗೆ ತನ್ನ ಪರಿಚಯವನ್ನು ಮಾಡಿಕೊಟ್ಟನು

ಆ ಮೇಲೆ ರುಸ್ತುಮನು ಸಂತೋಷದಿಂದ ಕಾಯಕೋಬಾದನೊಂದಿಗೆ ಅವನ ಬೀಡಿಗೆ ನಡೆದನು ಅಲ್ಲಿ ದೊಡ್ಡ ಸನ್ಮಾನವಾಯಿತು. ಗಾಯನ ನರ್ತನಗಳೂ ಜರಗಿದುವು ಕಾಯಕೋಬಾದನು ಅಪೂರ್ವ ರೀತಿಯಲ್ಲಿ ಅತಿಥಿಯಾದ ರುಸ್ತುಮನನ್ನು ಸತ್ಕರಿಸಿ, ಕೊನೆಗೆ ಅವನು ತಾನು ಕಂಡ ಕನಸೊಂದನ್ನು ರುಸ್ತುಮನಿಗೆ ತಿಳಿಸಿದನು.

"ನೋಡು, ನಾನು ಹೋದ ಇರುಳು ಒಂದು ಸ್ವಪ್ನವನ್ನು ಕಂಡೆ. ಎರಡು ದೊಡ್ಡ ಹದ್ದುಗಳು ಒಂದು ಕಿರೀಟವನ್ನು ಕಚ್ಚಿಕೊಂಡು ಇರಾನಿನ ಉದ್ದಗಲಕ್ಕೂ ಹಾರುತ್ತಾ ಕೊನೆಗೆ ನಾನಿದ್ದಲ್ಲಿಗೆ ಬಂದುವು. ಅವು ತಾವು ತಂದ ಕಿರೀಟವನ್ನು ನನ್ನ ತಲೆಯ ಮೇಲಿರಿಸಿದುವು. ಆ ಕಾರಣ ಈ ಕನಸು ನಾನು ಅರಸನಾಗುವೆನೆಂಬ ಭವಿಷ್ಯವನ್ನು ಸೂಚಿಸಿತು. ನಿನ್ನನ್ನು ಎದುರುಗೊಳ್ಳಲೆಂದು ನಾನು ಬೆಟ್ಟವನ್ನಿಳಿದು ಈ ತೊರೆಯ ಸಮೀಪಕ್ಕೆ ಬಂದು ಬೀಡು ಬಿಟ್ಟೆ. ನಿನ್ನನ್ನು ಗೌರವಿಸಲೆಂದು ಸನ್ಮಾನವನ್ನು ಏರ್ಪಡಿಸಿದೆ" ಎಂದು ರುಸ್ತುಮನನ್ನು ಸಂತೋಷಗೊಳಿಸಿದನು

ಕಾಯಕೋಬಾದ ಕನಸಿನಲ್ಲಿ ಕಂಡ ಎರಡು ಹದ್ದುಗಳು ತಂದೆ ಜಾಲನೂ ತಾನೂ ಆಗಿರುವೆವೆಂಬುದು ರುಸ್ತುಮನಿಗೆ ಹೊಳೆಯಿತು ಅವನು "ನಿನ್ನ ಆಗಮನವನ್ನು ಎದುರು ನೋಡುತ್ತಿರುವ ಇರಾನಿನ ಸೇನೆಯ ಮುಂದಾಳುತನವನ್ನು ನೀನೇ ವಹಿಸಬೇಕು." ಎಂದು ರಾಜಕುಮಾರನನ್ನು ಪ್ರಾರ್ಥಿಸಿಕೊಂಡನು

ಆ ಮೇಲೆ ಹೆಚ್ಚು ತಡಮಾಡದೆ ಅವರೀರ್ವರೂ ಕುದುರೆಗಳನ್ನೇರಿ ಹಗಲು ರಾತ್ರಿಗಳೆನ್ನದೆ ಎಳ್ಳಷ್ಟೂ ವಿಶ್ರಮಿಸದೆ ಪ್ರಯಾಣವನ್ನು ಕೈಗೊಂಡು ಯುದ್ಧರಂಗವನ್ನು ಸೇರಿದರು. ಇರಾನಿನ ಹೆಸರನ್ನು ಇಲ್ಲವಾಗಿಸಲು ಬದ್ಧ ಕಂಕಣ ತೊಟ್ಟ ತಾರ್ತರ ಸೇನೆಯನ್ನು ಎದುರಿಸಲು ಸನ್ನದ್ಧರಾದರು.

ತಾರ್ತರ ಪಕ್ಷದಲ್ಲಿ ಕಾಲೋನ ಎಂಬ ಹೆಸರಿನ ಒಬ್ಬ ಭಯಂಕರ ಯೋಧನಿದ್ದನು. ಅವನು ಕಾಯಕೋಬಾದ ರುಸ್ತುಮರ ಮುಂಬರಿಕೆಯನ್ನು ತಡೆದನು. ಕಾಯಕೋಬಾದ ತಾನೊಬ್ಬನೇ ವಿರೋಧಿಯೊಡನೆ ಸೆಣಸಲು ಬಯಸಿದನು. ಆದರೆ ರುಸ್ತುಮನಿಗೆ ಅದು ಇಷ್ಟವಿರಲಿಲ್ಲ. ಅವನು ರಕ್ಷನನ್ನು ಮುಂದೊತ್ತಿ ಕಾಲೋನನ ಮೇಲೆ ಬಿದ್ದು, ಕುದುರೆಯ ಮೇಲಿದ್ದ ಕಾಲೋನನ್ನನ್ನು ಹಿಡಿದು, ಅವನನ್ನೇ ಗದೆಯನ್ನಾಗಿ ಮಾಡಿಕೊಂಡು ಇನ್ನೊಬ್ಬ ತಾರ್ತರ ವೀರನನ್ನು ಹೊಡೆದಪ್ಪಳಿಸಿದನು. ನೆಲದ ಮೇಲೆ ಬಿದ್ದ ಕಾಲೋನನು ತನ್ನ ಎದುರುವವನು ಗದಾಧಾರಿಯಾದ ಕಾಲಭೈರವನೇ ಸರಿ ಎಂದು ಒಮ್ಮೆಗೇ ಹೆದರಿದನು. ಅವನು ಬಿದ್ದಲ್ಲಿಂದ ಎದ್ದು ಕುದುರೆಯನ್ನೇರಿ ಈಟಿಯೊಂದನ್ನು ಹಿಡಿದುಕೊಂಡು ರುಸ್ತುಮನ ಮೇಲೆ ಬಿದ್ದನು. ಆ ಈಟಿಯ ಹೊಡೆತದಿಂದ ರುಸ್ತುಮನ ಲೋಹ ಕವಚಕ್ಕೆ ಕಟ್ಟಿದ ಚರ್ಮವಟ್ಟಿಕೆಯು ತುಂಡಾಯಿತು ರುಸ್ತುಂ ತೋಳನ್ನು ಚಾಚಿ ಹಗೆಯ ಕೈಯಲ್ಲಿದ್ದ ಈಟಿಯನ್ನು ಸೆಳೆದುಕೊಂಡು, ಆ ಈಟಿಯನ್ನೇ ಶತ್ರುವಿನ ಮೇಲೆ ಪ್ರಯೋಗಿಸಿದನು. ಈ ಪ್ರಹಾರದ ಘಾತವನ್ನು ತಡೆಯಲಾರದೆ ಕಾಲೋನ ಕುದುರೆಯ ಮೇಲಿನಿಂದ ಬಿದ್ದು ನೆಲವನ್ನು ಆಶ್ರಯಿಸಿದನು. ಯುದ್ಧೋತ್ಸಾಹವನ್ನು ತಾಳಿದ ರಕ್ಷ ಆಗಲೇ ಮುಳಿದು ಹಗೆಯನ್ನು ಗೊರಸುಗಳಿಂದ ತುಳಿದು ಎಲುಬುಗಳನ್ನು ಹುಡಿಮಾಡಿತು ತಮ್ಮ ನಾಯಕನ ಪತನವನ್ನು ಕಂಡ ಇತರ ತಾರ್ತರ ಯೋಧರು ರುಸ್ತುಮನೊಡನೆ ಸೆಣಸಲು ಸಾಹಸ ಪಡದೆ ಕಾಲುಗಳಿಗೆ ಬುದ್ಧಿ ಹೇಳಿದರು. ಒಮ್ಮೆಗೆ ಯುದ್ಧದಲ್ಲಿ ಇರಾನಿಗಳು ಗೆದ್ದರು.

ಕಾಯಕೋಬಾದನನ್ನು ರುಸ್ತುಂ ತಂದೆಯ ಸಮೀಪಕ್ಕೆ ಕರೆದುಕೊಂಡು ಹೋದನು ಇರಾನಿನ ಸರದಾರರೂ ಪ್ರಧಾನಿಗಳೂ ಅವನನ್ನು ಸಂಭ್ರಮದಿಂದ ಸ್ವಾಗತಿಸಿದರು. ಒಂದು ವಾರದವರೆಗೆ ಸಭೆಸೇರಿ, ರಾಜ್ಯ ವ್ಯವಸ್ಥೆಯ ಏರ್ಪಾಡುಗಳನ್ನು ಎಸಗಿದರು. ಇರಾನಿನ ರತ್ನ ಖಚಿತ ಕಿರೀಟವನ್ನು ಕಾಯಕೋಬಾದನ ಮಸ್ತಕದ ಮೇಲಿರಿಸಿ ಪಟ್ಟಾಭಿಷೇಕವನ್ನು ನೆರವೇರಿಸಿದರು.

ಹಗೆಗಳನ್ನು ಎದುರಿಸಲು ಇರಾನಿನ ವೀರರು ಇನ್ನೊಮ್ಮೆ ಅಣಿಯಾದರು. ಸೇನಾ ವ್ಯೂಹವನ್ನು ರಚಿಸಿ, ರುಸ್ತುಂ ವ್ಯೂಹದ ಮಧ್ಯಭಾಗದಲ್ಲಿ

ನೆಲಸಿದನು. ರುದಾಬೆಯ ತಂದೆ ಮಿಹ್ರಾಬನು ಕಾಬೂಲಿನ ಯೋಧರೊಡನೆ ವ್ಯೂಹದ ಹಿಂದಿನ ಭಾಗದಲ್ಲಿ ನಿಂತನು. ಯೋಧರ ಪಾದಹತಿಯ ಸಿನಾದ ದಿಗಂತದಲ್ಲಿ ಪ್ರತಿಧ್ವನಿಸಿಗೊಂಡಿತು. ಅಶ್ವಗಳ ಹೇಷಾರವ ಬಾನನ್ನು ಸೀಳಿತು ವೀರರ ಸಿಂಹನಾದಗಳು ಆಗಸವನ್ನು ಮುಸುಕಿದುವು. ರಥ ಚಕ್ರಧ್ವನಿಗಳು ಹಗೆಗಳ ಕಿವಿಗಳನ್ನು ಒಡೆದುವು. ರಣಭೇರಿಗಳ ಸ್ವನಗಳು ಮುಗಿಲುಗಳನ್ನು ಭೇದಿಸಲು ಹವಣಿಸಿದುವು. ಗಜಬೃಂಹಿತಗಳು ಹಗೆಗಳ ಎದೆಗಳನ್ನು ತಲ್ಲಣಗೊಳಿಸಿದುವು. ವಾಯು ಮಂಡಲವನ್ನು ಭೇದಿಸುತ್ತಿರುವ ವಿವಿಧ ಧ್ವನಿಗಳು ಸ್ಥಿರವಾದ ನೆಲವೇ ಚಲಿಸುತ್ತಿದೆಯೋ ಎಂಬ ಭ್ರಾಂತಿಯನ್ನು ಉಂಟುಮಾಡಿದುವು.

ಎರಡು ಸೇನೆಗಳು ಎದುರಾದುವು ರುಸ್ತುಂ ತಂದೆಯೊಡನೆ ತಾರ್ತರ ರಾಜಕುಮಾರ ಅಫ್ರಸಿಯಾಬನನ್ನು ತೋರಿಸಿಕೊಡಬೇಕೆಂದು ಕೇಳಿಕೊಂಡನು ಆಗ ಜಾಲನು "ಪರ್ವತದಂತೆ ಭೀಮಕಾಯನಾದ ಆ ಭಯಂಕರ ವ್ಯಕ್ತಿಯೊಡನೆ ಯುದ್ಧಮಾಡಲು ನೀನು ಬಯಸದಿರು. ಅವನ ಬಾವುಟ ಕಪ್ಪಾಗಿದೆ ಅವನ ಕುದುರೆಯು ಕಪ್ಪಾಗಿದೆ. ಅವನ ಲೋಹ ಕವಚ ಶಿರಸ್ತ್ರಾಣಗಳೂ ಕಪ್ಪಾಗಿವೆ. ಕಪ್ಪು ಮುಖವಾಡದೊಳಗೆ ಅವನ ಕಣ್ಣುಗಳು ಮಾತ್ರ ಉರಿಯುವ ಕೆಂಡಗಳಂತೆ ಕೆಂಪುಗಾಣಿಸುತ್ತಿವೆ" ಎಂದು ಅಫ್ರಸಿಯಾಬನ ಗುರುತುಗಳನ್ನು ಮಗನಿಗೆ ಹೇಳಿದನು.

"ನೋಡು, ನಾನು ಆ ನೀಚನನ್ನು ಕುದುರೆಯ ಮೇಲಿನಿಂದೆಳೆದು ತಂದು ಚಕ್ರವರ್ತಿಯ ಚರಣತಳದಲ್ಲಿ ಕೆಡಹುವೆನು." ರುಸ್ತುಮನ ಕೊರಳಿಂದ ವೀರವಾಣಿ ಹೊಮ್ಮಿತ್ತು. "ಆ ನೀಚನ ಮಸ್ತಕವನ್ನು ಚಕ್ರವರ್ತಿಯ ಪಾದಧೂಳಿಯಲ್ಲಿ ಹೊರಳಿಸುವೆನು"

ರುಸ್ತುಂ ತಂದೆಯ ಮಾರ್ನುಡಿಯನ್ನು ಎದುರು ನೋಡಲಿಲ್ಲ ಅವನು ರಕ್ಷನನ್ನು ಮುಂದೆ ದೂಡಿ ವೀರ ಗರ್ಜನೆಗಳನ್ನು ಎಸಗುತ್ತಾ ತಾರ್ತರ ಸೇನೆಯನ್ನು ಸೀಳುತ್ತಾ ಮುಂದುವರಿದನು.

"ರಕ್ಕಸನಂತೆ ನಮ್ಮ ಮೇಲೆ ಬೀಳುತ್ತಿರುವ ಈ ವೀರನು ಯಾರು?" ಎಂದು, ನಿರ್ಭೀತಿಯಿಂದ ಮುಂಬರಿಯುತ್ತಿರುವ ರುಸ್ತುಮನನ್ನು ಕಂಡು ಅಫ್ರಸಿಯಾಬನು ಆಶ್ಚರ್ಯಚಕಿತನಾದನು. "ಅವನ ಕೈಯಲ್ಲಿ ಸಾನನ ಗದೆಯಿದೆ. ಅವನೇ ಜಾಲನ ಮಗನಾದ ರುಸ್ತುಂ" ಎಂದು ಸೈನಿಕರು

ತಾರ್ತರ ರಾಜಕುಮಾರನಿಗೆ ಸೂಚಿಸಿದರು.

ರುಸ್ತುಮನೊಡನೆ ಯುದ್ಧಮಾಡಲೆಂದು ಅತಿ ಉತ್ಸಾಹದಿಂದ ಅಫ್ರಸಿಯಾಬನು ಮುಂದೆ ಬಂದನು. ಅವನನ್ನು ಕಾಣಲು ರುಸ್ತುಂ ಗದೆಯನ್ನು ತಗ್ಗಿಸಿದನು. ಕುದುರೆಯ ಮೇಲಿನಿಂದ ಅಫ್ರಸಿಯಾಬನನ್ನು ಹಿಡಿದೆಳೆದು ಸೆರೆಹಿಡಿಯಬೇಕೆಂಬುದು ರುಸ್ತುಮನ ಆಲೋಚನೆ. ಅವನು ಅಫ್ರಸಿಯಾಬನ ಸೊಂಟದಲ್ಲಿ ಶೋಭಿಸುತ್ತಿದ್ದ ರತ್ನಖಚಿತ ದಟ್ಟಿಗೆ ಕೈಹಾಕಿ, ಇನ್ನೊಂದು ಕ್ಷಣದಲ್ಲಿಯೇ ಹಗೆಯನ್ನು ಕುದುರೆಯ ಮೇಲಿಂದ ಒಂದು ಗೊಂಬೆಯನ್ನು ಎತ್ತುವಷ್ಟು ಸುಲಭವಾಗಿ ಮೇಲಕ್ಕೆತ್ತಿ ಬಿಟ್ಟನು. ಆದರೆ ನಯವಾದ ದಟ್ಟಿ ರುಸ್ತುಮನ ಹಿಡಿತದಿಂದ ಜಾರಿತು. ತಾರ್ತರ ಯೋಧರು ತಮ್ಮ ನಾಯಕನನ್ನು ಕಾಪಾಡಲೆಂದು ರುಸ್ತುಮನನ್ನು ಮುತ್ತಿದರು. ರುಸ್ತುಂ ಹಿಂಜರಿಯಲಿಲ್ಲ. ಅವನು ಮುಂದುವರಿದು ಅಫ್ರಸಿಯಾಬನ ತಲೆಯ ಮೇಲಿದ್ದ ರತ್ನಖಚಿತ ಮುಕುಟವನ್ನು ಕಿತ್ತುಕೊಂಡನು. ಯುದ್ಧ ಬಹು ಭೀಕರವಾಗಿ ನಡೆಯಿತು. ಇರಾನಿನ ಯೋಧರು, ಹೆಂಗಸರು ಈಳಿಗೆ ಮಣೆಯಲ್ಲಿ ಸೌತೆಕಾಯಿಗಳನ್ನು ಹೆಚ್ಚುವಂತೆ ವೈರಿಗಳನ್ನು ಕೊಚ್ಚಿ ಕೆಡವಿದರು. ಈ ಯುದ್ಧದಲ್ಲಿ ಅಫ್ರಸಿಯಾಬನು ಸಂಪೂರ್ಣವಾಗಿ ಪರಾಜಿತನಾದನು. ಅವನು ಜೀವವುಳಿಸಿಕೊಳ್ಳಲೆಂದು ಯುದ್ಧಭೂಮಿಯನ್ನು ಬಿಟ್ಟು ಪಲಾಯನಮಾಡಿದನು.

"ರುಸ್ತುಮನನ್ನು ಈ ಪ್ರಪಂಚದಲ್ಲಿ ಯಾರೂ ಜಯಿಸಲಾರರು. ಇರಾನಿನ ರಾಜನೊಡನೆ ನಾವು ಸಂಧಿ ಮಾಡಿಕೊಳ್ಳುವುದು ಉತ್ತಮ" ಎಂದು ಓಡಿ ಹೋಗಿ ಜೀವವುಳಿಸಿಕೊಂಡ ಅಫ್ರಸಿಯಾಬನು ರಾಜನಾದ ತಂದೆಯನ್ನು ಕಂಡು ಅರಿಕೆಮಾಡಿಕೊಂಡನು. "ಅವನು ಒಂದು ಹುಲ್ಲು ಕಡ್ಡಿಯನ್ನೆತ್ತುವಷ್ಟು ಸುಲಭವಾಗಿ ನನ್ನನ್ನು ಕುದುರೆಯ ಮೇಲಿಂದ ಎತ್ತಿದನು. ನೀನು ಇರಾನಿಗಳೊಡನೆ ಸಂಧಾನಮಾಡಿಕೊಂಡು ನಮ್ಮ ದೇಶವನ್ನು ಸಮರಾಗ್ನಿಯಿಂದ ಸಲಹು."

ಮಗನ ಮಾತು ಪ್ರಾಜ್ಞನ ವಿವೇಕವಾಣಿಯಾಗಿದೆಯೆಂದು ತಾರ್ತರ ಚಕ್ರವರ್ತಿ ತಿಳಿದುಕೊಂಡನು. ಅವನು ಸಂಧಿಗೆ ಮನಗೊಟ್ಟನು. ಅವನ ಅಪ್ಪಣೆಯಂತೆ ರಾಯಭಾರಿಗಳು ಇರಾನಿನ ಚಕ್ರವರ್ತಿಯ ಆಸ್ಥಾನಕ್ಕೆ ಹೋದರು. ಅವರು ಕಾಯಕೋಬಾದನಿಗೆ ಕಾಣಿಕೆಗಳನ್ನು ಕೊಟ್ಟು ತಮ್ಮ ರಾಜನ ಸಂದೇಶವನ್ನು ತಿಳಿಸಿದರು.

"ಯುದ್ಧವನ್ನು ಪ್ರಾರಂಭಿಸಿದವರು ನೀವೇ ಆಗಿರುವಿರಿ ಈಗ ನೀವು ಗೈದ ಅಕೃತ್ಯಕ್ಕೆ ಪಶ್ಚಾತ್ತಾಪಗೊಂಡಿದ್ದರೆ ಯುದ್ಧವನ್ನು ಮುಂದುವರಿಸ ಬೇಕೆಂಬ ಹಟ ನಮಗಿಲ್ಲ. ಆದರೆ ನಿಮ್ಮ ಚಕ್ರವರ್ತಿಯ ಮಗ ಅಫ್ರಸಿಯಾ ಬನು ಇನ್ನು ಮುಂದೆ ನಮ್ಮ ರಾಜ್ಯದ ಗಡಿಯನ್ನು ದಾಟುವುದಿಲ್ಲವೆಂದು ಪ್ರತಿಜ್ಞೆಮಾಡಬೇಕು ಹಾಗದರೆ ಸಂಧಿ ಮಾಡುವ" ಎಂದು ಕಾಯಕೋ ಬಾದನು ಸಂಧಿಯ ಶರತವನ್ನು ರಾಯಭಾರಿಗಳ ಮುಂದಿರಿಸಿದನು.

ಉಭಯ ಪಕ್ಷಗಳೂ ಸಂಧಾನಮಾಡಿಕೊಂಡುವು. ಜಯಲಕ್ಷ್ಮಿಯನ್ನು ನೆರೆಹಿಡಿದುತಂದ ಜಾಲ, ರುಸ್ತುಂ, ಮಿಹ್ರಾಬ ಮೊದಲಾದ ವೀರರಿಗೆ ಚಕ್ರವರ್ತಿ ಅಗಣಿತ ಪಾರಿತೋಷಕಗಳನ್ನಿತ್ತು ಸನ್ಮಾನಿಸಿದನು. ಅಂದಿನಿಂದ ಇರಾನ್ ಶಾಂತಿಯ ನೆಲೆಮನೆಯಾಯಿತು. ನಾಡು ಧನಧಾನ್ಯಗಳಿಂದ ತುಂಬಿತು ಹಾಲು ಜೇನುಗಳ ಹೊನಲು ದೇಶದಲ್ಲಿ ಹರಿಯಿತು.

## ಐದು

ಕಾಯಕೋಬಾದ್ ಇರಾನಿನ ಶ್ವೇತ ಸಿಂಹಾಸನವನ್ನೇರಿ ರಾಜ್ಯ ಭಾರ ಮಾಡುತ್ತಿದ್ದಾಗ ರಾಜ್ಯವು ಅಭ್ಯುದಯ ಪಥದಲ್ಲಿ ಮುನ್ನಡೆದು ಸುಖ ಸಂತೋಷಗಳ ಸಾಗರವೆನಿಸಿತು. ಇರಾನಿನ ಯಶೋಗಾನ ಕಡಲ ದಡದ ಪರ್ಯಂತ ವ್ಯಾಪಿಸಿತು. ಕಾಯಕೋಬಾದನ ಅನಂತರ ಅವನ ಪುತ್ರ ಕಾಯಕೋಸ ಇರಾನಿನ ಸಿಂಹಾಸನವನ್ನೇರಿದನು. ಈತನು ತಂದೆಯಂತೆ ಯುದ್ಧವಿದ್ಯಾ ಪರಿಣತನಾಗಿರಲಿಲ್ಲ; ತಂದೆಯ ಮೇಧಾಸಂಪತ್ತೂ ಇವನಲ್ಲಿ ಇರಲಿಲ್ಲ. ಅವನು ಬೊಕ್ಕಸದಲ್ಲಿದ್ದ ದ್ರವ್ಯವನ್ನು ಔತಣವಿಹಾರಗಳಿಗೆ ಗಾನ ನರ್ತನ ಮೊದಲಾದ ಮನೋಲ್ಲಾಸ ಕಾರ್ಯಗಳಿಗೆ ವಿನಿಯೋಗಿಸತೊಡ ಗಿದನು; ದುಂದುಗಾರಿಕೆಯಲ್ಲಿ ಕಾಲಕಳೆದನು.

ಚಕ್ರವರ್ತಿ ಆರಾಮ ವಿನೋದಗಳಲ್ಲಿ ಕಾಲಕಳೆಯುತ್ತಿದ್ದರೂ ಚಕ್ರವ ರ್ತಿಯ ಆಸ್ಥಾನದಲ್ಲಿ ರುಸ್ತುಮನಿಗೆ ಗೌರವಾನ್ವಿತ ಸ್ಥಾನವಿತ್ತು. ಅವನು ಇರಾನಿನ ಸಮಸ್ತ ಸೇನೆಗಳಿಗೆ ಮಹಾದಂಡನಾಯಕನಾಗಿದ್ದನು. ಚಕ್ರ ವರ್ತಿ ರುಸ್ತುಮನಿಗೆ ಚಿನ್ನದ ಕಿರೀಟವನ್ನು ಉಡುಗೊರೆಯಿತ್ತು ಅವನ ಸ್ಥಾನವನ್ನು ಉನ್ನತಿಯ ಶಿಖರಕ್ಕೆ ಏರಿಸಿದ್ದನು.

ಒಂದು ದಿನ ರಾಜಪ್ರಾಸಾದದಲ್ಲಿ ಭಾರಿ ಔತಣ ನಡೆಯುತ್ತಿದ್ದಾಗ ಒಬ್ಬ ರಕ್ಕಸನು ಗಾಯಕನ ವೇಶತಾಳಿ ಅರಮನೆಯ ಹೆಬ್ಬಾಗಿಲಿಗೆ ಬಂದನು. ಅವನು ಪ್ರತೀಹಾರಿಯೊಡನೆ "ನಾನು ಸುಶ್ರಾವ್ಯ ಧ್ವನಿಯುಳ್ಳ ಗಾಯಕ. ರಕ್ಕಸ ರಾಜ್ಯದಿಂದ ಬಂದಿದ್ದೇನೆ. ನನ್ನ ಇನಿದನಿಯನ್ನು ಒಮ್ಮೆ ಚಕ್ರವರ್ತಿ ಕೇಳಿದನೆಂದರೆ ಸಾಕು, ಆತ ತನ್ನ ಗಾಯಕರ ಸಾಲಿನಲ್ಲಿ ನನಗೊಂದು ಸ್ಥಾನ ಕೊಡದೆ ಇರನು." ಎಂದು ಹೇಳಿದನು.

ಮುಂದೆ ಈರಾನಿಗೆ ಬರಲಿರುವ ವಿಪತ್ಪರಂಪರೆಗಳಿಗೆ ಮೂಲಕಾರಣನಾದ ಈ ಹೊಸ ಗಾಯಕನು ಬಂದ ಸಂಗತಿ ಚಕ್ರವರ್ತಿಗೆ ತಿಳಿಯಿತು. ಅವನನ್ನು ತನ್ನ ಸನ್ನಿಧಿಗೆ ಬರಮಾಡಿಕೊಂಡನು ಹಾಡು ಹಾಡಹೇಳಿದನು ಆಗ ಈ ಕಪಟಿ ಮಜಂದ್ರ ರಾಜ್ಯದ ಸೊಬಗು ಬೆಡಗುಗಳನ್ನು ಬಣ್ಣಿಸುತ್ತಾ ಈ ರೀತಿ ಹಾಡಿದನು.

"ಮಜಂದ್ರ ನಾಡು ಚೆಲುವಿನ ನೆಲೆಮನೆ ಪ್ರತಿಯೊಂದೂ ವೃಕ್ಷದಿಂದಲೂ ಬುಲ್‌ಬುಲ್ ಪಕ್ಷಿಯ ಮಧುರಗಾನ ಹೊಮ್ಮುತ್ತಿದೆ. ಪ್ರತಿಯೊಂದು ಬಯಲಿನಲ್ಲಿ ಗುಲಾಬಿ, ಪಾದರಿ, ಪಾರಿಜಾತ ಕುಸುಮಗಳು ಲಾಸ್ಯಮಾಡುತ್ತಿವೆ. ಅಲ್ಲಿನ ಉದ್ಯಾನಗಳ ಪೆಂಪು ಎಂದಿಗೂ ಇಂಗದು; ಮಂಜು ಮುದುಡಿಸದು; ಬಿಸಿಲು ಬಾಡಿಸದು ತೊರೆಗಳಲ್ಲಿ ಹರಿವ ಶೀತಲ ಸ್ವಾದು ಸಲಿಲ ಪನ್ನೀರಿನಂತೆ ತಿಳಿಯಾಗಿದೆ. ಅಲ್ಲಿನ ವಾಯುವನ್ನು ಉಸಿರಾಡುವವರಿಗೆ ದೀರ್ಘಾಯುಷ್ಯ ಲಭಿಸುತ್ತದೆ. ಆ ನಾಡಿನ ಸಂತೋಷ ಸುಖಾನುಭವಗಳನ್ನು ಹೊಗಳಿ ಬಣ್ಣಿಸಲು ಸಾಧ್ಯವಿಲ್ಲ. ಸ್ವತಃ ಅನುಭವಿಸಿ ನೋಡಬೇಕು"

ಈ ಗೀತೆ ಕಾಯಕೋಸನನ್ನು ಅಚ್ಚರಿಗೀಡುಮಾಡಿತು. ಅವನು ತನ್ನನ್ನು ಬಳಸಿದ ಯೋಧರ ಕಡೆ ದೃಷ್ಟಿಯನ್ನು ಹೊರಳಿಸಿದನು. "ನಾವಿಲ್ಲಿ ಔತಣದ ಊಟಗಳನ್ನು ಉಂಡು ಬಾಯಿ ಚಪ್ಪರಿಸುತ್ತಾ ಗಾಯನ ನರ್ತನ ಮೊದಲಾದ ಆಮೋದ ಪ್ರಮೋದಗಳಲ್ಲಿ ಕಾಲಹರಣ ಮಾಡುತ್ತಿದ್ದೇವೆ. ಆದರೆ ನಮ್ಮ ಹಿರಿಯರೆಸಗಿದ ಮಹಾಸಾಹಸಗಳನ್ನು ಸ್ಮರಿಸಿರಿ. ನಿಮ್ಮನ್ನು ಬಾಧಿಸಿದ ಆಲಸ್ಯ ಜಡತೆಗಳನ್ನು ತೊರೆಯಿರಿ. ನಮ್ಮ ಪರಾಕ್ರಮದ ಧವಳ ಕಾಂತಿ ಹಿರಿಯ ಯಶೋರಶ್ಮಿಗಳನ್ನು ಮಸುಳಿಸಲಿ. ಎದ್ದೇಳಿ! ಮಜಂದ್ರದ ಮೇಲೆ ದಂಡಯಾತ್ರೆಯನ್ನು ಕೈಕೊಂಡು ರಕ್ಕಸ ರಾಜ್ಯವನ್ನು ಧ್ವಂಸ

ಮಾಡೋಣ" ಎಂದು ಚಕ್ರವರ್ತಿ ಉದ್ಗಾರವೆತ್ತಿದನು

ಆ ಯೋಧರಲ್ಲಿ ಜೀವಗಳ್ಳರು ಯಾರೂ ಇರಲಿಲ್ಲ. ಆದರೆ ರಾಜನ ಮಾತು ಕೇಳಿದಾಗ ಅವರ ಮೋರೆಗಳು ದಿಗಿಲಿನಿಂದ ಬಿಳುಪೇರಿದುವು. "ರಕ್ಕಸ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವುದು ಚಕ್ರವರ್ತಿಗೆ ನುಂಗಲಾಗದ ತುತ್ತು" ಎಂದು ಅನುಭವಿಗಳು ಆಲೋಚಿಸಿದರು. ವೃದ್ಧ ಯೋಧರು ಚಕ್ರವರ್ತಿ ಈ ಹುಚ್ಚು ಆಲೋಚನೆಯನ್ನು ಬಿಟ್ಟು ಶಾಂತಿಯ ಮಾರ್ಗವನ್ನೇ ಕೈಗೊಳ್ಳುವುದೊಳ್ಳಿತೆಂದು ಭಾವಿಸಿದರು. ಆದರೆ ಅವರ ಊಹೆ ಹುಸಿಯಾಯಿತು. ಚಕ್ರವರ್ತಿ ಮಾಜಂದ್ರವನ್ನು ಗೆದ್ದು ಸ್ವಾಧೀನಪಡಿಸಿಕೊಳ್ಳಲೇಬೇಕೆಂದು ಮರ್ಕಟಮುಷ್ಟಿ ಹಿಡಿದನು. "ಈ ಬಗೆಯ ಭ್ರಾಂತಿ ಯಾವ ಚಕ್ರವರ್ತಿಗೂ ಹಿಂದೆ ಹಿಡಿದಿರಲಿಲ್ಲ. 'ವಿನಾಶ ಕಾಲಕ್ಕೆ ವಿಪರೀತ ಬುದ್ಧಿ' ಎಂಬ ಗಾದೆ ಎಂದಿಗೂ ಸುಳ್ಳಾಗದು." ಎಂದು ಅಲ್ಲಿದ್ದ ಯೋಧರು ತಂತಮ್ಮೊಳಗೆ ಮಾತಾಡಿಕೊಂಡರು.

ಚಕ್ರವರ್ತಿ ಕೈಗೊಳ್ಳಲು ಉದ್ದೇಶಿಸಿದ ವಿಪತ್ಕಾರಕ ಸಾಹಸದ ವಾರ್ತೆಯನ್ನು ಕೂಡಲೇ ಜಾಲನಿಗೂ ರುಸ್ತುಮನಿಗೂ ಅರುಹಲೆಂದು ರಾಜಾಸ್ಥಾನದ ಯೋಧರು ತ್ವರಿತಗತಿಯಲ್ಲಿ ಒಬ್ಬ ದೂತನನ್ನು ಸಿಸ್ತಾನಕ್ಕೆ ಕಳುಹಿಸಿದರು.

ಈ ದೂತನು ಸಿಸ್ತಾನಕ್ಕೆ ಬಂದು ತಾನು ತಂದ ವಾರ್ತೆಯನ್ನು ಹಾಲುಗೂದಲಿನ ಜಾಲನಿಗೆ ಅರಿಕೆಮಾಡಿದನು. "ರಾಜಾಸ್ಥಾನದ ನಾಯಕರು, ನೀನು ನಮ್ಮ ಚಕ್ರವರ್ತಿಗೆ ಹಿತೋಪದೇಶ ಮಾಡಲು ವಿಳಂಬಿಸಿದರೆ, ಇರಾನಿನ ಹೆಸರನ್ನು ಬೆಳಗಿಸಲು ನಾವ, ನೀನು ಮತ್ತು ರುಸ್ತುಂ ಈ ವರೆಗೆ ಎಸಗಿದ ಸತ್ಕಾರ್ಯಗಳೆಲ್ಲ ಬೆಂಕಿಗೊಡ್ಡಿದ ಹುಲ್ಲುಕಡ್ಡಿಯಂತೆ ನಾಶವಾಗುವುವು ಎಂದು ಎಚ್ಚರಿಕೆಯ ಸಂದೇಶ ಕಳುಹಿಸಿರುವರು."

ಈ ವೃದ್ಧಯೋಧ ರಾಜಾಸ್ಥಾನದ ನಾಯಕರು ಕಳುಹಿದ ಸಂದೇಶವನ್ನು ಮನಸ್ಸಿನಲ್ಲಿಯೇ ಮೆಲುಕು ಹಾಕಿದನು. ಅವನು "ಈ ಕಾಯಕೋಸನು ಒಂದು ಹನಿ ಬೆವರನ್ನಾದರೂ ಹರಿಸದೆ ಸಿಂಹಾಸನವನ್ನು ಗಳಿಸಿದ್ದಾನೆ. ಅವನು ರಾಜ್ಯಮದ ಮತ್ತು ಅಧಿಕಾರಮದಗಳ ಪ್ರಭಾವದಿಂದ ವಿವೇಕವನ್ನು ಕಳೆದು ತಾನು ತಂದೆ ಕಾಯಕೋಬಾದನಿಗಿಂತಲೂ ಹಿರಿಯ ವ್ಯಕ್ತಿಯೆಂದು ಭಾವಿಸಿದ್ದಾನೆ." ಎಂದು ತನ್ನಲ್ಲಿಯೇ ಆಲೋಚಿಸಿದನು.

ನಾಯಕರ ಬಿನ್ನಹದಂತೆ ಜಾಲನು ತ್ವರೆಯಿಂದ ರಾಜಾಸ್ಥಾನಕ್ಕೆ ಬಂದು ರಾಜದರ್ಶನ ಮಾಡಿದನು. ಚಕ್ರವರ್ತಿ ತಾನು ಕೈಕೊಳ್ಳಲಿರುವ ಸಾಹಸೋದ್ಯಮದಲ್ಲಿ ಪಾಲುಗಾರನಾಗಲು ಜಾಲನು ಬಂದಿರುವನೆಂದು ಕೇಳಿ, ಅವನು ಜಾಲನನ್ನು ಗೌರವಿಸಿ ಯೋಗಕ್ಷೇಮಗಳನ್ನು ವಿಚಾರಿಸಿದನು.

"ಪ್ರಭುವೆ! ನೀನು ಮಜಂದ್ರದ ರಕ್ಕಸರಾಜ್ಯವನ್ನು ಗೆಲ್ಲಲು ಹಂಚಿಕೆ ಮಾಡಿರುವೆಯೆಂಬ ಸುದ್ದಿ ಹರಡಿದೆ. ನಿನ್ನ ಚಿತ್ತದಲ್ಲಿ ಬೇರುಬಿಟ್ಟ ಆ ಚಿಂತೆಯ ಬಳ್ಳಿಯನ್ನು ಕಿತ್ತುಹಾಕು. ಮಾನವ ಸಂಚಾರವಿಲ್ಲದ ಆ ನಾಡಿನಲ್ಲಿ ಹಜ್ಜೆಯಿರಿಸಲು ಕೆಚ್ಚೆದೆಯ ಕಲಿಗಳು ಸಹ ಭಯದಿಂದ ನಡುಗುತ್ತಾರೆ. ಯಾವ ಬಗೆಯ ಶಕ್ತಿಗಳೂ ಆ ರಕ್ಕಸರನ್ನು ಗೆಲ್ಲಲಾರವು. ನಮ್ಮ ಕರವಾಳಗಳು ಆ ದಾನವರ ದೇಹಗಳನ್ನು ಸೀಳವು. ನಮ್ಮ ಗದೆಗಳು ಅವರನ್ನು ಕೊಲ್ಲವು. ಮಿನುಚೆಹ, ಕಾಯಕೋಬಾದ ಮೊದಲಾದ ಪ್ರಸಿದ್ಧ ಚಕ್ರವರ್ತಿಗಳು ಸಹ ಈ ಸಾಹಸಕ್ಕೆ ಕೈಹಾಕಲು ಧೈರ್ಯವಡಲಿಲ್ಲ. ಆದುದರಿಂದ ನುಂಗಲಾರದ ತುತ್ತಿಗೆ ಕೈಚಾಚಿ ಅನರ್ಥವನ್ನು ಮಾಡಿಕೊಳ್ಳಬೇಡ" ಎಂದು ಉಪದೇಶಿಸಿದನು.

ಆದರೆ ಜಾಲನ ವಿವೇಕ ವಚನಗಳು ಕಾಯಕೋಸನ ನೆತ್ತಿಗೇರಿದ ದುರಹಂಕಾರದ ಅಮಲನ್ನು ಇಳಿಸದಾದುವು. "ನಾನು ನನ್ನ ತಂದೆ ಮತ್ತು ಮುತ್ತಜ್ಜರಿಗಿಂತಲೂ ಮಿಗಿಲಾದ ಪರಾಕ್ರಮಿ. ಅವರೆಲ್ಲ ಕೈಲಾಗದವರು. ನನ್ನ ಹಿರಿಯರಾರೂ ಸಾಧಿಸದ ಮಹಾಕಾರ್ಯವನ್ನು ನಾನು ಎಸಗುವೆನು. ಇದಕ್ಕೆ ನೀನೇನು ಹೇಳುವೆ?" ಎಂದು ಚಕ್ರವರ್ತಿ ದರ್ಪದಿಂದ ನುಡಿದನು.

ಆಗ "ನಾನೇನು ಮಾಡಬೇಕೆಂದು ಅಪ್ಪಣೆಯಾಗಲಿ" ಎಂದು ಜಾಲನು ಕೇಳಿದ್ದಕ್ಕೆ,

"ರಕ್ಕಸರನ್ನು ಎದುರಿಸುವ ಕೆಚ್ಚು ನಿನ್ನಲ್ಲಿ ಇಲ್ಲದಿದ್ದರೆ, ನೀನು ಬರುವುದು ಬೇಡ. ನೀನೂ ರುಸ್ತುಮನೂ ರಾಜ್ಯರಕ್ಷಣೆಯಲ್ಲಿ ನಿರತರಾಗಿರಿ. ನಾನು ಮಜಂದ್ರದ ಮೇಲೆ ದಂಡೆತ್ತಿಹೋಗಿ ರಕ್ಕಸರ ರಕ್ತದಲ್ಲಿ ಓಕುಳಿಯಾಡುವೆನು." ಎಂದು ಉದ್ಗಾರವೆತ್ತಿದನು.

"ನಾವು ಇರಾನಿನ ಚಕ್ರವರ್ತಿಗಳ ಪಾದಸೇವಕರಾಗಿದ್ದೇವೆ. ನಿನ್ನ ಆಜ್ಞೆಯನ್ನು ಈಡೇರಿಸಲು ನಮ್ಮ ಒಡಲುಗಳು ಮೀಸಲಾಗಿವೆ. ನಿನ್ನನ್ನು

ದೇವರು ಕಾಪಾಡಲಿ. ನಾನು ಹೇಳಿದ ಎಚ್ಚರಿಕೆಯ ಮಾತುಗಳನ್ನು ಸ್ಮರಿಸಲು ದೇವರು ನಿನಗೆ ಅವಕಾಶವನ್ನು ಒದಗಿಸಲಿ.” ಎಂದು ಜಾಲನು ಶಿಸ್ತಾನಕ್ಕೆ ಹಿಂದಿರುಗಿದನು.

ಇತ್ತ ದಂಡಯಾತ್ರೆಗೆ ಸೇನೆಗಳು ಅಣಿಯಾಗಬೇಕೆಂದು ಚಕ್ರವರ್ತಿಯ ಆಜ್ಞೆಯಾಯಿತು. ಮರುದಿನ ಪ್ರಭಾತ ಕಾಲದಲ್ಲಿ ಚಕ್ರವರ್ತಿ ಭಂಡಾರದ ಕೀಲುಗಳನ್ನು ನಗರಪಾಲಕನಿಗೆ ಕೊಟ್ಟನು. ಅವನು ಜಾಲ ಮತ್ತು ರುಸ್ತುಮನ ಒಪ್ಪಿಗೆಯಿಲ್ಲದೆ ಯಾವ ಹಗೆಯನ್ನೂ ಎದುರಿಸೂಡ ವೆಂದು ಹೇಳಿದರೂ ಕಾಯಕೋಸನ ನಾಯಕತ್ವದಲ್ಲಿ ಇರಾನಿ ಸೈನಿಕರು ದಂಡಯಾತ್ರೆಯನ್ನು ಕೈಕೊಂಡು ಮಜಂದ್ರದತ್ತ ಸಾಗತೊಡಗಿದರು.

ದೀರ್ಘ ಪ್ರವಾಸವನ್ನು ಮಾಡಿದ ಅನಂತರ ಇರಾನಿನ ಸೇನೆಗಳು ಮಜಂದ್ರದ ಸೀಮಾ ಪ್ರದೇಶಗಳನ್ನು ಸೇರಿದುವು. ಸೈನಿಕರು ಅಲ್ಲಿ ಒಂದು ತೊರೆಯ ಪಕ್ಕದಲ್ಲಿ ಗೂಡಾರಗಳನ್ನು ಹೂಡಿದರು. ಆ ಇರುಳು ಚಕ್ರವರ್ತಿಯ ಗೂಡಾರದಲ್ಲಿ ಒಂದು ದೊಡ್ಡ ಔತಣ ನಡೆಯಿತು. ಪ್ರಭಾತ ಕಾಲದಲ್ಲಿ ಅವನು ಸೇನಾನಾಯಕರನ್ನು ಕರೆದು “ಧೈರ್ಯಶಾಲಿಗಳೂ ಗದಾಯುದ್ಧ ಪಾರಂಗತರೂ ಆದ ಎರಡು ಸಾವಿರ ಯೋಧರನ್ನು ಆರಿಸಿರಿ, ಅವರು ಮಜಂದ್ರ ಕೋಟೆಯ ಮೇಲೆ ಆಕ್ರಮಣ ನಡೆಸಿ ಗಡಿಗಳಿಂದ ದುರ್ಗದ ಗೋಡೆಗಳನ್ನು ಹೊಡೆದಪ್ಪಳಿಸಿ ಧೂಳೀಪಟ ಮಾಡಲಿ. ರಕ್ಕಸರನ್ನೆಲ್ಲಾ ತರಿದು ಜವನೂರಿಗೆ ಕಳುಹಿಸಲಿ; ನಗರವನ್ನು ಸುಟ್ಟು ಬೂದಿ ಮಾಡಲಿ. ಈ ರಾಕ್ಷಸ ಕುಲವನ್ನೇ ಹೇಳಹೆಸರಿಲ್ಲದಂತೆ ಮಾಡಲಿ.” ಎಂದು ಆಜ್ಞಾಪಿಸಿದನು.

ಇರಾನೀ ಯೋಧರು ಚಕ್ರವರ್ತಿಯ ಅಣತಿಯಂತೆ ದುರ್ಗದ ಗೋಡೆಗಳನ್ನು ಒಡೆದು ಕೋಟೆಯೊಳಗೆ ಪ್ರವೇಶಿಸಿದರು. ಕಸೂತಿ ವಸ್ತ್ರಗಳನ್ನು ತೊಟ್ಟು, ಬೆಲೆಯುಳ್ಳ ರತ್ನಾಭರಣಗಳನ್ನು ಧರಿಸಿದ ಚೆಲುವೆಯರಿಂದ ನಗರದ ಬೀದಿಗಳು ತುಂಬಿದ್ದುವು. ಧನಾಢ್ಯರಾದ ವ್ಯಾಪಾರಿಗಳಿಂದ ನಗರ ಸಂಪತ್ಸಮೃದ್ಧವಾಗಿದ್ದಿತು. ಬೊಕ್ಕಸಗಳಲ್ಲಿ ಹೊನ್ನು ರತ್ನಗಳು ತುಳುಕುತ್ತಿದ್ದುವು. ಗುಡ್ಡಬೆಟ್ಟಗಳ ಹುಲ್ಲುಗಾವಲುಗಳಲ್ಲಿ ಲೆಕ್ಕಕ್ಕೆ ಮಿಕ್ಕಿದ ತುರುಮಂದೆಗಳು ಮೇಯುತ್ತಿದ್ದುವು. ಇಂತಹ ಸುಂದರ ನಗರವನ್ನು ಇರಾನಿನ ಸೈನಿಕರು ಸುಟ್ಟು ಉರಿಸಿ ಶ್ಮಶಾನ ಕ್ಷೇತ್ರವನ್ನಾಗಿ ಮಾಡಿದರು.

ಈ ನಗರದ ರಕ್ಷಕನಾಗಿದ್ದ ರಾಕ್ಷಸನು ಮಹಾ ಬಲಶಾಲಿಯೂ ಮಾಯಾ ವಿದ್ಯೆಯಲ್ಲಿ ನಿಷ್ಣಾತನೂ ಆಗಿದ್ದನು. ಅವನನ್ನು ಧವಳಾಸುರ ನೆಂದು ಕರೆಯುತ್ತಿದ್ದರು ಇರಾನಿ ಸೈನಿಕರು ಈ ನಗರವನ್ನು ಸೂರೆಗೈದಾಗ ಅವನು ನಗರದಲ್ಲಿದ್ದಿಲ್ಲ "ಇರಾನಿಯರು ನಮ್ಮ ನಗರಗಳನ್ನು ಆಕ್ರಮಿಸಿ ಧ್ವಂಸಮಾಡುತ್ತಿದ್ದಾರೆ. ನೀನು ನೆರವಿಗೆ ಬಾರದಿದ್ದರೆ ನಮ್ಮ ನಾಡು ಸುಡುಗಾಡಾಗುವುದು " ಎಂದು ಮಜಂಡ್ರದ ಅರಸನು ದಾನವನಿಗೆ ಸುದ್ದಿ ಕಳುಹಿಸಿದನು. "ಇರಾನಿಯರ ದಾಳಿಗೆ ನೀನು ಗಾಬರಿಗೊಳ್ಳುವುದು ಬೇಡ ಎಂದೆಂದಿಗೂ ಮರೆಯಲಾಗದ ಪಾಠವೊಂದನ್ನು ನಾನು ಅವರಿಗೆ ಕಲಿಸು ವೆನು." ಎಂದು ಧವಳಾಸುರನು ಮರುತ್ತರ ಕಳುಹಿಸಿದನು.

ಮಜಂದ್ರ ರಾಜಧಾನಿಯ ಸಮೀಪದಲ್ಲಿಯೇ ಕಾಯಕೋಸನು ತನ್ನ ಪಾಳೆಯವನ್ನು ಹೂಡಿದ್ದನು. ಮರುದಿನ ನಗರವನ್ನು ಸಂಪೂರ್ಣ ಸೂರ ಮಾಡಬೇಕೆಂದು ಇರಾನಿಯರ ಉದ್ದೇಶವಾಗಿದ್ದಿತು. ಅದಕ್ಕೋಸುಗ ಬೇಕಾದ ಸಿದ್ಧತೆಗಳನ್ನು ಅವರು ಮಾಡಿದರು. ಆ ಇರುಳು ಒಂದು ಭೀಕರ ಕಾರ್ಮುಗಿಲು ಇರಾನಿಯರ ಪಾಳೆಯುಗಳ ಮೇಲೆ ಬಾನನ್ನು ಮುಸುಕಿತು. ಎಲ್ಲಿ ನೋಡಿದರೂ ಕಾಡಿಗೆಯಂತಹ ಕಪ್ಪಲ್ಲದೆ ಬೇರೇನೂ ಗೋಚರಿಸದು. ಬಾಂದಳದಲ್ಲಿ ತಾರೆಗಳೊಂದೂ ತೋರವು. ಇರಾನಿಯರ ಮೇಲೆ ಆಲಿ ಕಲ್ಲುಗಳ ಮಳೆ ಸುರಿಯಲಾರಂಭಿಸಿತು. ಒಂದೊಂದು ಆಲಿಕಲ್ಲು ತೆಂಗಿನ ಕಾಯಿಯಷ್ಟು ಗಾತ್ರವುಳ್ಳುದು. ಈ ಆಲಿ ಕಲ್ಲುಗಳು ಗೂಡಾರಗಳ ಬಟ್ಟೆ ಗಳನ್ನು ಸೀಳಿದುವು. ಅವುಗಳ ಪೆಟ್ಟುಗಳಿಗೆ ಅಸಂಖ್ಯಾತ ಯೋಧರು ಹತರಾದರು. ಕೆಲವು ಮಂದಿ ಸೈನಿಕರು ಜೀವವುಳಿದರೆ ಸಾಕೆಂದು ಕತ್ತ ಲಲ್ಲಿ ಓಡಿಹೋದರು. ಬೆಳಕು ಹರಿದಾಗ ಪಾಳೆಯುಗಳಲ್ಲಿ ಅಳಿಯದೆ ಉಳಿದ ವರು ದೃಷ್ಟಿಯನ್ನು ಕಳಕೊಂಡು ಕುರುಡರಾಗಿದ್ದರು. ಕಾಯಕೋಸನು ಕಣ್ಣು ಕಳಕೊಂಡು, ಅಂಧ ಚಕ್ರವರ್ತಿಯಾದನು

ಏಳು ದಿನಗಳ ಕಾಲ ಇರಾನಿಯರು ಅನ್ನ ನೀರುಗಳಿಲ್ಲದೆ ಸಂಕಟ ದಿಂದ ನರಳಿದರು. ಎಂಟನೆಯ ದಿನ ಧವಳಾಸುರನ ಭೀಕರ ಗರ್ಜನೆ ಅವರಿಗೆ ಕೇಳಿಸಿತು. ಅದು ಸಿಡಿಲಿನ ಭೀಷಣ ರವವನ್ನು ಹೋಲುತ್ತಿ ದ್ದಿತು. "ಎಲೈ ಚಕ್ರವರ್ತಿಯೇ, ನೀನು ನನ್ನ ಮಂದಿಯನ್ನು ಅಕಾರಣ ವಾಗಿ ವಧಿಸಿದೆ. ನಿನ್ನ ಈ ದುರ್ವರ್ತನೆಗೆ ನಾನು ಭೀಷಣ ದಂಡವನ್ನು

ವಿಧಿಸಿದ್ದೇನೆ ಈ ದುಷ್ಕಾರ್ಯವನ್ನು ಕೈಕೊಳ್ಳಬೇಡವೆಂದು ನಿನಗೆ ಬೋಧಿಸಲು ನಿನ್ನ ಆಸ್ಥಾನದಲ್ಲಿ ಪ್ರಾಜ್ಞರು ಯಾರೂ ಇರಲಿಲ್ಲವೇ?"

ಈಗ ಕಾಯಕೋಸನಿಗೆ ಹಾಲುಗೂದಲಿನ ಜಾಲನ ಹಿತೋಪದೇಶ ನೆನಪಾಯಿತು ಆ ವೃದ್ಧ ವೀರನ ವಚನಬೋಧೆಯನ್ನು ತಾನು ಕಡೆಗಣಿಸಿ ದುದರಿಂದ ಈ ವಿಪತ್ತು ಸಮನಿಸಿತೆಂದು ಚಕ್ರವರ್ತಿ ಕಣ್ಣೀರ ಹೊನಲನ್ನು ಹರಿಸಿದನು

ಹನ್ನೆರಡು ಸಾವಿರ ಮಂದಿ ರಾಕ್ಷಸ ಯೋಧರು ಬಂದು ಅಂಧರಾದ ಇರಾನಿಯರನ್ನು ಬಳಸಿದರು ಆ ರಾಕ್ಷಸರು ಅವರನ್ನೆಲ್ಲಾ ಬಂಧಿಸಿ ಕಾರಾ ಗೃಹಕ್ಕೆ ದೂಡಿದರು.

ಚಕ್ರವರ್ತಿಯೂ ಸೈನಿಕರೂ ಸೆರೆಯಾದ ವಿಚಾರವನ್ನು ದೂತನೊ ಬ್ಬನು ಶಿಸ್ತಾನಕ್ಕೆ ಹೋಗಿ ಜಾಲನಿಗೆ ನಿವೇದಿಸಿದನು. ಚಕ್ರವರ್ತಿ ಸೆರೆಯಾ ಳಾದ ವಾರ್ತೆಯನ್ನು ಕೇಳಿ ಜಾಲನು ಕೋಪದಿಂದ ಕಾದ ಕೆಂಡವಾದನು. ಅವನು ರುಸ್ತುಮನನ್ನು ಕರೆದು, "ನೀನು ರಾಕ್ಷಸರ ಬಂಧನದಿಂದ ಕಾಯ ಕೋಸನನ್ನು ವಿಮೋಚಿಸಲೇ ಬೇಕು ನಿನ್ನ ಒರೆಯಿಂದ ಖಡ್ಗವನ್ನು ತೆಗೆ; ರಕ್ಷನಿಗೆ ಜೀನು ಹಾಕು. ನಾನು ಮುದುಕನಾದುದರಿಂದ ನನ್ನ ತೋಳುಗಳ ತ್ರಾಣ ಕುಂದಿದೆ. ಇಲ್ಲದಿದ್ದರೆ ನಾನೂ ನಿನ್ನೊಡನೆ ಬರುತ್ತಿದ್ದೆ. ರುಸ್ತುಂ, ನೀನು ತಾತ ಸಾನನ ಖಡ್ಗವನ್ನು ತೆಗೆದುಕೋ ಪೂರ್ವದಲ್ಲಿ ನನ್ನ ಅಜ್ಜ ಸೋಹಂ ಎಂಬ ಉತ್ತಮಾಶ್ವವನ್ನೇರಿ, ನಿನ್ನ ಈ ಗದೆಯಿಂದಲೇ ಮಜಂದ್ರದ ರಕ್ಕಸರನ್ನು ನಸೆಬಡಿದ; ಈಗ ನೀನು ನಿನ್ನ ಅಜ್ಜನಂತೆಯೇ ಆ ಖೂಳ ದಾನವರನ್ನು ಸಂಹರಿಸಿ ಚಕ್ರವರ್ತಿಯನ್ನು ಸೆರೆಯಿಂದ ಬಿಡಿಸಬೇಕಾಗಿದೆ. ಈ ಸಾಹಸ ನಿನ್ನ ಕೀರ್ತಿಯನ್ನು ಈ ಪ್ರಪಂಚದಲ್ಲಿ ಆಚಂದ್ರಾರ್ಕ ನೆಲೆ ಗೊಳಿಸುವುದು'' ಎಂದು ಹೇಳಿದನು.

"ಅಪ್ಪಾ, ಮಜಂದ್ರಕ್ಕೆ ಈಗ ಇರುವ ಬಳಸು ದಾರಿಯಿಂದಲೇ ಹೋಗಬೇಕೆ? ಅಲ್ಲ ಯಾವುದಾದರೂ ಹತ್ತಿರದ ಒಳ ದಾರಿಯಿದೆಯೇ?'' ಎಂದು ರುಸ್ತುಂ ಕೇಳಿದಾಗ, ಜಾಲನು ''ಬೆಟ್ಟಗುಡ್ಡ ಮತ್ತು ಕಾಡುಗಳ ಎಡೆಯಲ್ಲಿ ಒಳದಾರಿಯೊಂದಿದೆ. ಆದರೆ ಈ ದಾರಿಯಲ್ಲಿ ರಕ್ಕಸರೂ ಮಾಯಾ ವಿಗಳೂ ಹಿಂಸಮೃಗಗಳೂ ತುಂಬಿರುವವು. ಈ ಮಾರ್ಗವನ್ನು ಕೈಕೊಂ ಡರೆ ಮಜಂದ್ರವನ್ನು ಸೇರಲು ಎರಡು ವಾರಗಳು ಮಾತ್ರ ಸಾಕಾಗುವುವು''

ಎಂದು ಉತ್ತರಿಸಿದನು.

"ನಾನು ಒಳದಾರಿಯಲ್ಲಿಯೇ ಹೋಗುವೆನು. ಅರಮನೆಯ ಸುಖ ಜೀವನದಿಂದ ನನಗೆ ಬೇಸರಬಂದಿದೆ. ದಾರಿಯಲ್ಲಿ ಸಿಗುವ ಸಿಂಹ, ರಕ್ಕಸ ಮತ್ತು ಮಾಯಾವಿಗಳೊಡನೆ ಹೋರಾಡಿ ನನ್ನ ತೋಳುಗಳ ನವೆಯನ್ನು ತೀರಿಸಿಕೊಳ್ಳುವೆನು" ಎಂದು ರುಸ್ತುಂ ಪ್ರಯಾಣಕ್ಕೆ ತಂದೆಯ ಆಶೀರ್ವಾದ ಪಡೆದನು.

ಮರುದಿನ ಮುಂಬೆಳಗಿನಲ್ಲಿ ರುಸ್ತುಂ ಯೋಧವೇಷವನ್ನು ಧರಿಸಿ ಮಜಂದ್ರ ಯಾತ್ರೆಯನ್ನು ಕೈಗೊಂಡನು. ಅವನು ತೀಕ್ಷ್ಣ ಬುದ್ಧಿಯಿಂದ ಕೂಡಿದ ರಕ್ಷನನ್ನು ಏರಿದನು. ಜೀನಿನ ಒಂದು ಪಾರ್ಶ್ವದಲ್ಲಿ ತಾತ ಸಾಸನ ಗದೆ ತೂಗುತ್ತಿದ್ದಿತು. ಇನ್ನೊಂದು ಪಾರ್ಶ್ವದಲ್ಲಿ ಪಾಶಾಯುಧವಿದ್ದಿತು. ಇದು ಚರ್ಮಗಳನ್ನು ಹುರಿಗೊಳಿಸಿ ಮಾಡಿದ ಒಂದು ಹಗ್ಗವಾಗಿದ್ದಿತು. ಅದರ ತುದಿಯಲ್ಲಿ ಉರುಳು ಇದ್ದಿತು. ಅವನು ಈ ಆಯುಧವನ್ನು ಉಪಯೋಗಿಸಬೇಕಾದಾಗ ಹಗ್ಗದ ತುದಿಯನ್ನು ಕೈಯಲ್ಲಿ ಹಿಡಿದು ತಲೆಯ ಸುತ್ತಲೂ ತಿರುಗಿಸುತ್ತಿದ್ದನು ಆಗ ಹಗ್ಗದ ಹುರಿಗಳು ಬಿಡುತ್ತಿದ್ದುವು. ಆ ಮೇಲೆ ಅವನು ತನಗೆ ಬೇಕಾದ ಮನುಷ್ಯ ಅಥವಾ ಮೃಗದ ಮೇಲೆ ಅದನ್ನು ಎಸೆಯುತ್ತಿದ್ದನು. ಈ ಪಾಶದ ಉರುಳಲ್ಲಿ ಕೈಯೋ, ಕಾಲೋ ಅಥವಾ ತಲೆಯೋ ಸಿಕ್ಕಿದ ಮೃಗ ಪಕ್ಷಿಗಳಾಗಲೀ ಅಥವಾ ಮನುಷ್ಯನಾಗಲೀ ಬಿಡಿಸಿಕೊಳ್ಳುವುದು ಅಸಾಧ್ಯವಾಗಿತ್ತು.

ಅವನ ಈಟಿ ಮತ್ತು ಕೃಪಾಣಗಳು ಯಾವ ಬಗೆಯ ಅಲಂಕಾರಗಳೂ ಇಲ್ಲದೆ, ನಿರಾಡಂಬರವಾಗಿದ್ದುವು. ಸೊಂಟಕ್ಕೆ ಬಿಗಿದ ಚರ್ಮದ ದಟ್ಟಿಗೆ ಕಠಾರಿಯನ್ನು ಸಿಕ್ಕಿಸಿದ್ದನು. ತಲೆಯ ಮೇಲೆ ಸುವರ್ಣ ಖಚಿತ ಶಿರಸ್ತ್ರಾಣ ವಿದ್ದಿತು. ಈ ಪರಿ ಯುದ್ಧವೇಷವನ್ನು ಧರಿಸಿದ ರುಸ್ತುಂ ಚಕ್ರವರ್ತಿಯ ಬಂಧವಿಮೋಚನೆಗೆಂದು ಹೊರಟನು. ತಾನು ಜಯಶೀಲನಾಗಿ ಬರುವೆನೆಂಬ ಪೂರ್ಣ ವಿಶ್ವಾಸ ಅವನಿಗಿದ್ದಿತು. ಆದರೆ ಅವನು ಹಾಗೆ ಹೋಗುವುದು ತಾಯಿ ರುದಾಬೆಗೆ ಇಷ್ಟವಿರಲಿಲ್ಲ. ಮಗನ ಅಗಲಿಕೆಯಿಂದ ತಾಯಿಗೆ ಬೇಸರವಾಯಿತು.

## ಆರು

ರುಸ್ತುಂ ಧರಿಸಿದ ಆಯುಧಗಳು ಭಾರವಾಗಿದ್ದುದರಿಂದ ಅವನು ತನ್ನ

ಸಂಗಡ ತನಗೆ ಬೇಕಾದ ಆಹಾರವನ್ನು ಒಯ್ದಿರಲಿಲ್ಲ. ದಾರಿಯಲ್ಲಿ ಬೇಟೆ ಯಾಡಿ ಆಹಾರ ಸಂಪಾದಿಸಬಹುದೆಂಬ ಭರವಸೆ ಅವನಲ್ಲಿತ್ತು. ಆ ದಿನ ಸಂಜೆಯ ತನಕ ರಕ್ಷ ವೇಗವಾಗಿ ನಡೆಯಿತು. ಮೊದಲನೆಯ ದಿನ ಅದು ಇತರ ಕುದುರೆಗಳು ಎರಡು ದಿನಗಳಲ್ಲಿ ಹೋಗಬಹುದಾದಷ್ಟು ದೂರವನ್ನು ಅತಿಕ್ರಮಿಸಿದ್ದಿತು. ಅಂದು ಸಂಜೆಗೆ ರುಸ್ತುಂ ಪರ್ವತದ ತಪ್ಪಲಲ್ಲಿರುವ ಅರಣ್ಯವೊಂದನ್ನು ಸೇರಿದನು. ಅವನು ಮಾರ್ಗ ಶ್ರಮದಿಂದ ಬಳಲಿದ್ದನು ಹಸಿವು ಅವನನ್ನು ಬಾಧಿಸುತ್ತಿದ್ದಿತು. ಆದುದರಿಂದ ಆ ಇರುಳನ್ನು ಅಲ್ಲೇ ಕಳೆಯಲು ಅವನು ನಿರ್ಧರಿಸಿದನು.

ಆ ಅರಣ್ಯದಲ್ಲಿ ತುಂಬ ಕಾಡುಗತ್ತೆಗಳು ವಾಸವಾಗಿದ್ದುವು. ರುಸ್ತುಂ ಕತ್ತೆಯೊಂದರ ಮೇಲೆ ಪಾಶವನ್ನು ಬೀಸಿ ಹಿಡಿದನು. ಒಣಗಿದ ಹುಲ್ಲು ಕಡ್ಡಿ ಕೊಂಬೆಗಳನ್ನು ಜತೆಗೂಡಿಸಿ ಬೆಂಕಿಯನ್ನುರಿಸಿದನು. ಕತ್ತೆಯ ಚರ್ಮ ವನ್ನು ಸುಲಿದು ಮಾಂಸವನ್ನು ಬೆಂಕಿಯಲ್ಲಿ ಬೇಯಿಸಿ, ಹಸಿವೆಯನ್ನು ಹಿಂಗಿಸಿಕೊಂಡನು. ಜೀನು ಕಡಿವಾಣಗಳನ್ನು ಕಳಚಿಹಾಕಿ, ರಕ್ಷನನ್ನು ಅಲ್ಲೇ ಮೇಯಬಿಟ್ಟನು. ಮತ್ತೆ ಪೊದೆಗಳ ನಡುವೆ ಮುಂಜುಬೀಳದ ಗೂಡಿ ನಂತೆ ಅನುಕೂಲವಾದ ಸ್ಥಳದಲ್ಲಿ ತಲೆಯಡಿಯಲ್ಲಿ ಖಡ್ಗವನ್ನಿಟ್ಟುಕೊಂಡು ಮಲಗಿ ನಿದ್ದೆಹೋದನು.

ರುಸ್ತುಂ ವಿಶ್ರಮಿಸಿದ ಸ್ಥಳ ಒಂದು ಸಿಂಹದ ವಸತಿಯಾಗಿತ್ತು. ರಾತ್ರಿ ಸಿಂಹ ತನ್ನ ಬೇಟೆಯನ್ನು ಮುಗಿಸಿಕೊಂಡು ವಸತಿಗೆ ಮರಳಿತು. ಅದು ತನ್ನ ವಸತಿಯಲ್ಲಿ ಭೀಮಕಾಯನಾದ ಮನುಷ್ಯನು ಮಲಗಿರುವುದನ್ನೂ ಬಳಿಯಲ್ಲೇ ನಿಂತಿರುವ ಆಳೆತ್ತರದ ಕುದುರೆಯನ್ನೂ ಕಂಡಿತು.

"ನಾನು ಮೊದಲು ಈ ಕುದುರೆಯನ್ನು ಕೊಲ್ಲುವೆನು. ಆಗ ಈ ಮನುಷ್ಯ ಕುದುರೆಯೇರಿ ತಪ್ಪಿಸಿಕೊಂಡು ಓಡಲಾರ. ಅಲ್ಲದೆ ಕುದುರೆ ಯಿಂದ ನನ್ನ ಹಸಿವೆಯನ್ನೂ ಹಿಂಗಿಸಿಕೊಳ್ಳಬಹುದು" ಎಂದು ಯೋಚಿಸಿ ಸಿಂಹ ಕುದುರೆಯ ಮೇಲೆ ನೆಗೆಯಿತು. ಆದರೆ ರಕ್ಷ ಸುಮ್ಮನಿರಲಿಲ್ಲ. ಅದು ಸಿಂಹವನ್ನು ಎದುರಿಸಲು ಸಿದ್ಧವಾಗಿಯೇ ಇತ್ತು. ಅದು ಮುಂಗಾಲು ಗಳನ್ನು ಮೇಲೆತ್ತಿ ತನ್ನ ಉಕ್ಕಿನ ಗೊರಸುಗಳಿಂದ ಕೇಸರಿಯ ಮಸ್ತಕವನ್ನ ಪ್ಪಳಿಸಿತು. ಅದು ತನ್ನ ಹಲ್ಲುಗಳಿಂದ ಮೃಗರಾಜನ ಬೆನ್ನ ಮೇಲಿನ ಮಾಂಸಖಂಡಗಳನ್ನು ಕಚ್ಚಿ ಕಿತ್ತುಬಿಟ್ಟಿತು. ಮೃಗರಾಜನ ಮೈಯಿಂದ

ಧಾರಾಕಾರವಾಗಿ ನೆತ್ತರು ಹರಿಯಿತು. ಕೇಸರಿಯ ಪರಾಕ್ರಮ ಕುದುರೆಯ ಮುಂದೆ ಸಾಗದಾಯಿತು. ಅದು ನೋವು ಕೋಪಗಳಿಂದ ಬಹು ಭೀಕರವಾಗಿ ಗರ್ಜಿಸಿತು. ಮೃತ್ಯು ಮುಖವನ್ನು ಪ್ರವೇಶಿಸುತ್ತಿರುವ ಸಿಂಹದ ಭೀಷಣ ಗರ್ಜನೆಗಳು ನಿದ್ರೆಯಲ್ಲಿ ಮೈಮರೆತಿದ್ದ ರುಸ್ತುಮನನ್ನು ಎಚ್ಚರಿಸಿದುವು. ಅವನು ಕುದುರೆಯಿದ್ದಲ್ಲಿ ಬಂದು ನೋಡಿದನು. ಸಿಂಹ ನೆಲದ ಮೇಲೆ ಹೊರಳಿ ಕೊನೆಯುಸಿರನ್ನು ಎಳೆಯುತ್ತಿದ್ದಿತು ರಕ್ಷ ಕಣ್ಣುಗಳನ್ನು ಕೆಂಪು ಮಾಡಿ ಕೆನೆಯುತ್ತಿದ್ದಿತು

"ನೀನೇಕೆ ಕೆನೆದು ನನ್ನನ್ನು ಎಚ್ಚರಿಸಲಿಲ್ಲ? ನೀನು ಏಕಾಂಗಿಯಾಗಿ ಸಿಂಹವನ್ನು ಎದುರಿಸಿದುದು ಬುದ್ಧಿವಂತಿಕೆಯಾಗಲಿಲ್ಲ ರಕ್ಷ, ನೀನೆಲ್ಲಾದರೂ ಈ ಹೋರಾಟದಲ್ಲಿ ಮಡಿದಿದ್ದರೆ, ಈ ಗಂಡುಗೊಡಲಿ, ಶಿರಸ್ತ್ರಾಣ, ಖಡ್ಗ, ಗದೆ, ಬಿಲ್ಲಂಬುಗಳು ಮತ್ತು ಗುರಾಣಿ ಇವುಗಳನ್ನು ಹೊತ್ತುಕೊಂಡು ನಾನು ಹೇಗೆ ತಾನೇ ಮಜಂದ್ರವನ್ನು ಸೇರಬೇಕಿತ್ತು? ಇನ್ನು ಮುಂದೆ ಸಿಂಹ ಗಳನ್ನು ಎದುರಿಸುವ ಸಾಹಸಕ್ಕೆ ಕೈಹಾಕಬೇಡ. ನೀನು ಸುಖವಾಗಿ ನಿದ್ದೆ ಮಾಡು." ಎಂದು ಕುದುರೆಯ ಬೆನ್ನು ತಟ್ಟಿ ಹೊಗಳಿದನು. ಮರುದಿನ ನಸುಕಿನಲ್ಲಿ ರುಸ್ತುಮನು ಪ್ರಯಾಣ ಮುಂದುವರಿಸಿದನು.

ಈಗ ರುಸ್ತುಮನ ಪ್ರಯಾಣ ಅತ್ಯಂತ ಭಯಾನಕ ಪ್ರದೇಶಕ್ಕೆ ತಲ ಪಿತು. ಅವನ ಕಣ್ಣ ಮುಂದೆ ನೀರು ನೆರಳುಗಳಿಲ್ಲದ ಮರಳುಗಾಡು ವ್ಯಾಪಿ ಸಿದ್ದಿತು. ನೆಲ ಕಾದ ಕಬ್ಬಿಣದಂತೆ ಸುಡುತ್ತಿದ್ದಿತು. ಆಗಸದಲ್ಲಿ ಹಕ್ಕಿಗಳ ಸುಳಿವಿಲ್ಲ; ನೆಲವಲ್ಲಿ ಮೃಗಗಳ ಹಜ್ಜೆಗಳಿಲ್ಲ. ಸೂರ್ಯ ತನ್ನ ಸಾವಿರ ಕಿರಣ ಗಳಿಂದ ರುಸ್ತುಮನ ಮೋರೆಯನ್ನು ಚುಚ್ಚುತ್ತಿದ್ದನು. ಈ ಮರುಭೂಮಿ ಯಲ್ಲಿ ಪ್ರಯಾಣವನ್ನು ಮುಂದುವರಿಸುವುದು ಅಸದಳವೆನಿಸಿತು. ಕುದುರೆಯ ಮೇಲೆ ಕುಳಿತುಕೊಳ್ಳುವುದೇ ಅವನಿಗೆ ಪ್ರಯಾಸವಾಯಿತು. ಅವನು ಕುದುರೆಯ ಬೆನ್ನ ಮೇಲೆ ಮಲಗಿ; ಒಂದು ಕೈಯಿಂದ ಲಗಾಮನ್ನೂ ಇನ್ನೊಂದು ಕೈಯಿಂದ ಈಟಿಯನ್ನೂ ಹಿಡಿದು, ಸವಾರಿ ಮುಂದುವರಿಸಿ ದನು. ಚಂಡಕಿರಣನ ಪ್ರತಾಪದ ಉರಿಯನ್ನು ಕಂಡು, ಅವನಿಗೆ ತಾನು ಹಳದಿ ವರ್ಣದ ಬೆಂಕಿಯ ಮಧ್ಯದಲ್ಲಿ ಮಲಗಿರುವಂತೆ ಭಾಸವಾಯಿತು. ಕಾಯಕೋಸ ಚಕ್ರವರ್ತಿ, ಇರಾನಿನ ಸೇನೆ, ತಂದೆ ಜಾಲ, ಮಜಂದ್ರದಲ್ಲಿ ತಾನು ಕೈಕೊಳ್ಳಬೇಕಾದ ಆದಟಿನ ಮಾಳ್ಕೆ, ಹೀಗೆ ಹಲವು ಸಂಗತಿಗಳು

ಸ್ಮೃತಿಪಟಲದಲ್ಲಿ ಬಿಂಬಿಸಿದುವು. ಈ ಬಿಸಿಲ ಬೇಗೆಯಿಂದ ಪಾರಾಗುವ ಶಕ್ತಿಯನ್ನು ಅನುಗ್ರಹಿಸಬೇಕೆಂದು ಅವನು ಅನನ್ಯ ಭಕ್ತಿಯಿಂದ ದೇವರಲ್ಲಿ ಮೊರೆಯಿಟ್ಟನು.

ಅವನ ನಾಲಗೆಯೊಣಗಿ ಒಣಚರ್ಮದಂತಾಯಿತು. ತೃಷೆಯಿಂದ ಕೊರಳು ಬತ್ತಿತು. ತಾನು ಈ ಮರುಭೂಮಿಯಲ್ಲಿ ಮಡಿವೆನೊ? ಎಂಬ ಭಯ ಎದೆಯಲ್ಲಿ ಮೂಡಿತು. ಆದರೆ ದೇವರು ಕರುಣಾಮಯನು. ರುಸ್ತುಂ ಇನ್ನೂ ಅನೇಕ ಅದಟಿನ ಕಾರ್ಯಗಳನ್ನು ಎಸಗಬೇಕೆಂದು ದೈವ ಸಂಕಲ್ಪ ವಾಗಿತ್ತು. ಹೀಗೆ ಉರಿಯುವ ಬಿಸಿಲಲ್ಲಿ ಅವನು ಮುಂದುವರಿಯುತ್ತಿರಲು ದೂರದಲ್ಲಿ ಕಾಡುಕುರಿಯೊಂದು ಓಡುವುದು ಕಾಣಿಸಿತು ಅವನು ಕೂಡಲೇ ಆ ವನ್ಯ ಜಂತುವನ್ನು ಹಿಂಬಾಲಿಸಿದನು

ಈ ವನ್ಯಜಂತು ನೀರಿನ ಚಿಲುಮೆಯುಳ್ಳ ಒಂದು ಕಡೆಗೆ ರುಸ್ತುಮ ನನ್ನು ಕರೆದುಕೊಂಡು ಹೋಯಿತು. ಒಂದು ಬಂಡೆಯ ಮಗ್ಗುಲಲ್ಲಿ ತಿಳಿ ನೀರಿನ ಬುಗ್ಗೆಯೊಂದಿದ್ದಿತು. ಅವನು ಕುದುರೆಯ ಮೇಲಿಂದಿಳಿದು ಸವಿ ನೀರನ್ನು ಕುಡಿದು ಬಾಯಾರಿಕೆಯನ್ನು ಹಿಂಗಿಸಿಕೊಂಡನು ರಕ್ಷನೂ ತನ್ನ ಪಿಪಾಸೆಯನ್ನು ಹಿಂಗಿಸಿಕೊಂಡಿತು.' ನೀರಡಿಕೆಯ ತಾಪದಿಂದ ತನ್ನನ್ನು ಕಾಪಾಡಿದುದಕ್ಕೆ ಆ ವೀರನು ಕಾಡುಕುರಿಯನ್ನು ಮನದಲ್ಲೇ ವಂದಿಸಿದನು ಅವನು ಆ ವನ್ಯ ಜಂತುವಿನತ್ತ ಕಣ್ಣು ಹೊರಳಿಸಿ "ನೀನು ನೀರಿನ ಚಿಲುಮೆ ಯನ್ನು ತೋರಿಸಿ ರುಸ್ತುಮನ ಪ್ರಾಣವನ್ನು ಉಳಿಸಿದೆ. ಇಲ್ಲದಿದ್ದರೆ ನಾನು ಬೆಂಗಾಡಿನಲ್ಲಿ ಮೃತನಾಗುತ್ತಿದೆ. ತೋಳಗಳು ನನ್ನ ದೇಹವನ್ನು ಭಕ್ಷಿಸಿ ಮೂಳೆಗಳಿಗೆ ಮರಳ ರಾಶಿಯ ಸಮಾಧಿಯನ್ನು ನಿರ್ಮಿಸುತ್ತಿದ್ದುವು. ನಿನಗೆ ಈ ಮರುಭೂಮಿ ಎಂದೆಂದಿಗೂ ಹಸುರಾಗಿರಲಿ." ಎಂದು ಕಾಡುಕುರಿ ಯನ್ನು ಹರಸಿದನು

ಚಿಲುಮೆಯ ಶೀತಲ ಸಲಿಲ ರುಸ್ತುಮನ ದಾಹ ದಣಿವುಗಳನ್ನು ಪರಿಹರಿಸಿತು; ಅವನ ದೇಹಕ್ಕೆ ನವಶಕ್ತಿಯನ್ನು ಪ್ರಧಾನಮಾಡಿತು. ಆ ಬುಗ್ಗೆಯ ಸನಿಹದಲ್ಲಿಯೇ ಇರುಳನ್ನು ಕಳೆಯುವುದೆಂದು ಅವನು ನಿಷ್ಟಯಿ ಸಿದನು. ರಕ್ಷನು ಬುಗ್ಗೆಯ ಸಮೀಪದಲ್ಲಿದ್ದ ಹುಲ್ಲನ್ನು ಮೇಯುತ್ತಿತ್ತು. ಅವನು ಕುದುರೆಯನ್ನು ಕರೆದು "ನೀನು ಈ ಇರುಳು ಅಪರಿಚಿತ ಮೃಗ ಗಳೊಡನೆ ಕಲಹಕ್ಕೆ ಕೈಹಚ್ಚಬೇಡ. ಸಿಂಹವೋ, ರಾಕ್ಷಸನೋ ಬಂದರೆ

ಗಟ್ಟಿಯಾಗಿ ಕೆನೆದು ನನ್ನನ್ನು ನಿದ್ದೆಯಿಂದ ಎಚ್ಚರಿಸು." ಎಂದು ಹೇಳಿ ಇರುಳು ಹೆಚ್ಚಿದುದರಿಂದ ಮಲಗಿ ನಿದ್ದೆಹೋದನು.

ರುಸ್ತುಂ ನಿದ್ರಿಸಿದ ಮೇಲೂ ರಕ್ಷ ಅಲ್ಲಿ ಬೆಳೆದ ಗಿಡಮೂಲಿಕೆಗಳನ್ನು ಮೇಯುವುದರಲ್ಲೆ ನಿರತವಾಗಿತ್ತು. ರುಸ್ತುಂ ವಿಶ್ರಮಿಸಿದ ಆ ಸ್ಥಳ ಅಷ್ಟೊಂದು ಸುರಕ್ಷಿತವಾಗಿರಲಿಲ್ಲ. ಅದು ಸರ್ಪಾಕಾರವುಳ್ಳ ಒಂದು ದುಷ್ಟ ಭೂತದ ನಿವಾಸಸ್ಥಾನವಾಗಿದ್ದಿತು. ಅದು ನೆಲಸಿರುವ ಗವಿಯ ಬಳಿ ಅಡ್ಡ ಹಾಯಲು ಆನೆ ಸಿಂಹ ಮೊದಲಾದ ವನ್ಯ ಮೃಗಗಳಾಗಲೀ, ರಾಕ್ಷಸರಾ ಗಲೀ ಧೈರ್ಯ ಪಡುತ್ತಿರಲಿಲ್ಲ. ತನ್ನ ವಿಶ್ರಾಮ ಧಾಮದಲ್ಲಿ ಒಂದು ಕುದುರೆ ಮತ್ತು ಒಬ್ಬ ಮನುಷ್ಯ ಇರುವುದನ್ನು ಕಂಡು ಆ ದುಷ್ಟ ಸತ್ವಕ್ಕೆ ವಿಪರೀತ ಸಿಟ್ಟು ಬಂತು ಅದು ರಕ್ಷನನ್ನು ಕೊಲ್ಲಲೆಂದು ಹವಣಿಸಿತು

ಸ್ವಾಮಿ ನಿದ್ರಿಸುವ ಮುನ್ನ ಹೇಳಿದ ಹಿತವಚನಗಳು ರಕ್ಷನಿಗೆ ನೆನಪಾ ದುವು. ಆದುದರಿಂದ ಅದು ಭಯಂಕರ ಸತ್ವವನ್ನು ಎದುರಿಸುವ ಗೋಜಿಗೆ ಹೋಗಲಿಲ್ಲ ಅದು ರುಸ್ತುಮನನ್ನು ಸಮೀಪಿಸಿ ಕೆನೆದು, ಗೊರಸುಗಳನ್ನು ನೆಲದ ಮೇಲೆ ಅಪ್ಪಳಿಸಿ ಸದ್ದು ಮಾಡಿತು ಈ ದನಿ ಕೇಳಿ ರುಸ್ತುಮನು ಎಚ್ಚರಗೊಂಡನು. ಅಷ್ಟರಲ್ಲಿ ಆ ದುಷ್ಟ ಭೂತ ರುಸ್ತುಮನ ದೃಷ್ಟಿಗೆ ಬೀಳ ದಂತೆ ಕತ್ತಲೆಯಲ್ಲಿ ಮರೆಯಾಯಿತು. ನಿದ್ದೆಯಿಂದ ಎಚ್ಚತ್ತು ರುಸ್ತುಂ ಅಲ್ಲಿ ಸುತ್ತು ಮುತ್ತು ನೋಡಿ, ಯಾರನ್ನೂ ಕಾಣದೆ ಮರಳಿ ಮಲಗಿ ನಿದ್ರೆ ಹೋದನು.

ರುಸ್ತುಂ ನಿದ್ರಾಸಕ್ತನಾಗಲು ಆ ಭೂತ ರಕ್ಷನನ್ನು ಹಿಡಿಯಲೆಂದು ಇನ್ನೊಮ್ಮೆ ಬಂತು. ಕುದುರೆ ಒಡೆಯನನ್ನು ಇನ್ನೊಮ್ಮೆ ಸಮೀಪಿಸಿ ಎಚ್ಚರಿ ಸಿತು. ಅವನು ಮುಸುಕು ತೆಗೆದು ನೋಡಿದಾಗ ಭೂತ ಮುನ್ನಿನಂತೆ ಕತ್ತಲೆಯಲ್ಲಿ ಮರೆಯಾಯಿತು. ರುಸ್ತುಮನಿಗೆ ಕುದುರೆಯ ವಿಚಿತ್ರ ವರ್ತ ನೆಗೆ ಕಾರಣವೇನೆಂಬುದು ಅರಿವಾಗಲಿಲ್ಲ. ತನ್ನ ನಿದ್ದೆ ಹಾಳು ಮಾಡಿದು ದಕ್ಕೆ ಅವನು ಕುದುರೆಯ ಮೇಲೆ ಕೋಪಗೊಂಡು "ಎಲಾ ರಕ್ಷ, ದಣಿದು ನಿದ್ದೆ ಮಾಡುತ್ತಿರುವ ನನ್ನನ್ನು ಹೀಗೇಕೆ ಎಚ್ಚರಗೊಳಿಸಿ ನಿದ್ದೆ ಹಾಳು ಮಾಡುತ್ತಿರುವೆ? "ಹಗೆಗಳಿಂದ ನಿನ್ನನ್ನು ಕಾಪಾಡುವೆನೆಂದು ನಾನು ಹೇಳಿ ದುದು ನಿಜ. ಆದರೆ ಈಗ ನೀನು ಅಕಾರಣವಾಗಿ ನನ್ನನ್ನು ಎಚ್ಚರಿಸುತ್ತಿ ರುವೆಯಲ್ಲ? ಇನ್ನೊಮ್ಮೆ ನನ್ನನ್ನು ಎಚ್ಚರಿಸಿದುದೇ ಆದರೆ ನಿನ್ನ ತಲೆಯನ್ನು

ನನ್ನ ಕೃಪಾಣಕ್ಕೆ ಬಲಿಗೊಡುವೆನು; ನನ್ನ ಈ ಆಯುಧಗಳ ಹೊರೆಯನ್ನು ನಾನೇ ಹೊತ್ತುಕೊಂಡು ಹೋಗುವೆನು" ಎಂದು ಗದರಿಸಿದನು.

ರುಸ್ತುಮನ ನಿಷ್ಠುರೋಕ್ತಿಗಳು ರಕ್ಷನ ಹೃದಯವನ್ನು ಶಲ್ಯದಂತೆ ಚುಚ್ಚಿದುವು. ಆ ಭೀಕರ ಸತ್ವದಿಂದ ಸ್ವಾಮಿಗೆ ಅಪಾಯ ಒದಗುವುದು ನಿಶ್ಚಯವೆಂದು ತಿಳಿದ ಆ ಕುದುರೆ ತನ್ನ ಸ್ವಾಮಿಯನ್ನು ಬಿಟ್ಟು ಎಳ್ಳಷ್ಟೂ ಕದಲಲಿಲ್ಲ. ಆ ದುಷ್ಟ ಸತ್ವ ಇನ್ನೊಮ್ಮೆ ರುಸ್ತುಮನನ್ನು ಸಮೀಪಿಸಿತು. ರಕ್ಷ ಇನ್ನೊಮ್ಮೆ ಕೆನೆದು ಗೊರಸುಗಳಿಂದ ನೆಲವನ್ನಪ್ಪಳಿಸಿ ಸದ್ದುಮಾಡಿತು. ರುಸ್ತುಂ ಎಚ್ಚರಗೊಂಡು ನಿದ್ರಾಭಂಗಗೈದ ಕುದುರೆಯನ್ನು ಕೊಲ್ಲಲೆಂದು ಕೋಪದಿಂದ ಖಡ್ಗವನ್ನು ಮೇಲೆತ್ತಿದನು. ಅಷ್ಟರಲ್ಲಿ ಮಿಂಚೊಂದು ಹೊಳೆದು ಅಲ್ಲಿ ಪ್ರಭೆಯನ್ನು ಪಸರಿಸಿತು. ಆಗ ದುಷ್ಟ ಸತ್ವದ ಭೀಕರಾಕೃತಿಯು ರುಸ್ತುಮನ ಕಣ್ಣುಗಳಿಗೆ ಬಿದ್ದಿತು ರುಸ್ತುಮನು ಹಿಡಿದ ಖಡ್ಗವನ್ನು ಮೇಲೆತ್ತಿ ಗರ್ಜಿಸುತ್ತಾ ಆ ಭಯಂಕರ ಸತ್ವದ ಮೇಲೆ ಬಿದ್ದನು. ಅವನ ಗರ್ಜನೆಯ ದನಿಗೇಳಿ ದೂರದ ಬೆಟ್ಟಗಳು ಕಂಪಿಸಿದುವು. ಅವನು "ನೀನು ಯಾರು? ನಿನ್ನನ್ನು ಸೀಳುವ ಮುನ್ನ ನೀನು ಯಾರೆಂದು ತಿಳಿಯಲು ನಾನು ಉತ್ಸುಕನಾಗಿದ್ದೇನೆ" ಎಂದು ಆ ಭೂತವನ್ನು ಪ್ರಶ್ನಿಸಿದನು

"ಇದು ನನ್ನ ವಿಶ್ರಾಂತಿ ಸ್ಥಾನ." ನನ್ನ ಗವಿಯ ಮೇಲೆ ಹಾರಲು ಹದ್ದುಗಳು ಸಹ ಅಂಜುತ್ತವೆ. ನನ್ನ ಸ್ಥಳದಲ್ಲಿ ತಂಗಲು ಧೈರ್ಯಪಡುವಷ್ಟು ಮೂರ್ಖನಾದ ನೀನು ಯಾರು?" ದುಷ್ಟ ಸತ್ವದ ಪ್ರಶ್ನೆ.

"ಹಾಲುಗೂದಲಿನ ಜಾಲನ ಪುತ್ರ ರುಸ್ತುಮನೇ ನಾನು. ನಾನು ಭಯಪಡಬೇಕಾದ ಜೀವಿಗಳಾಗಲೀ ಸತ್ವಗಳಾಗಲೀ ಈ ಪ್ರಪಂಚದಲ್ಲಿಯೇ ಇಲ್ಲ." ರುಸ್ತುಮನ ಉತ್ತರ.

ಆ ದುಷ್ಟ ಸತ್ವ ಒಮ್ಮೆಲೇ ರುಸ್ತುಂ ಮತ್ತು ರಕ್ಷನ ಮೇಲೆ ಬಿದ್ದಿತು. ರಕ್ಷನಿಗೆ ಈಗ ಯಾವ ಭಯವೂ ಇಲ್ಲದುದರಿಂದ ಅದು ಭೂತದ ಬೆನ್ನ ಮೇಲೆ ಹಾರಿತು. ಮೊನಚಾದ ಹಲ್ಲುಗಳಿಂದ ಭೂತದ ಬೆನ್ನ ಮೇಲಿನ ಚರ್ಮವನ್ನು ಸುಲಿಯಿತು. ಕುದುರೆಯ ಈ ವಿಲಕ್ಷಣ ಧೈರ್ಯವನ್ನು ಕಂಡು ರುಸ್ತುಂ ಆಶ್ಚರ್ಯಚಕಿತನಾದನು. ತನಗಾದ ವಿಸ್ಮಯ ನಿಮಿತ್ತ ಅವನು ದುಷ್ಟಭೂತದ ತಲೆಯನ್ನು ತರಿವುದನ್ನೇ ಮರೆತು ಬಿಟ್ಟಿದ್ದನು ಆದರೆ ಕರ್ತವ್ಯ ಬೋಧೆ ಅವನನ್ನು ಎಚ್ಚರಿಸಿತು. ಅವನು ಕಣ್ಣುಮುಚ್ಚಿ

ತೆರೆಯುವುದರೊಳಗೆ ಖಡ್ಗದಿಂದ ಆ ಭೂತದ ಶಿರವನ್ನು ದೇಹದಿಂದ ಬೇರ್ಪ ಡಿಸಿದನು.

ದುಷ್ಟ ಸತ್ವವನ್ನು ಸಂಹರಿಸಿದ ಅನಂತರ ರುಸ್ತುಂ ಬುಗ್ಗೆಗೆ ಹೋಗಿ ತನ್ನ ರಕ್ತಲೇಪಿತ ಶರೀರವನ್ನು ತೊಳೆದುಕೊಂಡನು ಅವನು ತನ್ನ ನಚ್ಚಿನ ಕುದುರೆಯ ಮೈದಡವುತ್ತಾ "ನೀನು ನನ್ನ ಬೆಂಗಾವಲಿಗಿರುವಾಗ ಸಿಂಹ, ರಾಕ್ಷಸರಿಗಾಗಲೀ ದೇಹವನ್ನು ದಹಿಸುತ್ತಿರುವ ತೃಷೆಗಾಗಲೀ ಭಯಪಡ ಬೇಕಾದುದಿಲ್ಲ" ಎಂದು ಕುದುರೆಯನ್ನು ಹೊಗಳಿದನು

ಮರುದಿನ ಬೆಳಗಾದೊಡನೆಯೇ ರುಸ್ತುಂ ಆ ಸ್ಥಳವನ್ನು ಬಿಟ್ಟು ಪಯಣವನ್ನು ಮುಂದುವರಿಸಿದನು. ಆ ದಿನ ಅವರ ಯಾತ್ರೆ ಒಂದು ವಿಶಾಲವಾದ ಮೈದಾನದಲ್ಲಿ ಮುಂದುವರಿಯಿತು. ಸೂರ್ಯಾಸ್ತಮಾನದ ವೇಳೆಗೆ ಅವನು ಮಾಯಾವಿಗಳ ನಿವಾಸಸ್ಥಾನವಾದ ಒಂದು ಪ್ರಾಂತವನ್ನು ಸೇರಿದನು. ಮರಗಿಡಗಳೂ ಹಸುರು ಹಚ್ಚೆಗಳೂ ತುಂಬಿದ ಒಂದು ತೊರೆಯ ಬಳಿಗೆ ತಲಪಿದನು

ಅಲ್ಲಿ ತೊರೆಯ ತೀರದಲ್ಲಿ ಒಂದು ಮರದ ಕೆಳಗೆ ಒಳ್ಳೆಯ ಊಟ ಸಿದ್ಧವಾಗಿತ್ತು. ಈ ಸೊಗಸಾದ ಭೋಜನವನ್ನು ಕಂಡು ರುಸ್ತುಮನ ಸೋಜಿಗಕ್ಕೆ ಪಾರವಿಲ್ಲ. ಜಿಂಕೆಯ ಹುರಿದ ಮಾಂಸ, ರೊಟ್ಟಿ ಮತ್ತು ಬಗೆ ಬಗೆಯ ತಿಂಡಿತಿನಸುಗಳು ಅಲ್ಲಿ ತಟ್ಟೆಗಳಲ್ಲಿ ಸಿದ್ಧವಾಗಿದ್ದುವು. ಈ ಖಾದ್ಯ ಗಳನ್ನೆಲ್ಲ ಭಕ್ಷಿಸುವೆನೆಂದು ರುಸ್ತುಂ ತಟ್ಟೆಗೆ ಕೈಚಾಚಿದೊಡನೆಯೇ ಅಲ್ಲಿ ಸಮನಿಸಿದ ಅಚ್ಚರಿಯನ್ನು ಏನೆಂದು ಹೇಳುವುದು! ಅವನು ಕೈಚಾಚುವನಿತ ರಲ್ಲಿ ತಿಂಡಿ ತಿನಸುಗಳೆಲ್ಲವೂ ಮಾಯವಾಗಿದ್ದುವು! ಈ ಊಟ ರಾಕ್ಷಸರ ತಂಡವೊಂದಕ್ಕೆ ಸಿದ್ಧವಾದುದಾಗಿದ್ದಿತು ರುಸ್ತುಮನ ಬರವನ್ನು ಕಂಡು ಅವರು ಭಯಪೀಡಿತರಾಗಿ ಆ ಸ್ಥಳವನ್ನು ಬಿಟ್ಟು ಓಡಿ ಹೋದರು. ಅವ ರೊಡನೆಯೇ ಈ ಖಾದ್ಯಗಳೂ ಮಾಯವಾದುವು!

ಆ ಸ್ಥಳದಿಂದ ಅನತಿ ದೂರದಲ್ಲಿ ಮಾಯಾವಿನಿಯಾದ ಮಂತ್ರಗಾರ್ತಿ ಯೊಬ್ಬಳಿದ್ದಳು. ಅವಳು ರುಸ್ತುಮನನ್ನು ನೋಡಿದಳು. ಅವಳು ಒಬ್ಬ ಸುಂದರ ತರುಣಿಯ ರೂಪವನ್ನು ತಾಳಿದಳು; ರುಸ್ತುಮನಿದ್ದೆಡೆಗೆ ಬಂದು ಅವನನ್ನು ಎದುರುಗೊಂಡಳು. ತಾನು ಕೈಕೊಂಡ ಈ ಅಸಾಧಾರಣ ಪ್ರವಾಸದಲ್ಲಿ ಅವನಿಗೆ ಎರವಾದ ಮೊದಲನೆಯ ದುಷ್ಟಜೀವಿ ಇವಳಾದಳು

ಅವನು ತನ್ನ ಬಳಿಯಿದ್ದ ದ್ರಾಕ್ಷಾರಸವನ್ನು ಒಂದು ಲೋಟದಲ್ಲಿ ಎರೆದು, ತನ್ನನ್ನು ಎದುರುಗೊಂಡ ಸುಂದರಿಯನ್ನು ಸತ್ಕರಿಸಿ ಅವಳ ಕೈಗೆ ಕೊಟ್ಟನು. ತನ್ನ ಉದ್ದಿಷ್ಟ ಸ್ಥಾನಕ್ಕೆ ದಾರಿಯನ್ನು ತೋರಿಸೆಂದು ಅವನು ದೇವರನ್ನು ಪ್ರಾರ್ಥಿಸಿದನು. ದೇವರ ಹೆಸರು ಕಿವಿಗಳಲ್ಲಿ ಬೀಳಲು ಆ ಸುಂದರಿಯ ಚೆಲುವೆಲ್ಲ ಮಾಯವಾಯಿತು! ಅವಳು ಇದ್ದಲಿನಂತಹ ವೈಬಣ್ಣವನ್ನು ತಳೆದು ರುಸ್ತುಮನ ಮುಂದೆ ನಿಂತಳು.

ಈ ರೂಪ ಪರಿವರ್ತನೆಯನ್ನು ಕಾಣಲು ರುಸ್ತುಂ ಅವಳೊಬ್ಬ ಮಾಯಾವಿ ಸ್ತ್ರೀಯಾಗಿರುವಳೆಂದು ಗ್ರಹಿಸಿ ಅವಳ ಮೇಲೆ ಪಾಶವನ್ನು ಎಸೆದು ಅವಳನ್ನು ಬಂಧಿಸಿ, "ನಿನ್ನ ನಿಜವಾದ ರೂಪ ತಾಳು. ಮತ್ತು ನಿನ್ನ ಹೆಸರು ಹೇಳು." ಎಂದು ಗದರಿಸಿದನು. ಕೂಡಲೇ ಆ ಮಾಯಾವಿನಿ ವಿಕಾರ ರೂಪದ ಮುದುಕಿಯಾದಳು. ರುಸ್ತುಂ ಖಡ್ಗದಿಂದ ಅವಳ ದೇಹವನ್ನು ಸೀಳಿಬಿಟ್ಟನು.

ಮರುದಿನ ರುಸ್ತುಂ ಕತ್ತಲೆಯ ನಾಡನ್ನು ಸೇರಿದನು. ಅಲ್ಲಿ ಸೂರ್ಯ ಪ್ರಕಾಶವಿಲ್ಲ; ಚಂದ್ರನ ಬೆಳಕಿಲ್ಲ; ತಾರೆಗಳ ಹೊಳಪಿಲ್ಲ. ತನಗೆ ಇಷ್ಟ ಬಂದ ವೇಗದಲ್ಲಿ, ಸೂಕ್ತವೆನಿಸಿದ ಮಾರ್ಗದಲ್ಲಿ ಪ್ರಯಾಣವನ್ನು ಮುಂದುವರಿಸಲು ಅವನು ರಕ್ಷನಿಗೆ ಸ್ವಾತಂತ್ರ್ಯ ಕೊಟ್ಟನು. ಸ್ವಾಮಿನಿಷ್ಠೆಯುಳ್ಳ ಆ ಜೀವಿ ಎಂದೂ ತಪ್ಪು ಹಾದಿಯನ್ನು ಹಿಡಿಯದೆಂಬ ವಿಶ್ವಾಸ ರುಸ್ತುಮನಿಗಿದ್ದಿತು.

## ಏಳು

ರುಸ್ತುಂ ರಕ್ಷನ ಮೇಲೆ ಸವಾರಿ ಮಾಡುತ್ತ ಯಾವ ಅಪಾಯವೂ ಇಲ್ಲದೆ, ಸೊಬಗಿನ ಆಗರವೆನಿಸಿದ ಒಂದು ನಾಡನ್ನು ತಲಪಿದನು. ಅಲ್ಲಿಯ ನೋಟ ಅವನ ಮನದ ಬೇಸರಿಕೆಯನ್ನು ನೀಗಿತು; ಅವನ ಹೃದಯದಲ್ಲಿ ಹೊಸ ಉತ್ಸಾಹವನ್ನು ಕುದುರಿಸಿತು. ಫಲಭರಿತ ತರು ಶಾಖೆಗಳು ಗಾಳಿಯಲ್ಲಿ ಅಲುಗುವುದನ್ನು ಕಾಣುವಾಗ, ಅವು ತೋಳು ಚಾಚಿ ರುಸ್ತುಮನನ್ನು ಆದರದಿಂದ ಕರೆಯುತ್ತಿರುವಂತೆ ಭಾಸವಾಗುತ್ತಿದ್ದಿತು. ಹೊಲಗಳಲ್ಲಿ ಧಾನ್ಯಗಳ ಮಾಗಿದ ತೆನೆಗಳನ್ನು ನೇಸರ ಕಿರಣಗಳು ಮುತ್ತಿಡುತ್ತಿದ್ದುವು.

ಆ ಬಂಗಾರದ ಸೊಬಗನ್ನು ನೋಡಿಯೇ ತೀರಬೇಕು. ಮೆಲುಗಾಳಿ ರುಸ್ತು ಮನ ಮೈಕೈಗಳನ್ನು ಸ್ಪರ್ಶಿಸಿ ಆಯಾಸವನ್ನು ಕಳೆಯತೊಡಗಿತು. ಸಂಜೆ ಯಾಗದಿದ್ದರೂ ಈ ಚೆಲುವಿನ ಆಗರದಲ್ಲಿ ಅಂದಿನ ದಿನವನ್ನು ಕಳೆಯುವು ದೆಂದು ರುಸ್ತುಂ ನಿಶ್ಚಯಿಸಿದನು. ಅವನು ಕುದುರೆಯ ಮೇಲಿಂದಿಳಿದು ಜೀನು ಲಗಾಮುಗಳನ್ನು ಕಳಚಿಹಾಕಿ, ಅದನ್ನು ಮೇಯಲು ಬಿಟ್ಟನು. ರಕ್ಷ ಬೆಳೆದ ಗೋಧಿಯ ಹೊಲದಲ್ಲಿ ಅಲೆಯತೊಡಗಿತು. ರುಸ್ತುಂ ತನ್ನ ಗುರಾಣಿಯನ್ನೇ ತಲೆದಿಂಬು ಮಾಡಿಕೊಂಡು ಒಂದು ಮರದ ತಣ್ಣೆಳಲಿನಲ್ಲಿ ಮಲಗಿ ವಿಶ್ರಮಿಸಿದನು. ಅವನಿಗೆ ಅಲ್ಲೇ ನಿದ್ದೆ ಹತ್ತಿತು.

ಹೊಲದಲ್ಲಿ ಬೆಳೆದ ಹೊಂಬಣ್ಣದ ಗೋಧಿಯನ್ನು ರಕ್ಷ ಸವಿಯ ತೊಡ ಗಿತು. ಈ ಹೊಲಗಳ ಪಹರೆಯವನು ಕುದುರೆಯೊಂದು ಹೊಲದೊಳಗೆ ನುಗ್ಗಿ ಧಾನ್ಯಗಳನ್ನು ನಾಶಮಾಡುತ್ತಿರುವುದನ್ನು ಕಂಡು ಕೋಪಗೊಂಡನು. ಅವನು ಕುದುರೆಯ ಮಾಲಿಕ ರುಸ್ತುಂ ಮರದ ನೆರಳಲ್ಲಿ ನಿದ್ರಿಸುವುದನ್ನು ನೋಡಿ, ತನ್ನ ಕೈಯ ದೊಣ್ಣೆಯಿಂದ ರುಸ್ತುಮನಿಗೆ ಒಂದು ಏಟು ಹೊಡೆ ದನು. ತನ್ನ ಈ ಧಾಷ್ಟ್ಯ ಎಂತಹ ಅಪಾಯವನ್ನು ಒದಗಿಸುವುದು ಎಂಬುದು ಆ ಪಾಮರನಿಗೆ ತಿಳಿಯುವುದಾದರೂ ಹೇಗೆ? ಈ ಪಹರೆಯವನ ಏಟು ವೀರನನ್ನು ನಿದ್ರೆಯಿಂದ ಎಚ್ಚರಿಸಿತು. ಆಗ ಪಹರೆಗಾರ, "ಎಲಾ ನೀಚ! ನಿನ್ನ ಹಾಳು ಕುದರೆ ಹೊಲವನ್ನೆಲ್ಲಾ ತುಳಿದು ಹಾಳುಮಾಡಲೇಕೆ ಬಿಟ್ಟೆ?" ಎಂದು ರುಸ್ತುಮನನ್ನು ಗದರಿಸಿದನು.

ಈ ಮೊದಲು ರುಸ್ತುಮನ ಮೇಲೆ ಕೈಯಾಡಿಸಿದವರು ಯಾರೂ ಇರ ಲಿಲ್ಲ. ರುಸ್ತುಂ ಮಲಗಿದಲ್ಲಿಂದ ಎದ್ದು ಪಹರೆಯವನ ಕಿವಿಗಳೆರಡನ್ನೂ ಹಿಡಿದು ಮೇಲೆತ್ತಿ, ಅವನನ್ನು ಹತ್ತೆಂಟು ಸಲ ತೂಗಾಡಿಸಿಬಿಟ್ಟನು. ತೂಗಾಟದ ರಭಸಕ್ಕೆ ಅವನ ಕಿವಿಗಳು ಕಿತ್ತುಹೋದುವು. ಆ ಬಡಪಾಯಿ ಹತ್ತೆಂಟು ಮಾರು ದೂರದಲ್ಲಿ ಉದ್ದಿನ ಮೂಟೆಯಂತೆ ನೆಲದ ಮೇಲೆ ಬಿದ್ದು ಹೊರಳಾಡಿದನು. ಆ ಮೇಲೆ ರುಸ್ತುಂ ಏನೂ ಅರಿಯದವನಂತೆ ಮರದಡಿಯಲ್ಲಿ ಮಲಗಿ ನಿದ್ರಿಸತೊಡಗಿದನು.

ರುಸ್ತುಮನಿಂದ ನೋವು ತಿಂದ ಆ ಪಹರೆಯವನು ಕಿವಿಗಳಿಂದ ನೆತ್ತರು ಸುರಿಸುತ್ತ, ರೋದಿಸುತ್ತ ತನ್ನ ಯಜಮಾನನ ಬಳಿಗೆ ಓಡಿದನು. ಅವನ ಯಜಮಾನ ಒಬ್ಬ ಪಾಳೆಯಗಾರ. ಅವನು ಅಂದು ತನ್ನ ಗೆಳೆಯ

ರನ್ನೆಲ್ಲ ಔತಣಕ್ಕೆ ಕರೆದಿದ್ದನು. ಔತಣವಾದ ಮೇಲೆ ಬೇಟೆಗೆ ಹೋಗುವ ವ್ಯವಸ್ಥೆ ಮಾಡಿದ್ದನು. ಅವರೆಲ್ಲರೂ ಔತಣದೂಟವನ್ನು ಮುಗಿಸಿ ಬೇಟೆಗೆ ಹೊರಡಲು ಅಣಿಯಾಗುತ್ತಿದ್ದಾಗ, ಕಿವಿಗಳನ್ನು ಕಳಕೊಂಡ ಕಾವಲುಗಾರ ನೆತ್ತರಿನಿಂದ ನೆನೆದ ಮೈಯೊಡನೆ ಅವರ ಎದುರಿಗೆ ಹೋದನು. "ರಾಕ್ಷಸ ನಷ್ಟು ಶಕ್ತಿ ಶಾಲಿಯಾದ ಒಬ್ಬ ದುಷ್ಟ ನಮ್ಮ ನಾಡಿಗೆ ಬಂದಿದ್ದಾನೆ. ಹುಲಿದೊವಲೇ ಅವನ ತೊಡಿಗೆಯಾಗಿದೆ. ಉಕ್ಕಿನ ಶಿರಸ್ತ್ರಾಣ ಅವನ ತಲೆಯ ಮೇಲಿದೆ. ಅವನಾದರೋ ನೋಡಲು ಸಿಂಹದಷ್ಟೇ ಭಯಂಕರ ನಾಗಿದ್ದಾನೆ. ಹೊಲವನ್ನು ಹಾಳುಮಾಡುತ್ತಿದ್ದ ಅವನ ಕುದುರೆಯನ್ನು ಓಡಿಸುತ್ತಿದ್ದಾಗ, ಆ ದುಷ್ಟ ಮಲಗಿದಲ್ಲಿಂದ ಎದ್ದು ಬಂದು ನನ್ನ ಕಿವಿಗಳೆರ ಡನ್ನೂ ಕಿತ್ತು ಹಾಕಿದ. ಅನಂತರ ಏನೂ ವಿಶೇಷ ಸಂಭವಿಸದಿದ್ದಂತೆ ತನ್ನ ಮೊದಲ ಸ್ಥಾನಕ್ಕೆ ಹೋಗಿ ಮಲಗಿ ನಿದ್ರಿಸಿದ." ಎಂದು ಅಳುತ್ತಾ ಪಾಳೆ ಯಗಾರನಿಗೆ ದೂರು ಕೊಟ್ಟನು.

ಆ ಪಾಳೆಯಗಾರನ ಹೆಸರು ಅಲ್ಹಾದನೆಂದು. ಕಾವಲುಗಾರ ತಂದ ವಾರ್ತೆ ಅವನ ಬೇಟೆಯ ಹಂಚಿಕೆಗೆ ವಿಘ್ನವನ್ನೊಡ್ಡಿತು ಅವನು ಸಂಗಡಿಗ ರಿಗೆ, "ಈ ಸೇವಕನ ಕಿವಿಕಿತ್ತ ದುಷ್ಟನಿಗೆ ತಕ್ಕ ಶಾಸ್ತಿಮಾಡಿ ಅನಂತರ ಬೇಟೆಗೆ ಹೋಗೋಣ" ಎಂದು ಹೇಳಿದನು. ಅಲ್ಹಾದನ ಸಲಹೆಯನ್ನು ಅವರೆಲ್ಲರೂ ಒಪ್ಪಿದರು. ಅವರೆಲ್ಲರೂ ಕೈಗಳಲ್ಲಿ ಕೈದುಗಳನ್ನು ತಳೆದು ಕುದುರೆಗಳನ್ನೇರಿ ರುಸ್ತುಂ ತಂಗಿದ್ದ ಹೊಲದೆಡೆಗೆ ಬಂದರು. ಅವರು ಬರುವ ಹೊತ್ತಿಗೆ ಎಚ್ಚರಗೊಂಡಿದ್ದ ರುಸ್ತುಂ ಅವರನ್ನು ದೂರದಿಂದಲೇ ನೋಡಿದನು. ಮಲಗಿದಲ್ಲಿಂದ ಎದ್ದು ರಕ್ಷನ ಮೇಲೇರಿ ಕಾಳಗಕ್ಕೆ ಅಣಿ ಯಾದನು.

"ನಿನ್ನ ಹೆಸರೇನು? ಹೀನ ಕುಲಜಾತರೊಡನೆ ಹೋರಾಡಿ ನನ್ನ ಆಯುಧಗಳನ್ನು ಮಲಿನ ಪಡಿಸಲಾರೆ? ನೀನು ನನ್ನ ಹೊಲಗಳಿಗೇಕೆ ಬಂದೆ? ಕುದುರೆಯನ್ನು ಬಿಟ್ಟು ಧಾನ್ಯಗಳನ್ನೇಕೆ ನಾಶಪಡಿಸಿದೆ? ನನ್ನ ಸೇವಕನ ಕಿವಿಗಳನ್ನೇಕೆ ಕಿತ್ತು ಹಾಕಿದೆ?" ಎಂದು ಅಲ್ಹಾದನು ಗರ್ಜಿಸಿದನು. ಅದಕ್ಕೆ "ನನ್ನ ಹೆಸರನ್ನು ಹೇಳಿದುದೇ ಆದರೆ ಭಯದಿಂದ ನಿನ್ನ ಎದೆಯ ಬಡಿತ ನಿಲ್ಲುವುದು." ಎಂದು ರುಸ್ತುಂ ಮಾರ್ನುಡಿಯಿತ್ತನು.

ರುಸ್ತುಮನ ಶಕ್ತಿಯನ್ನು ಅರಿಯದ ಅಲ್ಹಾದನು ಅವನನ್ನು ಸೆರೆಹಿಡಿ

ಯಲು ತನ್ನ ಸಂಗಡಿಗರಿಗೆ ಆಜ್ಞಾಪಿಸಿದನು ಆಗಲೇ ರುಸ್ತುಂ ಪಾಶ ವನ್ನು ಕುದುರೆಯ ಜೀನಿಗೆ ಸಿಕ್ಕಿಸಿ ಒರೆಯಿಂದ ಖಡ್ಗವನ್ನು ತೆಗೆದು ಜಳಪಿಸ ತೊಡಗಿದನು. ರುಸ್ತುಮನ ಖಡ್ಗ ಪ್ರಹಾರಗಳಿಗೆ ಹಗೆಗಳು ಒಬ್ಬೊಬ್ಬ ರಾಗಿ ಆಹುತಿಯಾದರು. ದೊಡ್ಡ ಕಾಳಗವಾಯಿತು. ಅವರೆಷ್ಟು ಭೀಷಣ ವಾಗಿ ಕಾದಿದರೂ, ಹದ್ದುಗಳು ಪಾರಿವಾಳಗಳ ಹಿಂಡನ್ನು ಕೊಂದು ಹರಡು ವಂತೆ ರುಸ್ತುಂ ಅವರೆಲ್ಲರನ್ನು ತರಿದು ಆ ಹೊಲದಲ್ಲಿ ಉರುಳಿಸಿಬಿಟ್ಟನು.

ಕೆಲವು ತಾಸುಗಳ ತನಕ ಕದನ ಮುಂದುವರಿಯಿತು. ಕೊನೆಗೆ ಗಾಯವಾಗದೆ ಉಳಿದವನು ಅಲ್ಲಾಗನೊಬ್ಬನೆ. ರುಸ್ತುಂ ಅವನನ್ನು ಕೊಲ್ಲದೆ, ಓಡಿ ಹೋಗುತ್ತಿದ್ದ ಅವನನ್ನು ಹಿಂಬಾಲಿಸಿ, ಪಾಶವನ್ನು ಎಸೆ ದನು. ಅಲ್ಲಾದ ಪಾಶದ ಉರುಳಿಗೆ ಸಿಕ್ಕಿ ಕುದುರೆಯ ಮೇಲಿಂದ ಕೆಳಗೆ ಬಿದ್ದನು. ರುಸ್ತುಂ ಅವನ ಕೈಕಾಲುಗಳನ್ನು ಹೆಡಮುರಿ ಕಟ್ಟಿ, "ನೀನು ಸುಳ್ಳು ಬೆರಸದೆ ನಿಜವನ್ನೇ ಹೇಳಬೇಕು. ನೀನು ಧವಳಾಸುರನು ವಾಸಿ ಸುವ ಗುಹೆಯನ್ನು ತೋರಿಸಿಕೊಡುವೆಯಾದರೆ ನಿನಗೆ ಮಜಂದ್ರದ ಸಿಂಹಾ ಸನವನ್ನೇ ಪಾರಿತೋಷಕವಾಗಿ ಕೊಡುವೆನು. ನಾನೇ ನಿನ್ನನ್ನು ಸಿಂಹಾಸ ನದ ಮೇಲೆ ಕುಳ್ಳಿರಿಸಿ ರಾಜ್ಯಾಭಿಷೇಕ ಮಾಡುವೆನು ನೀನು ಸುಳ್ಳು ಹೇಳಿ ನನಗೆ ದ್ರೋಹ ಬಗೆದರೆ ನಿನ್ನ ತಲೆಯನ್ನೇ ಬೆಲೆಯಾಗಿ ತೆರಬೇಕಾಗು ವುದು." ಎಂದು ಹೇಳಿ ಹೆದರಿಸಿದನು.

"ದಯವಿಟ್ಟು ನಿನ್ನ ಕೋಪಜ್ವಾಲೆಯನ್ನು ಶಾಂತಗೊಳಿಸು. ನೀನು ಹೇಳಿದಂತೆಯೇ ಆಗಲಿ. ಇರಾನಿನ ಚಕ್ರವರ್ತಿ ಎಲ್ಲಿ ಸೆರೆಯಾಳಾಗಿರುವ ನೆಂಬುದನ್ನು ತೋರಿಸುವೆನು. ಧವಳಾಸುರನು ವಾಸಿಸುವ ಗುಹೆಗಿರುವ ಮಾರ್ಗವನ್ನು ತೋರಿಸುವೆನು. ಆದರೆ ದಾರಿಯಲ್ಲಿ ಅನೇಕ ವಿಪತ್ತುಗಳಿವೆ. ಮೊದಲನೆಯದಾಗಿ ಕಲ್ಲುಬಂಡೆಗಳು ತುಂಬಿದ ಕಾಡೊಂದನು ದಾಟಬೇಕು. ಆ ಮೇಲೆ ಒಂದು ದೊಡ್ಡ ನದಿ ಅಡ್ಡ ಬರುವುದು. ನದಿಯ ದಡದಲ್ಲಿ ಮಜಂದ್ರಕ್ಕೆ ಹೋಗಲಿರುವ ಮಾರ್ಗವನ್ನು ಕಾಯಲು ಅಸಂಖ್ಯಾತ ರಕ್ಕ ಸರು ನಿಂತಿರುವರು. ಅವರನ್ನು ದಾಟಿ ಮುಂದೆ ಹೋದರೆ ಎರಡು ಉನ್ನತ ಶೈಲಗಳು ತೋರುವುವು. ಆ ಪರ್ವತಗಳಲ್ಲಿ ಇನ್ನೂರು ಗುಹೆಗಳಿವೆ. ಆ ಗುಹೆ ಗಳೊಂದರಲ್ಲಿ ಆ ರಕ್ಕಸನು ವಾಸಿಸುತ್ತಿರುವನು. ನಾಯಕನ ವಸತಿಯನ್ನು ಹಗೆಗಳಿಂದ ಸಂರಕ್ಷಿಸಲು ಹನ್ನೆರಡು ಸಾವಿರ ಮಂದಿ ರಾಕ್ಷಸರು ಆಯುಧ

ಪಾಣಿಗಳಾಗಿ ಆ ಪರ್ವತವನ್ನು ಕಾವಲುಮಾಡುತ್ತಿರುವರು" ಎಂದು ಹೇಳಿ ಅಲ್ಲಿಂದ ಮುಂದುವರಿಸಿದನು:—

"ಈ ರಕ್ಕಸರನ್ನು ಎದುರಿಸಬೇಕೆಂಬ ನಿನ್ನ ದುಡುಕನ್ನು ಕಂಡು ನನಗೆ ಅಚ್ಚರಿಯಾಗುತ್ತಿದೆ. ಆ ಧವಳಾಸುರನು ಬಹು ಭೀಷಣನಾದ ರಾಕ್ಷಸನೇ ಸರಿ. ಈ ದಿನ ನಿನ್ನ ತೋಳ್ಬಲ್ಮೆ, ನಿನ್ನ ಖಡ್ಗದ ಹರಿತ ಮತ್ತು ನಿನ್ನ ಪಾಶ ಪ್ರಯೋಗದ ಚಮತ್ಕಾರ ಇವುಗಳನ್ನು ನೋಡಿದೆನು. ಆದರೆ ನಿನ್ನ ಈ ಅಳವು ಧವಳಾಸುರನ ಶಕ್ತಿ ಸಾಮರ್ಥ್ಯಗಳಿಗೆ ಸಾಟಿಯಾಗಬಲ್ಲುದೇ? ತಮ್ಮ ಪಳದಲ್ಲಿ ಒಬ್ಬನೇ ಒಬ್ಬ ಭೀರುವಿಲ್ಲದ ಆ ದಾನವ ಸಮೂಹವನ್ನೂ ಅವರ ನಾಯಕನಾದ ಧವಳಾಸುರನನ್ನೂ ನೀನು ಏಕಾಂಗಿಯಾಗಿ ಸಂಹರಿಸುವುದು ಅಸಾಧ್ಯವಾದ ಕಾರ್ಯವೇ ಸರಿ. ಯುದ್ಧಮಾಡಲು ಅವರಲ್ಲಿ ಇನ್ನೂರು ಮಹಾ ಗಜಗಳಿವೆ. ನೀನು ರಕ್ತಮಾಂಸಗಳಿಂದ ನಿರ್ಮಿತನಾದ ಮಾನವನು. ನಿನ್ನ ದೇಹ ಉಕ್ಕಿನಿಂದ ನಿರ್ಮಿತವಾದುದಾದರೂ ಆ ರಾಕ್ಷಸರನ್ನು ಗೆಲ್ಲುವುದು ಕನಸಿನ ಮಾತೇ ಸರಿ." ಎಂದು ಮಾತು ಮುಗಿಸಿದನು.

"ನನಗೆ ಮಜಂದ್ರಕ್ಕಿರುವ ಹಾದಿಯನ್ನು ನೀನು ತೋರಿಸಿದರೆ ಸಾಕು ರಕ್ತ ಮಾಂಸಗಳಿಂದ ನಿರ್ಮಿತನಾದ ಮಾನವನು ಏನನ್ನು ಸಾಧಿಸಬಲ್ಲ ನೆಂಬುದನ್ನು ನಿನಗೆ ನಾನು ತೋರಿಸುವೆ. ಮೊದಲು ಇರಾನಿನ ರಾಜನು ಸೆರೆಯಲ್ಲಿರುವ ಎಡೆಗೆ ನನ್ನನ್ನು ಕರೆದುಕೊಂಡು ಹೋಗು" ಎಂದು ನಸು ನಗುತ್ತ ರುಸ್ತುಮನು ನುಡಿದು ಅಲ್ಲಾದನನ್ನು ಪಾಶದಿಂದ ಬಿಡಿಸಿದನು.

ರುಸ್ತುಮನ ಮಾತಿಗೆ ಅಲ್ಲಾದನು ಪ್ರತಿನುಡಿಯದೆ, ತನ್ನನ್ನೇ ಹಿಂಬಾಲಿಸೆಂದು ಹೇಳಿ, ಕುದುರೆಯನ್ನೇರಿ ಮುಂದೆ ಸಾಗಿದನು. ರುಸ್ತುಂ ಅವನನ್ನು ಹಿಂಬಾಲಿಸಿದನು. ಹಗಲು-ಇರುಳುಗಳ ಅಂತರವನ್ನು ಗಮನಿಸದೆ ಅವರು ಪ್ರಯಾಣವನ್ನು ಮುಂದುವರಿಸದರು. ಕೊನೆಗೆ ಅವರು ಕಾಯಕೋಸ ಚಕ್ರವರ್ತಿ ಬಂಧಿತನಾಗಿದ್ದ ಅಸ್ಪರಸ್ಸು ಪರ್ವತದ ತಪ್ಪಲನ್ನೈದಿದರು. ಆಗಲೇ ಇರುಳಾಗಿತ್ತು. ಹಟಾತ್ತಾಗಿ ಬಾನನ್ನು ಭೇದಿಸುವ ಭೀಷಣ ಧ್ವನಿಯೊಂದು ಅವರಿಗೆ ಕೇಳಿಸಿತು. ಅವರ ಮುಂದೆ ದೊಡ್ಡದೊಂದು ಕಿಚ್ಚು ಉರಿಯುತ್ತಿರುವುದು ಕಾಣಿಸಿತು. "ನಮ್ಮ ಮುಂದಿರುವುದೇ ಮಜಂದ್ರ ರಾಜ್ಯವಾಗಿದೆ. ಈ ಇರುಳು ರಕ್ಕಸರೆಲ್ಲಾ ಸಭೆಸೇರುವರೆಂದು ತೋರುತ್ತದೆ. ನಿನ್ನ ಚಕ್ರವರ್ತಿಯನ್ನು ಬಂಧಿಸಿದ ಅರ್ಜಾಂಗನೂ

ಈ ಕೂಟದಲ್ಲಿ ಇರಬಹುದು" ಎಂದು ಅಲ್ಹಾದನು ರುಸ್ತುಮನಿಗೆ ಸೂಚಿಸಿದನು.

ಅಂದಿನ ಇರುಳು ಅಲ್ಲೇ ಪರ್ವತದ ತಪ್ಪಲಲ್ಲೇ ಅವರು ಬೀಡು ಬಿಟ್ಟರು. ತಾನು ಮಲಗುವ ಮುನ್ನ ರುಸ್ತುಂ, ಅಲ್ಹಾದನು ತಪ್ಪಿಸಿಕೊಂಡು ಓಡಿಹೋಗದಂತೆ ಅವನನ್ನು ಒಂದು ಮರಕ್ಕೆ ಬಿಗಿದು ಅನಂತರ ಮಲಗಿ ನಿದ್ದೆಹೋದನು.

ಮರುದಿನ ಬೆಳಕು ಹರಿದೊಡನೆಯೇ ರುಸ್ತುಂ ತನ್ನ ಅಜ್ಜ ಸಾನನ ಗದೆಯನ್ನು ತೆಗೆದು ಕುದುರೆಯ ಜೀನಿನ ಮೇಲೆ ಅಣಿಮಾಡಿ ಇಟ್ಟು ಕೊಂಡನು. ಮಸ್ತಕದ ಮೇಲೆ ಉಕ್ಕಿನ ಶಿರಸ್ತ್ರಾಣವನ್ನು ಧರಿಸಿದನು ಅವನು ರಕ್ಷನ ಬೆನ್ನಮೇಲೆರಿ ರಾಕ್ಷಸರ ಪಾಳೆಯದತ್ತ ಓಡಿಸಿದನು ಸ್ವಲ್ಪ ದೂರ ತೆರಳುವನಿತರಲ್ಲಿ ರಾಕ್ಷಸ ಪಾಳೆಯವು ದೃಗ್ಗೋಚರವಾಯಿತು ಪರ್ವತಗಳೇ ಬಿರಿದು ಜರಿವಂತಹ ಭೀಷಣ ವೀರ ಗರ್ಜನೆಗಳು ರುಸ್ತುಮನ ಕೊರಳಿಂದ ಹೊರಹೊಮ್ಮಿದುವು. ರಾಕ್ಷಸ ಸೇನೆಯ ನಾಯಕನಾದ ಅರ್ಜಾಂಗನು ತಮ್ಮ ನಾಡಗಡಿಯನ್ನು ದಾಟಿ ಹೆಜ್ಜೆಯಿರಿಸಲು ಧೈರ್ಯ ಗೊಂಡ ಈ ಮಾನವನು ಯಾರೆಂಬ ವಿಸ್ಮಯದಿಂದ ಕುಳಿತಲ್ಲಿಂದ ನೆಗೆದು ನಿಂತನು. ಅವನು ಕಡು ಮುನಿಸಿನಿಂದ ಆಯುಧಪಾಣಿಯಾಗಿ ಗೂಡಾರ ದಿಂದ ಹೊರಬಂದನು. ರುಸ್ತುಮನು ಧೈರ್ಯದಿಂದ ಅವನಿದ್ದೆಡೆಗೆ ರಕ್ಷ ನನ್ನು ಓಡಿಸಿದನು. ಇನ್ನೊಂದು ಕ್ಷಣದಲ್ಲಿಯೇ ವೀರನ ಯಮಪಾಶ ರಕ್ಕ ಸನ ಕೊರಳೆಡೆಯನ್ನು ಸಮೀಪಿಸಿತು. ರುಸ್ತುಂ ಪಾಶವನ್ನು ಬೀಸಿದಾಗ ಅದರ ಉರುಳಲ್ಲಿ ಅರ್ಜಾಂಗನ ಕೊರಳು ಸಿಕ್ಕಿತು. ರುಸ್ತುಂ ತಡಮಾಡದೆ ತನ್ನ ನಿಡುತೋಳುಗಳಿಂದ ರಾಕ್ಷಸನ ಕೊರಳನ್ನು ಮುರಿದು ಅವನ ಶಿರ ವನ್ನು ದೇಹದಿಂದ ಬೇರ್ಪಡಿಸಿದನು. ಕೈಯಲ್ಲಿ ಹಿಡಿದ ರುಂಡದಿಂದ ರುಧಿರ ಧಾರೆ ಬಸಿಯತೊಡಗಿತು.

ರುಸ್ತುಂ ಅರ್ಜಾಂಗರ ಯುದ್ಧದ ದನಿಗೇಳಿ ಗೂಡಾರಗಳೊಳಗಿದ್ದ ರಕ್ಕಸರೆಲ್ಲರೂ ಆಗಲೇ ಹೊರಬಂದಿದ್ದರು. ಅವರು ಕುದುರೆಗಳನ್ನೇರಿ ಹಗೆ ಯನ್ನು ಎದುರಿಸಲು ಅಣಿಯಾದರು. ರುಸ್ತುಂ ತಾನು ಕೈಯಲ್ಲಿ ಹಿಡಿದಿದ್ದ ರಾಕ್ಷಸ ರುಂಡವನ್ನು ಈ ದಾನವರ ಗುಂಪಿನ ಮಧ್ಯಕ್ಕೆ ಎಸೆದನು. ನೆತ್ತರು ಕಾರುತ್ತಾ ನೆಲದ ಮೇಲೆ ಬಿದ್ದ ತಮ್ಮ ನಾಯಕನ ರುಂಡವನ್ನು ನೋಡಿ

ಅವರು ಒಮ್ಮೆಗೆ ನಡುಗಿದರು. ಹಗೆಯ ಹೆಗಲ ಮೇಲೆ ಬೆಳಗುತ್ತಿದ್ದ ಸಾಮನ ಮಹಾ ಗದೆಯನ್ನು ಕಂಡು ಅವರು ಬೆದರಿದರು. ಅದು ಅವರಿಗೆ ಪರಿಚಯವಾದುದು. ಹಿಂದೆ ಎಷ್ಟೋ ಸಲ ಸಾಮನು ಈ ಗದೆಯಿಂದ ಅವರನ್ನು ಅಪ್ಪಳಿಸಿದ್ದನು. ನಾಯಕನ ಅಳಿವು ಅವರ ಯುದ್ಧೋತ್ಸಾಹ ವನ್ನು ಬತ್ತಿಸಿತು. ಅವರು ತಲ್ಲಣಗೊಂಡರು. ತಮ್ಮ ಜೀವವುಳಿದರೆ ಸಾಕೆಂದು ಅವರು ಸಿಕ್ಕಿದೆಡೆಗಳಿಗೆ ಓಡತೊಡಗಿದರು. ಓಡುವ ಆತುರದಲ್ಲಿ ತಂದೆ ಮಗನನ್ನೂ, ಅಣ್ಣ ತಮ್ಮನನ್ನೂ ತುಳಿದು ನುಜ್ಜುಗುಜ್ಜು ಮಾಡಿ ದರು. ರುಸ್ತುಂ ಪಲಾಯನ ಮಾಡುತ್ತಿದ್ದ ಹಗೆಗಳನ್ನು ಹಿಂಬಾಲಿಸಿ ತನ್ನ ಭೀಷಣ ಕೃಪಾಣವನ್ನು ಬೀಸಿ ಅವರನ್ನು ತರಿದೊಟ್ಟತೊಡಗಿದನು. ಅವನ ಕರವಾಳ ರಕ್ಕಸರ ನೆತ್ತರನ್ನು ಹೀರಿ ತನ್ನ ನೀರಡಿಕೆಯನ್ನು ತಣಿಸಿಕೊಂ ಡಿತು. ವೀರನು ತರಿದೊಟ್ಟಿದ ರಕ್ಕಸರ ಅಟ್ಟೆಗಳು ಬೆಟ್ಟಗಳಾದುವು.

ಹೀಗೆ ರಕ್ಕಸರನ್ನು ಸಂಹಾರಮಾಡಿದ ಅನಂತರ ರುಸ್ತುಂ ತಾನು ನಿದ್ರಿಸಿದೆಡೆಗೆ ಬಂದನು. ಮರಕ್ಕೆ ಬಂಧಿಸಿದ್ದ ಅಲ್ಲಾದನ ಕಟ್ಟುಗಳನ್ನು ಬಿಚ್ಚಿ, “ನನಗೆ ಮಜಂದ್ರರಾಜನ ಸೆರೆಮನೆಗಿರುವ ದಾರಿಯನ್ನು ತೋರಿಸು.” ಎಂದು ಅಲ್ಲಾದನಿಗೆ ಆಜ್ಞಾಪಿಸಿದನು. ಅಲ್ಲಾದನು ಮಾರ್ಗವನ್ನು ತೋರಿ ಸುತ್ತಾ ಮುಂದೆ ನಡೆದನು. ರುಸ್ತುಂ ಅವನನ್ನು ಹಿಂಬಾಲಿಸಿದನು. ಆವರು ಮಜಂದ್ರ ನಗರವನ್ನು ಪ್ರವೇಶಿಸಿದರು. ನಗರ ಪ್ರವೇಶ ಮಾಡುತ್ತಿದ್ದಾಗ ರಕ್ಷ ಮೇಘ ಗರ್ಜನೆಯಂತೆ ಭೀಷಣವಾಗಿ ಕೆನೆಯಿತು. ಸೆರೆಮನೆಯಲ್ಲಿ ನರಳುತ್ತಿದ್ದ ಕಾಯಕೋಸ ಚಕ್ರವರ್ತಿಗೆ ರಕ್ಷನ ಹೇಷಾರವ ಕೇಳಿಸಿತು. ತನ್ನ ರಕ್ಷಣೆಗೆ ನಚ್ಚಿನ ಕುದುರೆಯನ್ನೇರಿ ರುಸ್ತುಂ ಬಂದಿದ್ದಾನೆಂಬುದು ಚಕ್ರವರ್ತಿಗೆ ತಿಳಿಯಿತು. ಅವನು ಒಡನಿರುವ ಸೆರೆಯಾಳುಗಳಿಗೆ “ನಾನೀಗ ರುಸ್ತುಮನ ಅಮೋಘಾಶ್ವದ ಹೇಷಾರವನ್ನು ಕೇಳುತ್ತಿದ್ದೇನೆ. ಇಂದಿಗೆ ನಮ್ಮ ಸಂಕಟಗಳೆಲ್ಲ ಪರಿಸಮಾಪ್ತಿಯಾದುವು. ಅಂದು ಕಾಯಕೋಬಾ ದನು ರಣದಲ್ಲಿ ತಾರ್ತರರನ್ನು ಗೆದ್ದಾಗ ರುಸ್ತುಮನ ರಕ್ಷ ಇದೇ ಪರಿಯಲ್ಲಿ ಹೇಷಾರವ ಕೊಟ್ಟಿತ್ತು” ಎಂದು ಹೇಳಿ ಸಂತಸಗೊಳಿಸಿದನು.

ರುಸ್ತುಂ ಸೆರೆಮನೆಯನ್ನು ಸಮೀಪಿಸಿ, ಗದೆಯಿಂದ ಕಾರಾಗೃಹದ ಕದಗಳನ್ನು ಒಡೆದು ಒಳಗೆ ಪ್ರವೇಶಿಸಿ, ಕಣ್ಣು ಕುರುಡಾದ ಚಕ್ರವರ್ತಿ ಯನ್ನು ಸೆರೆಯಿಂದ ಬಿಡಿಸಿದನು. ಚಕ್ರವರ್ತಿ ಎರಡು ತೋಳುಗಳನ್ನು

ಮುಂದೆ ಚಾಚಿ ರುಸ್ತುಮನನ್ನು ಆದರದಿಂದ ಆಲಿಂಗಿಸಿದನು ಸೆರೆಯಲ್ಲಿದ್ದ ಇರಾನೀ ಸೇನಾನಾಯಕರು ರುಸ್ತುಮನ ಪಾದಗಳಿಗೆ ಮಣಿದು ಸಂತಸ ಗೊಂಡರು. ಅವರು ರಕ್ಷನ ಮೈಯನ್ನು ತಡವಿ ಆನಂದ ಪಡೆದರು. ರುಸ್ತು ಮನ ಸಾಹಸ ಕಾರ್ಯಗಳನ್ನು ಕೇಳಿ ವಿಸ್ಮಯಾಕುಲರಾದರು ಅವರ ಹೃದಯಗಳಲ್ಲಿ ಕೃತಜ್ಞತೆ ತುಳುಕಿತು; ಅವರ ಕಣ್ಣುಗಳಿಂದ ಆನಂದಾಶ್ರುಗಳ ಪ್ರವಾಹ ಹರಿಯಿತು.

ಮತ್ತೆ ಕಾಯಕೋಸನು, "ಅರ್ಜಾಂಗನ ಮರಣವಾರ್ತೆಯನ್ನು ಆಳಿ ದುಳಿದ ರಾಕ್ಷಸರು ಧವಳಾಸುರನಿಗೆ ತಿಳಿಸುವರು. ಅವನು ಅಪಾರ ಸೇನೆಯೊಡನೆ ಬಂದು ಮಜಂದ್ರ ನಗರವನ್ನು ಬಳಸುವನು. ನೀನು ನಮ್ಮನ್ನು ಈ ವಿಪತ್ತಿನಿಂದ ಪಾರುಗೊಳಿಸುವುದು, ಆ ರಾಕ್ಷಸನು ಇಲ್ಲಿಗೆ ಬರುವ ಮುನ್ನವೇ ಆಗಬೇಕು. ಧವಳಾಸುರನ ವಸತಿ ಇಲ್ಲಿಂದ ನೂರು ಹರದಾರಿ ದೂರದಲ್ಲಿ ಇರುವುದು. ಅಲ್ಲಿ ಏಳು ಪರ್ವತಗಳಿವೆ. ಅವುಗ ಗನ್ನು ಒಂದೊಂದಾಗಿ ನೀನು ವಶಪಡಿಸಿಕೊಳ್ಳಬೇಕಾಗುವುದು. ಛತ್ತಿನ ತಲೆಯಂತಿರುವ ನಿನ್ನ ಗಂಡುಗೊಡಲಿಗೂ ಸಾನಸ ಗದೆಗೂ ತುಂಬಾ ಕೆಲಸ ಗಳು ದೊರಕುವುವು. ಮಾಯಾವಿಗಳಾದ ರಾಕ್ಷಸರ ದೃಷ್ಟಿಗೆ ಬೀಳದಂತೆ ನೀನು ರಕ್ಷನನ್ನು ಗೋಪ್ಯವಾಗಿ ಅಡಗಿಸಬೇಕು. ಈ ಪರ್ವತಗಳ ತಪ್ಪ ಲಲ್ಲಿ ಕಾಲ್ನಡೆಯಲ್ಲಿಯೇ ಮುಂದುವರಿದರೆ ನೀನು ಅತ್ಯಂತ ಭಯಂಕರವಾದ ಗುಹೆಯೊಂದನ್ನು ನೋಡುವೆ. ಇದೇ ಧವಳಾಸುರನ ಮತ್ತು ಅವನ ಅಂಗರಕ್ಷಕರ ನಿವಾಸಸ್ಥಾನವಾಗಿದೆ. ಅವನನ್ನು ನೀನು ವಧಿಸಿದರೆ ನಾವೆ ಲ್ಲರೂ ಸುರಕ್ಷಿತರಾಗುವೆವು. ಆ ಧವಳಾಸುರನ ಎದೆಗುಂಡಿಗೆಯ ರಕ್ತ ವನ್ನು ಮೂರು ಮೂರು ಹನಿಗಳಂತೆ ನಮ್ಮೆಲ್ಲರ ಕಣ್ಣುಗಳಿಗೆ ಹಾಕಿದರೆ ನಮ್ಮ ಕುರುಡು ನಿವಾರಣೆಯಾಗುವುದೆಂದು ವೈದ್ಯರು ಹೇಳಿರುವರು. ಆದುದರಿಂದ ನೀನು ಆ ದುಷ್ಟ ರಾಕ್ಷಸನನ್ನು ಸಂಹರಿಸಿ ನಮಗೆಲ್ಲಾ ದೃಷ್ಟಿ ಯನ್ನು ದಯಪಾಲಿಸು. ದೈವವು ನಿನ್ನ ಬೆಂಗಾವಲಿಗಿರುವುದು." ಎಂದು ತನಗೆ ತಿಳಿದಿದ್ದ ವಿಷಯವನ್ನು ರುಸ್ತುಮನಿಗೆ ತಿಳಿಸಿದನು

ರುಸ್ತುಂ ಆಯುಧಧಾರಿಗಳಾಗಿ ಎಚ್ಚರವಿರುವಂತೆ ತನ್ನ ಮಿತ್ರರಿಗೆ ಹೇಳಿ, ಅಲ್ಲಾದನನ್ನು ಕರೆದುಕೊಂಡು ಏಳು ಬೆಟ್ಟಗಳ ನಾಡಿಗೆ ಹೊರಟನು. ಅವನು ಆ ನಾಡನ್ನು ಸಮೀಪಿಸಲು ಗುಹೆಗಳಲ್ಲಿ ಅಸಂಖ್ಯಾತ ರಕ್ಕಸರು

ವಾಸವಿರುವುದನ್ನು ನೋಡಿದನು. "ಈಗ ಭೀಷಣ ಕದನದ ವೇಳೆ ಸಮನಿಸಿ ತಲ್ಲವೆ?" ಎಂದು ಅಲ್ಲಾದನೊಡನೆ ಕೇಳಿದನು.

"ಇಲ್ಲ! ಆ ಸಮಯ ಇನ್ನೂ ಒದಗಿಲ್ಲ. ನೇಸರು ನಡುನೆತ್ತಿಗೇರಿದಾಗ ರಕ್ಕಸರೆಲ್ಲರೂ ನಿದ್ದೆಹೋಗುವರು. ಅದೇ ಅವರನ್ನು ವಧಿಸಲು ಉತ್ತಮ ವೇಳೆಯಾಗಿದೆ." ಎಂದು ಮಾರ್ಗದರ್ಶಕ ಅಲ್ಲಾದನು ಸೂಚನೆಯಿತ್ತನು.

ಅಲ್ಲಾದನ ಸೂಚನೆಯನ್ನು ರುಸ್ತುಂ ಒಪ್ಪಿಕೊಂಡನು. ಅವನೂ ಅಲ್ಲಾದನೂ ರಾಕ್ಷಸರ ದೃಷ್ಟಿಗೆ ಬೀಳದಂತೆ ಒಂದು ಗೂಢ ಸ್ಥಳದಲ್ಲಿ ವಿಶ್ರಮಿಸಿ ದಣಿವಾರಿಸಿಕೊಂಡರು. ನೇಸರು ನಡುಬಾನನ್ನು ಅಡರಲು ರುಸ್ತುಂ ಖಡ್ಗವನ್ನೆತ್ತಿಕೊಂಡು ಗುಹೆಗಳಲ್ಲಿ ನಿದ್ರಿಸುತ್ತಿರುವ ರಕ್ಕಸರ ಮೇಲೆ ಬಿದ್ದು, ಮರದ ಕೊಂಬೆಗಳನ್ನು ತರಿವಂತೆ ಅವರ ಕೈಕಾಲುಗಳನ್ನು ತರಿದನು; ಅವರ ಕೆನ್ನೀರಲ್ಲಿ ಓಕುಳಿಯಾಡಿದನು. ರುಸ್ತುಮನ ವೀರಗರ್ಜನೆ ಮತ್ತು ಅವನೆಸಗಿದ ಸಂಹಾರಕಾರ್ಯ ಉಳಿದ ರಾಕ್ಷಸರನ್ನು ಭಯಕಂಪಿತರನ್ನಾಗಿ ಮಾಡಿತು. ಅವರು ತಮ್ಮ ಪ್ರಾಣಗಳನ್ನು ಉಳಿಸಿಕೊಂಡರೆ ಸಾಕೆಂದು ಆಲೋಚಿಸಿ ರುಸ್ತುಮನನ್ನು ಎದುರಿಸುವ ಗೋಜಿಗೆ ಹೋಗದೆ ಪಲಾಯನ ಗೈದರು.

ರುಸ್ತುಮನ ಕಾರ್ಯ ಅಲ್ಲಿಗೇ ಮುಗಿಯಲಿಲ್ಲ. ಕೊನೆಗೆ ಅವನು ಧವಳಾಸುರನ ನಿವಾಸಸ್ಥಾನವಾದ ಗುಹೆಗೆ ಬಂದನು. ಕತ್ತಲೆ ಕವಿದ ಆ ಗುಹೆಯ ಸ್ಥಳದ ಪರಿಚಯ ಮಾಡಿಕೊಳ್ಳಲೆಂದು ಅದನ್ನೊಮ್ಮೆ ಇಣಿಕಿನೋಡಿದನು. ನೋಡಿದ ಮೇಲೆ, "ಇಂತಹ ಕತ್ತಲೆಯ ಗವಿಯಲ್ಲಿ ಯುದ್ಧ ಕಾರ್ಯವನ್ನು ಕೈಕೊಳ್ಳಲು ಯಾರೂ ಬಯಸರು. ಇದರೊಳಗಿಂದ ಪಾರಾಗಿ ಹೋಗುವುದು ಅಸಾಧ್ಯವೇ ಸರಿ!" ಎಂದು ತನ್ನಲ್ಲಿಯೇ ಚಿಂತಿಸತೊಡಗಿದನು. ಆಗಲೇ ಮುಸುಕು ಬೆಳಕಿನಲ್ಲಿ ನೆಲದ ಮೇಲೆ ಮಲಗಿದ್ದ ಒಂದು ಪರ್ವತಾಕೃತಿಯು ರುಸ್ತುಮನಿಗೆ ಗೋಚರಿಸಿತು. ಆ ಆಕೃತಿಯ ತಲೆಯಲ್ಲೆರಡು ಕೊಂಬುಗಳಿದ್ದುವು ಮೈತುಂಬ ಬೆರಳು ಗಾತ್ರದ ರೋಮಗಳಿದ್ದುವು. ಕಣ್ಣುಗಳು ಕಾದ ಕೆಂಡದಂತೆ ಕೆಂಪಾಗಿದ್ದುವು. ಅವನ ರೋಮಗಳೂ, ಮೈಯೂ ಬೆಳ್ಳಗೆ ಬೆಳಗುತ್ತಿದ್ದುವು. ಈ ಭೀಷಣ ಸತ್ವವೇ ಏಳು ಬೆಟ್ಟಗಳ ನಾಡಿನ ರಾಕ್ಷಸರಿಗೆಲ್ಲ ಪ್ರಭುವಾದ ಧವಳಾಸುರ!

---

## ಎಂಟು

ರುಸ್ತುಂ ಕರದ ಕರವಾಳವನ್ನು ಮೇಲೆತ್ತಿದನಾದರೂ ನಿದ್ರಿಸುವ ರಾಕ್ಷಸನನ್ನು ಕೊಲ್ಲಲು ಅವನ ಮನಸ್ಸು ಒಪ್ಪಲಿಲ್ಲ. ಆದುದರಿಂದ ಅವನು ಸಿಂಹನಾದವನ್ನು ಮಾಡಿ ಅಸುರನನ್ನು ಎಚ್ಚರಿಸಿದನು. ಅಸುರನು ಎಚ್ಚತ್ತಾಗ ರುಸ್ತುಮನ ಆಕೃತಿ ಅವನ ದೃಷ್ಟಿಗೆ ಬಿದ್ದಿತು. ಅವನು ಕೂಡಲೇ ಎದ್ದು ನಿಂತು ಕೋಪದಿಂದ ದೊಡ್ಡದೊಂದು ಬಂಡೆಗಲ್ಲನ್ನು ಮೇಲೆತ್ತಿ, "ವಿವೇಕಿಗಳು ಪ್ರಾಣವನ್ನು ಬಹು ಬೆಲೆಯುಳ್ಳದೆಂದು ಪರಿಗಣಿಸುತ್ತಾರೆ. ನನ್ನ ಗುಹೆಯೊಳಗೆ ನೀನು ಪ್ರವೇಶಿಸಿದುದು ಮಾರಿಯ ದವಡೆಯೊಳಗೆ ತೋಳನ್ನು ತುರುಕಿದಂತೆಯೇ ಸರಿ. ನೀನು ಯಾರೆಂಬುದನ್ನು ಮೊದಲು ತಿಳಿಸು. ನಾನು ಹುಲು ಮಾನವನೊಬ್ಬನನ್ನು ಕೊಂದು ನನ್ನ ಈ ಕೈಗಳನ್ನು ಕಲಂಕಗೊಳಿಸಲಾರೆ." ಎಂದು ರುಸ್ತುಮನನ್ನು ಗದರಿಸಿದನು.

"ನಾನು ಜಾಬೂಲಿನ ಜಾಲನಿಂದ ಕಳುಹಿಸಲ್ಪಟ್ಟಿರುವೆನು. ನನ್ನ ಅಜ್ಜನ ಹೆಸರು ಸಾನನೆಂದು. ನನ್ನನ್ನು ರುಸ್ತುಮನೆಂದು ಕರೆಯುವರು. ಇರಾನಿನ ಚಕ್ರವರ್ತಿಗೆ ಕೇಡೆಸಗಿದ ನಿನಗೆ ಶಾಸ್ತಿಮಾಡಲು ನಾನು ಬಂದಿರುವೆನು." ಎಂದು ರುಸ್ತುಂ ಮಾರುತ್ತರ ಕೊಟ್ಟನು.

ಅಖಿಲ ಪ್ರಪಂಚದಲ್ಲಿ ಧವಳಾಸುರನು ಒಂದೇ ಒಂದು ಹೆಸರನ್ನು ಕೇಳಿದರೆ ಭಯದಿಂದ ನಡುಗುತ್ತಿದ್ದನು. ಅದು ಸಾನನದಾಗಿದ್ದಿತು. ಆ ಹೆಸರನ್ನು ಕೇಳಿದೊಡನೆಯೇ ರಾಕ್ಷಸನು ಕಂಪಿಸಿಹೋದನು. ಅವನು ಹಾವಿನಂತೆ ಬಳುಕಿ ಬಾಗಿದನು. ಆದರೂ ಅವನು ಭಯವನ್ನು ಹತ್ತಿಕ್ಕಿ ತಾನು ಕೈಯಲ್ಲಿ ಎತ್ತಿಹಿಡಿದ ಬಂಡೆಗಲ್ಲನ್ನು ರುಸ್ತುಮನ ಮೇಲೆಸೆದೇ ಬಿಟ್ಟನು. ಈ ಪ್ರಹಾರವನ್ನು ನಿವಾರಿಸಿಕೊಳ್ಳಲೆಂದು ರುಸ್ತುಂ ಎರಡು ಹಜ್ಜೆ ಹಿಂದೆ ಸರಿದನು. ಆಗ ರಕ್ಕಸನು ಭಯಂಕರ ದನಿಯಿಂದ ಒಮ್ಮೆ ಗರ್ಜಿಸಿದನು. ಆ ಭೀಕರ ದನಿಗೇಳಿ ರುಸ್ತುಮನ ಬೆನ್ನೆಲುಬು ಭಯದಿಂದ ಚಳಿತಿತು. ಆದರೆ ಅವನು ಮೈಯನ್ನು ಸೋಂಕಿದ ಭಯವನ್ನು ಹಿಂದಟ್ಟಿ ರಾಕ್ಷಸನ ಮೇಲೆ ಬಿದ್ದು, ತನ್ನ ಕೃಪಾಣದಿಂದ ರಾಕ್ಷಸನ ಕಾಲನ್ನು ಸೀಳಿದನು. ಮತ್ತೆ ರುಸ್ತುಂ ಯುಕ್ತಿಯಿಂದ ಒಂದು ಸುತ್ತು ತಿರುಗಿ ರಾಕ್ಷಸನ ಹೊಡೆತವನ್ನು ತಪ್ಪಿಸಿಕೊಂಡು ಅವನ ಒಂದು ಕಾಲನ್ನು ತುಂಡರಿಸಿದನು. ತನ್ನ ಕಾಲು ಹೋಯಿತೆಂದು ಧವಳಾಸುರನು ಹಿಂಜರಿಯಲಿಲ್ಲ. ಅವನು ಒಂದು ಕಾಲಿನಲ್ಲಿ ಕುಪ್ಪಳಿಸುತ್ತಾ ರುಸ್ತುಮನ

ಮೇಲೆ ಬಿದ್ದನು. ನಿಡುದೋಳುಗಳಿಂದ ರುಸ್ತುಮನನ್ನು ಬಿಗಿಹಿಡಿದನು. ಕೂಡಲೆ ರುಸ್ತುಂ ಖಡ್ಗವನ್ನು ಒರೆಯಲ್ಲಿ ಸೇರಿಸಿ ಮಲ್ಲಗಾಳಗಕ್ಕೆ ಅಣಿಯಾದನು. ಅವನು ರಾಕ್ಷಸನನ್ನು ಹಿಡಿದು ಉರುಡಿ ಬೀಳಿಸಲು ಪ್ರಯತ್ನಿಸಿದನು. ಈರ್ವರೂ ಹೋರಳಾಡಿದರು. ಆ ಹೊರಳಿಕೆಯ ರಭಸಕ್ಕೆ ಪರ್ವತಗಳು ಅದುರಿದುವು. ಅವರು ಮುಷ್ಟಿಗಳನ್ನು ಬಿಗಿಹಿಡಿದು ಪರಸ್ಪರ ಗುದ್ದಾಡಿದರು. ಕಾಲುಗಳಿಂದ ಒದೆದರು; ಉಗುರುಗಳಿಂದ ಮಾಂಸಖಂಡಗಳನ್ನು ಸೀಳಿದರು. ದೇಹಗಳಿಂದ ಬಸಿದ ನೆತ್ತರಿಂದ ನೆಲ ಕೆಂಪಡರಿತು.

"ನಾಳೆಯ ಸೂರ್ಯೋದಯವನ್ನು ನಾನು ನೋಡಬಲ್ಲೆನಾದರೆ ಚಿರಂಜೀವಿಯಾಗಿಯೇ ಬಾಳುವೆನು." ರುಸ್ತುಂ ತನ್ನಲ್ಲಿಯೇ ಹೇಳಿಕೊಂಡನು.

"ಈ ಭೀಮಕಾಯನ ಹಿಡಿತದಿಂದ ನಾನು ಪಾರಾಗಿ ಜೀವದಿಂದುಳಿದರೂ, ನಾನು ಮಜಂದ್ರ್ರದ ರಕ್ಕಸರ ಮಹಾನಾಯಕನಾಗಿ ಬಾಳುವುದು ಇನ್ನು ಮುಂದೆ ನನ್ನಿಂದಾಗದು." ಎಂದು ರಾಕ್ಷಸನು ತನ್ನಲ್ಲಿಯೇ ಆಲೋಚಿಸಿದನು.

ಇಬ್ಬರೂ ಸೋಲರು; ಇಬ್ಬರೂ ಬೀಳರು; ಇಬ್ಬರೂ ಓಡರು. ನಿಮಿಷಗಳು ಉರುಳಿದಂತೆ ಅವರ ರೋಷ ಇಮ್ಮಡಿಸುತ್ತಿದ್ದಿತು; ಛಲ ಹೆಚ್ಚುತ್ತಿದ್ದಿತು; ತೋಳುಗಳ ತ್ರಾಣ ದ್ವಿಗುಣಿತವಾಗುತ್ತಿದ್ದಿತು. ಅವರು ಕಾದುವೆಡೆಯಲ್ಲಿ ಬೆವರು ಮತ್ತು ನೆತ್ತರುಗಳ ಮಡುಗಳು ಕಾಣಿಸತೊಡಗಿದುವು. ರುಸ್ತುಂ ಧವಳಾಸುರರ ಕಾಳಗಕ್ಕೆ ರುಸ್ತುಂ ಧವಳಾಸುರರ ಕಾಳಗವಲ್ಲದೆ ಬೇರಾವ ಹೋಲಿಕೆಗಳೂ ದೊರಕವು.

ಈಗ ರುಸ್ತುಂ ಸರ್ವಶಕ್ತಿಗಳನ್ನು ತೋಳುಗಳಲ್ಲಿ ಕೇಂದ್ರೀಕರಿಸಿ ಆನೆಯ ಸೊಂಡಿಲುಗಳಂತಿರುವ ತನ್ನ ತೋಳುಗಳಿಂದ ರಾಕ್ಷಸನ ಎದೆಯನ್ನು ಸುತ್ತಿದನು. ಪರ್ವತವನ್ನು ಕಿತ್ತು ಮೇಲೆತ್ತುವಂತೆ ಅವನು ರಾಕ್ಷಸನನ್ನು ನೆಲದಿಂದ ಮೇಲೆತ್ತಿ ಇನ್ನೊಂದು ಕ್ಷಣದಲ್ಲಿ ಅವನನ್ನು ನೆಲದ ಮೇಲೆ ಅಪ್ಪಳಿಸಿದನು. ಅಪ್ಪಳಿಸಿದ ರಭಸದಿಂದ ರಾಕ್ಷಸನ ತಲೆಯೊಡೆದು ಮಿದುಳು ಹೊರಚೆಲ್ಲಿತು. ಅವನ ಪ್ರಾಣ ದೇಹವನ್ನು ತೊರೆದು ಬೇರೆ ಗೂಡನ್ನು ಅರಸಲೆಂದು ವಾಯುಮಂಡಲದಲ್ಲಿ ಸೇರಿತು. ರುಸ್ತುಂ ಸೊಂಟದ ಪಟ್ಟಿಗೆ ಸಿಕ್ಕಿಸಿದ ಕಠಾರಿಯನ್ನು ಮಿಂಚಿನ ವೇಗದಲ್ಲಿ ಹೊರತೆಗೆದು ರಾಕ್ಷಸನ ವಕ್ಷಸ್ಥಳವನ್ನು ಸೀಳಿ, ಶರೀರದಿಂದ ಹೃದಯವನ್ನು ಬೇರ್ಪಡಿಸಿ ತೆಗೆದನು. ಆಗ ಪರ್ವತ ಗುಹಾಂತರ್ಭಾಗಗಳಿಂದ ಭೀಷಣ ಕ್ರಂದನಗಳು ಕೇಳಿಬಂದುವು.

ಧವಳಾಸುರನ ಮೃತ್ಯುವಿನಿಂದ ಅವನ ಶರೀರದ ಅಂಗಾಂಗಗಳೆಲ್ಲವೂ ನಿರ್ಜೀವವಾದಂತೆ, ಗುಹಾಂತರ್ಭಾಗಗಳಲ್ಲಿದ್ದ ಸಾವಿರಾರು ಮಂದಿ ರಾಕ್ಷಸರು ಚರಮಗತಿಯನ್ನೈದಿದರು.

ಜೇತಾರ ರುಸ್ತುಂ ಆ ಭಯಾನಕ ಸ್ಥಳದಿಂದ ಓಡಿ, ಅನತಿ ದೂರದ ಲ್ಲಿದ್ದ ನೀರ ಬುಗ್ಗೆಯೊಂದನ್ನು ಸೇರಿ, ಮೈಮೇಲಿನ ಲೋಹಕವಚವನ್ನು ಕಳಚಿ, ಆಯುಧಗಳನ್ನು ಬದಿಗಿರಿಸಿ, ಮೈಕೈಗಳಿಗಂಟಿದ ನೆತ್ತರ ಕಲೆಗಳನ್ನು ತೊಳೆದು ಶರೀರವನ್ನು ನಿರ್ಮಲಗೊಳಿಸಿದನು. ತನಗೆ ಗೆಲುವನ್ನು ನೀಡಿದ ದೈವವನ್ನು ಅವನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ ವಂದನೆಗಳನ್ನರ್ಪಿಸಿದನು.

ರುಸ್ತುಂ ಮತ್ತೆ ಲೋಹ ಕವಚವನ್ನೂ ಆಯುಧಗಳನ್ನೂ ಧರಿಸಿ, ತಾನು ಅಲ್ಲಾದನನ್ನು ಕಟ್ಟಿಹಾಕಿದ ಎಡೆಗೆ ಹೋದನು. ಅವನ ಕಟ್ಟು ಗಳನ್ನು ಬಿಚ್ಚಿಹಾಕಿ, ತಾನು ತಂದ ರಾಕ್ಷಸನ ಹೃದಯವನ್ನು ಅಲ್ಲಾದನ ಕೈಗೆ ಕೊಟ್ಟು ಅದನ್ನು ಹೊತ್ತುಕೊಂಡು ಬರುವಂತೆ ಆಜ್ಞಾಪಿಸಿದನು. ಆ ಮೇಲೆ ಅವರೀರ್ವರೂ ಕುದುರೆಗಳನ್ನೇರಿ ಮಜಂದ್ರದ ಹಾದಿಯನ್ನು ಹಿಡಿದರು. ದಾರಿ ಯಲ್ಲಿ ಅಲ್ಲಾದನು ರುಸ್ತುಮನ ಸಂಗಡ "ನನ್ನ ಕೊರಳಲ್ಲಿ ನಿನ್ನ ಪಾಶದ ಉರುಳು ಬಿಗಿದ ಕಲೆ ಇನ್ನೂ ಮಾಯವಾಗಿಲ್ಲ. ನೀನು ವೀರೋಚಿತ ರೀತಿ ಯಲ್ಲಿ ನಿನ್ನ ವಾಗ್ದಾನವನ್ನು ಈಡೇರಿಸಿ ಕೊಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಅರಿಕೆಮಾಡಿ, ರುಸ್ತುಂ ಮಾಡಿದ ವಾಗ್ದಾನವನ್ನು ಅವನ ಸ್ಮರಣೆಗೆ ತಂದನು.

"ನನ್ನ ವಾಗ್ದಾನವನ್ನು ನಾನು ಮರೆತಿಲ್ಲ. ಆದರೆ ನನ್ನ ಕಾರ್ಯ ಇನ್ನೂ ಪೂರ್ಣವಾಗಿಲ್ಲ. ಈ ರಾಜ್ಯದಲ್ಲಿರುವ ದುಷ್ಟ ಸತ್ವಗಳನ್ನೆಲ್ಲ ನಾಶಪಡಿಸಿ, ದೇಶ ವನ್ನು ಮಾನವ ವಾಸಕ್ಕೆ ಯೋಗ್ಯವನ್ನಾಗಿ ಮಾಡಬೇಕು. ಈ ಕಾರ್ಯ ಮುಗಿದ ಮೇಲೆ ನಾನು ನಿನ್ನನ್ನು ಮಜಂದ್ರದ ಅರಸನನ್ನಾಗಿ ಮಾಡುವೆನು" ಎಂದು ರುಸ್ತುಂ ಪ್ರತಿನುಡಿದು ಸಮಾಧಾನ ಹೇಳಿದನು.

ರುಸ್ತುಂ ಮತ್ತೆ ಚಕ್ರವರ್ತಿಯಿದ್ದ ಸ್ಥಳಕ್ಕೆ ಬಂದು, ತಾನೆಸಗಿದ ಸಾಹ ಸದ ಕತೆಯನ್ನು ವಿವರಿಸಿ ನಿವೇದಿಸಿದನು. ಅಲ್ಲಾದನ ಕೈಯಿಂದ ಧವಳಾ ಸುರನ ಹೃದಯವನ್ನು ತೆಗೆದುಕೊಂಡು, ಅದನ್ನು ಹಿಳಿದು ರಕ್ತಬಿಂದುಗಳನ್ನು ಕಾಯಕೋಸನ ಮತ್ತು ಇತರ ಇರಾನಿಯರ ಕಣ್ಣುಗಳಿಗೆ ಹಚ್ಚಿದನು. ಕೂಡಲೇ ಅವರ ಕುರುಡು ಪರಿಹಾರವಾಯಿತು. ಅವರಿಗೆಲ್ಲ ದೃಷ್ಟಿ ಮರಳಿ

ದೊರೆಯಿತು. ಕಾರಿರುಳಂತೆ ಅವರಿಗೆ ಭಯಾನಕವಾಗಿ ತೋರುತ್ತಿದ್ದ ಪ್ರಪಂಚ ಈಗ ಅವರ ಕಣ್ಣುಗಳಿಗೆ ಚೆಲುವು ನಲವುಗಳ ಆಗರವಾಗಿ ತೋರಿತು. ಚಕ್ರವರ್ತಿ ಸಿಂಹಾಸನವನ್ನೇರಿ ಓಲಗ ನಡೆಸಿದನು. ಏಳು ದಿನಗಳ ತನಕ ಎಡೆ ಬಿಡದೆ ವಿಜಯೋತ್ಸವ ಮತ್ತು ಔತಣಗಳು ನಡೆದುವು. ಈ ಔತಣ ಸಮಾರಂಭಗಳಲ್ಲಿ ರುಸ್ತುಂ ಚಕ್ರವರ್ತಿಯ ಬಲಗಡೆ ಮನ್ನಣೆಯ ಸ್ಥಾನವನ್ನು ಪಡೆದಿದ್ದನು. ಎಂಟನೆಯ ದಿನ ಯೋಧರೆಲ್ಲ ತಮ್ಮ ಕೈದುಗಳನ್ನು ತೆಗೆದುಕೊಂಡರು. ಮಜಂದ್ರದಲ್ಲಿರುವ ಮಾಯಾ ಪ್ರಭಾವದ ದುಷ್ಟ ಸತ್ವಗಳನ್ನೆಲ್ಲಾ ನಾಶಪಡಿಸಿ ಅದನ್ನು ಮಾನವ ವಾಸಕ್ಕೆ ಯೋಗ್ಯವನ್ನಾಗಿ ಮಾಡಬೇಕೆಂದು ಅವರು ಪಣತೊಟ್ಟರು. ಎಷ್ಟೋ ನಗರಗಳು ಧ್ವಂಸವಾದುವು. ರಾಕ್ಷಸರ ರಕ್ತದಿಂದ ಬಯಲುಗಳೆಲ್ಲ ಅರುಣ ವರ್ಣವನ್ನು ತಳೆದುವು. ಕೊನೆಗೆ ಕಾಯಿಕೋಸ ಚಕ್ರವರ್ತಿ "ಇನ್ನು ನಮ್ಮ ಈ ಸಂಹಾರ ಲೀಲೆಯನ್ನು ನಿಲ್ಲಿಸೋಣ. ನಮಗೆ ಶರಣಾಗತನಾಗಬೇಕೆಂದು ಮಜಂದ್ರದ ರಾಜನಿಗೊಂದು ಸಂದೇಶ ಕಳುಹಿಸೋಣ" ಎಂದು ಹೇಳಿದನು.

ರುಸ್ತುಂ ರಾಜನ ಸೂಚನೆಯನ್ನು ಒಪ್ಪಿದನು. ಫರದಾಬಾದನೆಂಬ ಹೆಸರಿನ ದೂತನೊಬ್ಬನು ಚಕ್ರವರ್ತಿಯ ಸಂದೇಶವನ್ನು ತೆಗೆದುಕೊಂಡು ಮಜಂದ್ರ ರಾಜನಲ್ಲಿಗೆ ತೆರಳಿದನು. ಅವನು, "ಮಾಯಾವಿಗಳ ಯಶೋಲತೆಯಿಂದು ಸುಟ್ಟು ಕರಿಯಾಗಿದೆ. ಧವಳಾಸುರ ಮತ್ತು ಅವನ ಪರಿವಾರದವರ ಅಜೇಯ ಪೌರುಷವಿಂದು ಪುಡಿಯಾಗಿದೆ. ನೀನು ಈಗಲಾದರೂ ಇರಾನಿನ ಚಕ್ರವರ್ತಿಗೆ ಶರಣಾಗತನಾಗಿ ಕಪ್ಪಕಾಣಿಕೆಗಳನ್ನು ಒಪ್ಪಿಸು. ಇಲ್ಲದಿದ್ದರೆ ಅರ್ಜಾಂಗ ಮತ್ತು ಧವಳಾಸುರನಿಗೊದಗಿದ ಗತಿಯೇ ನಿನಗೆ ಸಮನಿಸುವುದು." ಎಂಬ ಚಕ್ರವರ್ತಿಯ ಸಂದೇಶವನ್ನು ಅರುಹಿದನು.

ಅಪಮಾನಕರವಾದ ಈ ಸಂದೇಶ ಮಜಂದ್ರದ ರಾಜನ ಮನಶ್ಶಾಂತಿಯನ್ನು ಒಕ್ಕಲಿಕ್ಕಿತು. ಅವನು ಮೂರು ದಿನಗಳ ತನಕ ಈ ವಿಷಯವನ್ನು ತನ್ನ ಪ್ರಧಾನರೊಡನೆ ಪರ್ಯಾಲೋಚಿಸಿದನು. ಕೊನೆಗೆ ಅವನು "ಉಪ್ಪು ನೀರು ಎಂದೂ ದ್ರಾಕ್ಷಾರಸವಾಗಲಾರದು. ನಿನ್ನ ರಾಜನ ಆಣತಿಯಂತೆ ನಾನು ಸಿಂಹಾಸನವನ್ನು ಬಿಟ್ಟು ಕೆಳಗೆ ಇಳಿಯಲಾರೆ. ನಿನ್ನ ಚಕ್ರವರ್ತಿ ಶಾಸನಕ್ಕೆ ಅಣಿಯಾಗಲಿ. ಇರಾನಿನ ನಗರಗಳನ್ನೆಲ್ಲಾ ಹಾಳುಗೆಡಹಿ ರಾಜ್ಯವನ್ನು ಮರುಭೂಮಿಯನ್ನಾಗಿ ಮಾಡುವ ಕಾರ್ಯ ನನ್ನದು" ಎಂದು ಪ್ರತ್ಯುತ್ತರವನ್ನು ಕಳುಹಿದನು.

ಫರದಾಬಾದನು ಮರಳಿಬಂದು ಕಾಯಕೋಸ ಚಕ್ರವರ್ತಿಗೆ ಮಜಂದ್ರದ ರಾಜನಿತ್ತ ಉತ್ತರವನ್ನು ತಿಳಿಸಿದಾಗ, ಆ ಉತ್ತರದ ಒಕ್ಕಣೆಯನ್ನು ಕೇಳಿ ರುಸ್ತುಮನ ಎದೆಯಲ್ಲಿ ರೋಷಾಗ್ನಿ ಪ್ರಜ್ವಲಿಸಿತು. ಅವನ ಮೈಮೇಲಿನ ರೋಮಗಳು ಈಟಿಗಳಂತೆ ಎದ್ದುನಿಂತವು. ಅವನು, "ಈ ಪತ್ರವನ್ನು ನನ್ನ ಎದೆಗೆ ತಿವಿದ ಖಡ್ಗವೆಂದೂ, ಈ ಮಾತುಗಳನ್ನು ನನ್ನ ಮೇಲೆಸೆದ ಕೂರಂಬು ಗಳೆಂದೂ ನಾನು ಪರಿಗಣಿಸುವೆನು. ಆ ದುಷ್ಟನ ಶಿರವನ್ನು ಇಳುಹಿ ಅವನ ಸೊಕ್ಕನ್ನು ಅಡಗಿಸದಿದ್ದರೆ ನಾನು ರುಸ್ತುಮನಲ್ಲ" ಎಂದು ಚಕ್ರವರ್ತಿಯ ಮುಂದೆ ಪ್ರತಿಜ್ಞೆ ಮಾಡಿದನು.

ಮಜಂದ್ರದ ರಾಜನೊಡನೆ ಕದನವನ್ನು ಕೈಗೊಳ್ಳಲು ರುಸ್ತುಂ ಸಿದ್ಧ ನಾದುದನ್ನು ಕಂಡು ಕಾಯಕೋಸ ಚಕ್ರವರ್ತಿಗೆ ಸಂತೋಷವಾಯಿತು. ಒಬ್ಬ ರಾಯಸಿಗನು ಚಕ್ರವರ್ತಿಯ ಸೂಚನೆಯಂತೆ ಪತ್ರಬರೆಯಲು ಲೆಕ್ಕಣಿ ಯನ್ನು ತೆಗೆದುಕೊಂಡು ಸಿದ್ಧನಾದನು. ಅವನು ಬರೆದ ಒಕ್ಕಣೆ ಕರಾರಿಯ ತುದಿಯಷ್ಟು ಮೊನಚಾಗಿದ್ದಿತು. "ಸಿಂಹಾಸನವನ್ನೇರಿ ರಾಜ್ಯವನ್ನು ಆಳತಕ್ಕ ಅರಸನು ವಿವೇಕಿಯೂ ಪ್ರಾಜ್ಞನೂ ಆಗಿರಬೇಕಲ್ಲದೆ ಅವನು ಗಾಂಪನಂತೆ ವರ್ತಿಸಬಾರದು. ಮೂರ್ಖ ಸಂದೇಶಗಳಿಗೆ ಅವನ ರಾಜಮುದ್ರೆ ಬೀಳ ಬಾರದು. ಈಗಲಾದರೂ ನೀನು ದುರಭಿಮಾನವನ್ನು ತ್ಯಜಿಸಿ ಇರಾನಿನ ಚಕ್ರ ವರ್ತಿಗೆ ಶರಣಾಗತನಾಗು. ನೀನು ಈ ಸಂದೇಶವನ್ನು ಅವಜ್ಞೆಗೈದರೆ ನಿನ್ನ ನಾಡಿನಲ್ಲಿ ನಮ್ಮ ಸೇನಾಸಾಗರ ಪಸರಿಸುವುದು. ನಿನ್ನ ರುಂಡ ನಿನ್ನ ದುರ್ಗದ ಬಾಗಿಲ ಮೇಲೇರುವುದು. ನಿನ್ನ ದೇಹ ಪಶುಪಕ್ಷಿಗಳಿಗೆ ಆಹಾರವಾಗುವು ದೆಂಬ ಸಂಗತಿಯನ್ನು ಮರೆಯಬೇಡ." ಎಂಬ ಸಂದೇಶವನ್ನು ಚಕ್ರವರ್ತಿ ಬರೆಸಿದನು. ಈ ರಾಯಸವನ್ನು ಸ್ವತಃ ರುಸ್ತುಮನೇ ತೆಗೆದುಕೊಂಡು ರಕ್ಷ ನನ್ನು ಏರಿ ಮಜಂದ್ರದ ಮಾರ್ಗವನ್ನು ಹಿಡಿದು ಸಾಗಿದನು.

ಇರಾನಿನ ಚಕ್ರವರ್ತಿಯ ಕಡೆಯಿಂದ ಇನ್ನೊಬ್ಬ ರಾಜದೂತನು ಬರು ತ್ತಿದ್ದಾನೆಂಬ ಸಂಗತಿಯನ್ನು ರಾಜಸೇವಕರು ಮಜಂದ್ರದ ರಾಜನಿಗೆ ಅರುಹಿ ದರು. ದಾರಿಯಲ್ಲಿಯೇ ಆ ದೂತನನ್ನು ಎದುರಿಸಬೇಕೆಂದು ರಾಜ ತನ್ನ ಸೇನೆಗೆ ಆಜ್ಞಾಪಿಸಿದನು. ಅವರು ರುಸ್ತುಮನನ್ನು ಎದುರಿಸಲು ಹೊರಟರು. ತನಗೆ ಎದುರಾಗಿ ಬರುತ್ತಿರುವವರು ಹಗೆಗಳೆಂಬುದನ್ನು ರುಸ್ತುಂ ಗ್ರಹಿಸಿ, ತನ್ನ ಶಕ್ತಿಯೆನಿತಿದೆಯೆಂಬುದನ್ನು ಅವರಿಗೆ ತೋರಿಸಿಕೊಡಲು ತಯಾರಾದನು.

ಅವನು ಕುದುರೆಯ ಮೇಲಿಂದಿಳಿಯದೆ ಮಾರ್ಗಪಾರ್ಶ್ವದಲ್ಲಿದ್ದ ಒಂದು ದೊಡ್ಡ ಮರವನ್ನು ಬೇರುಸಹಿತ ಕಿತ್ತು ಅದನ್ನು ಬೀಸಿ ತನಗೆ ಎದುರಾದ ಮಜಂದ್ರ್ರದ ಸೇನೆಯ ಮೇಲೆ ಎಸೆದನು. ಮಜಂದ್ರ್ರದ ಸೇನಾನಾಯಕನು ತನ್ನ ಬಲವನ್ನು ರುಸ್ತುಮನಿಗೆ ತೋರಿಸಲೆಂದು ತನ್ನ ತೋಳನ್ನು ಚಾಚಿ ರುಸ್ತುಮನ ಕೈಯನ್ನು ಹಿಡಿದು ತನ್ನ ಸರ್ವಶಕ್ತಿಯನ್ನು ಉಪಯೋಗಿಸಿ ಹಿಸುಕಿದನು. ಆದರೆ ರುಸ್ತುಮನಿಗೆ ಅದರಿಂದ ಎಳ್ಳಿನಷ್ಟೂ ನೋವಾಗಲಿಲ್ಲ. ಈಗ ರುಸ್ತುಮನ ಸರದಿ ಬಂದಿತು. ಅವನು ವಿರೋಧಿಯ ಕೈಯನ್ನು ಹಿಡಿದು ಬಲವಾಗಿ ಒತ್ತಿದನು. ರುಸ್ತುಮನ ಹಿಸುಕುವಿಕೆಗೆ ವೈರಿಯ ಕೈಯ ಮೂಳೆಗಳು ಮುರಿದುವು; ರಕ್ತನಾಳಗಳು ಒಡೆದುವು; ಆ ಯೋಧನು ಪ್ರಜ್ಞಾಹೀನನಾಗಿ ನೆಲದಮೇಲೆ ಒರಗಿದನು.

ಸೇನಾನಾಯಕನು ಸೋಲುಪಡೆದು ನೆಲದ ಮೇಲೆ ಬಿದ್ದುದು ರಾಜನಿಗೆ ತಿಳಿಯಿತು. ಅವನು ತನ್ನ ಆಸ್ಥಾನದ ಮಹಾವೀರನಾದ ಕಾಲಹೋರ ನೆಂಬವನನ್ನು ರುಸ್ತುಮನನ್ನು ಸದೆಬಡಿದು ಶಾಸ್ತಿಮಾಡಲು ಕಳುಹಿದನು. ಕಾಲಹೋರನು ಬಂದು ರುಸ್ತುಮನ ಕೈಯನ್ನು ತನ್ನ ಭದ್ರ ಮುಷ್ಟಿಯಲ್ಲಿ ಹಿಡಿದುಕೊಂಡನು. ಅವನ ಹಿಡಿತದಿಂದ ರುಸ್ತುಮನಿಗೆ ಅಲ್ಪ ವೇದನೆಯಾ ಯಿತು. ಆದರೆ ರುಸ್ತುಂ ಕಾಲಹೋರನ ಹಸ್ತವನ್ನು ತನ್ನ ಭದ್ರಮುಷ್ಟಿ ಯಲ್ಲಿ ಹಿಡಿದಾಗ ಮಾಗಿಯಲ್ಲಿ ಮರಗಳಿಂದ ಉದುರುವ ಹಣ್ಣೆಲೆಗಳಂತೆ ಬೆರಳುಗಳು ಒಂದೊಂದಾಗಿ ಕೈಯಿಂದ ಉದುರಿದುವು. ನೆತ್ತರು ಹೊರ ಹೊಮ್ಮಿತು. ಹೀಗೆ ಪರಾಭವವನ್ನು ಹೊಂದಿದ ಕಾಲಹೋರನು ರುಸ್ತುಮ ನೊಡನೆ ಮಲ್ಲಯುದ್ಧವನ್ನೆಸಗಲು ಧೈರ್ಯಪಡದೆ ರಾಜಾಸ್ಥಾನಕ್ಕೆ ಮರಳಿ, "ಮಹಾ ಪ್ರಭೂ, ಈ ಹಗೆ ಮನುಷ್ಯಸಿಂಹನಾಗಿದ್ದಾನೆ. ನಾವು ಅವನೊಡನೆ ಕಾದಿ ಗೆಲ್ಲಲಾರೆವು. ಅವನಿಗೆ ಪೊಗದಿಯನ್ನಿತ್ತು ಸಂಧಿಮಾಡಿಕೊಳ್ಳುವುದೇ ಉತ್ತಮ ಕಾರ್ಯವಾಗಿದೆ!" ಎಂದು ರಾಜನಿಗೆ ಉಪದೇಶಮಾಡಿದನು.

ಇದನ್ನು ಕೇಳಿ ಮಜಂದ್ರ್ರದ ರಾಜನಿಗೆ ವಿಪರೀತ ಕೋಪಬಂತು. ಅವನು ತನ್ನ ನಚ್ಚಿನ ಯೋಧನಿಗೊದಗಿದ ಪರಾಭವವನ್ನು ಕಂಡು ಮರುಗಿದನು. ಅನಿತರಲ್ಲಿ ರುಸ್ತುಂ ರಾಜಾಸ್ಥಾನವನ್ನು ಸೇರಿದನು. ಇರಾನಿನ ಚಕ್ರವರ್ತಿ ಯೊಡನೆ ಯುದ್ಧವೆಸಗುವುದು ನಿರರ್ಥಕವೆಂದು ತಿಳಿಸಿ ತಾನು ತಂದ ರಾಯಸ ಪತ್ರವನ್ನು ರಾಜನಿಗೆ ಕೊಟ್ಟನು. ಆ ಪತ್ರದ ಒಕ್ಕಣೆಯನ್ನು ಓದಿದ ರಾಜನ ಮೊಗವನ್ನು ಮುನಿಸಿನ ಕಾರ್ಮುಗಿಲು ಆವರಿಸಿತು.

"ನೀನು ಈ ಸಂದೇಶವನ್ನು ತೆಗೆದುಕೊಂಡು ನಿನ್ನ ರಾಜನಲ್ಲಿಗೆ ಹೋಗು: ಇರಾನಿನ ಚಕ್ರವರ್ತಿ ಮಜಂದ್ರವನ್ನು ಸ್ವಾಧೀನಪಡಿಸಿಕೊಳ್ಳಲು ಆಶಿಪಡದೆ ತನ್ನ ರಾಜ್ಯದಿಂದ ತೃಪ್ತಿಹೊಂದಲಿ. ಇಲ್ಲದಿದ್ದರೆ ಭೀಕರ ವಿಪತ್ತೊದಗುವುದು ನಿಶ್ಚಯ." ಎಂದು ಮಜಂದ್ರದ ರಾಜನು ರುಸ್ತುಮನಿಗೆ ಮಾರ್ನುಡಿಕೊಟ್ಟನು.

ರಾಜನು ಉಡುಗೊರೆಕೊಟ್ಟ ವಸ್ತ್ರಾಭರಣಗಳನ್ನೂ ವಾಹನಗಳನ್ನೂ ರುಸ್ತುಮನು ತಿರಸ್ಕರಿಸಿ, ತನ್ನ ಚಕ್ರವರ್ತಿಯಿದ್ದೆಡೆಗೆ ಮರಳಿದನು. "ಮಜಂದ್ರದ ಅರಸನು ಸಾಮ ವಚನಗಳಿಗೆ ಮಣಿಯುವಂತಿಲ್ಲ. ದಂಡನೀತಿಯೇ ಅವನಿಗೆ ಬೇಕಾಗಿದೆ. ಅವನೊಡನೆ ಯುದ್ಧಕ್ಕೆ ನಾವು ಸಿದ್ಧರಾಗಬೇಕು." ಎಂದು ಹೇಳಿ ತನ್ನ ದೌತ್ಯದ ಪರಿಣಾಮವನ್ನು ತಿಳಿಸಿದನು.

ರುಸ್ತುಂ ಹೊರಟುಹೋದ ಕೂಡಲೇ ಮಜಂದ್ರದ ರಾಜನು ಕದನಕ್ಕೆಂದು ಸೈನ್ಯವನ್ನು ಕಲೆಹಾಕಿದನು. ನೂರಾರು ಆನೆಗಳು, ಸಹಸ್ರಾರು ಕುದುರೆ ಸವಾರರು ಮತ್ತು ಕಾಲಾಳುಗಳು ಕದನಕ್ಕೆ ಅಣಿಯಾದರು. ಈ ಅಪಾರ ಸೇನೆ ಇರಾನನ್ನು ಆಕ್ರಮಿಸಲೆಂದು ದಂಡಯಾತ್ರೆಯನ್ನು ಕೈಗೊಂಡಿತು.

ಅತ್ತ ಕಾಯಕೋಸ ಚಕ್ರವರ್ತಿ ಮಧ್ಯದಲ್ಲಿ ನಿಂತು ಸೇನೆಯನ್ನು ನಡೆಸುತಿದ್ದನು. ಸೇನೆಯ ಚೂಣಿಯಲ್ಲಿ ರುಸ್ತುಮನಿದ್ದನು. ಅಷ್ಟರಲ್ಲಿ ಮಜಂದ್ರದ ಒಬ್ಬ ವೀರಯೋಧನು ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ತನ್ನೊಡನೆ ದ್ವಂದ್ವ ಯುದ್ಧಕ್ಕೆ ಬರಬೇಕೆಂದು ಇರಾನಿನ ಭಟರಿಗೆ ಕಾಳಗದ ಕರೆಯನ್ನು ಕೊಟ್ಟನು. ಆದರೆ ಇರಾನೀ ಸೇನೆಯ ಭಟರಾರೂ ಈ ಯುದ್ಧಾಹ್ವಾನಕ್ಕೆ ಮಾರುಗೊಡಲಿಲ್ಲ. ಆಗ ಚಕ್ರವರ್ತಿಯು "ಈ ಯೋಧನನ್ನು ಕಂಡುದರಿಂದ ನಿಮ್ಮ ಮೈಯ ರಕ್ತವೆಲ್ಲ ಅಂಜಿಕೆಯಿಂದ ಹೆಪ್ಪುಗಟ್ಟಿ ಹೋಗಿದೆಯೇ?" ಎಂದು ತನ್ನ ಪಕ್ಷದ ಯೋಧರನ್ನು ಮೂದಲಿಸಿ ಮಾತನಾಡಿದನು.

ಸಮ್ರಾಟನ ಮೂದಲಿಕೆಯನ್ನು ಕೇಳಿಯೂ ಇರಾನಿನ ಯೋಧರಾರೂ ಮುಂದೆ ಬರಲಿಲ್ಲ. ಕೊನೆಗೆ ರುಸ್ತುಂ ತಾನು ಹಗೆಯೊಡನೆ ದ್ವಂದ್ವ ಯುದ್ಧ ಮಾಡುವೆನೆಂದು ಮುಂದೆ ಬಂದು ಸಾರ್ವಭೌಮನ ಅನುಮತಿಯನ್ನು ಬೇಡಿದನು. ಅನುಜ್ಞೆ ದೊರಕಿತು. ಅವನು ಕೂಡಲೇ ಪ್ರತಿಪಕ್ಷದ ವೀರನನ್ನು ಎದುರಿಸಲು ಮುಂದಾಗಿ, ತನ್ನ ವಿರೋಧಿಯೊಡನೆ, "ನೋಡು, ಇಂದು ಜೀವಂತರ ಸಾಲಿನಿಂದ ನಿನ್ನ ಹೆಸರು ಅಳಿಸಲ್ಪಡುವುದು" ಎಂದು ಮೂದಲಿಸಿ, ಸಿಂಹನಾದ ಮಾಡಿದನು.

"ನಿನ್ನೊಡಲು ಇಂದು ರಣಹದ್ದುಗಳಿಗೆ ಭೂರಿ ಭೋಜನವನ್ನು ಒದಗಿಸುವುದು." ಎಂದು ಹಗೆ ರುಸ್ತುಮನನ್ನು ಜರೆದನು.

ರುಸ್ತುಂ ಈಟಿಯುನ್ನು ಮೇಲೆತ್ತಿ, "ನಾನು ರುಸ್ತುಂ" ಎಂದು ವೀರ ಗರ್ಜನೆಯನ್ನೆಸಗಲು, ಈ ವೀರನಾದ ಹಗೆಯ ಕಿವಿಗಳಲ್ಲಿ ಬೀಳಲು, ಅವನ ದೇಹ ಕಂಪಿಸಿತು. ಅವನು ಅಲ್ಲಿ ನಿಲ್ಲದೆ ರುಸ್ತುಮನಿಗೆ ಬೆನ್ನು ತೋರಿಸಿ ಪಲಾಯನ-ಮಾಡಿಬಿಟ್ಟನು! ರುಸ್ತುಂ ಹಗೆಯನ್ನು ಹಿಂಬಾಲಿಸಿ ಈಟಿಯಿಂದ ತಿವಿಯಲು ಮಜಂದ್ರದ ಕಲಿಯ ಲೋಹದ ಕವಚವನ್ನು ಸೀಳಿ ಈಟಿ ದೇಹದೊಳಗೆ ನಾಟಿತು. ರುಸ್ತುಂ ಹಗೆಯನ್ನು ಮೇಲೆತ್ತಿ ನೆಲದ ಮೇಲೆ ಅಪ್ಪಳಿಸಿದನು. ಮತ್ತೇನು? ಹಗೆ ಕಾಯಬಿಟ್ಟು ಕೈಲಾಸಕ್ಕೆ ಸಂದನು.

ಇದು ಮುಂದೆ ನಡೆಯಲಿರುವ ಭೀಷಣ ಸಂಗ್ರಾಮದ ಮುನ್ನುಡಿಯಾಗಿದ್ದಿತು. ಮುಂದೆ ಏಳು ದಿನಗಳ ತನಕ ಎಡಬಿಡದೆ ಯುದ್ಧ ನಡೆಯಿತು. ಇತ್ತಂಡಗಳೂ ಸೋಲಲಿಲ್ಲ, ಗೆಲ್ಲಲಿಲ್ಲ. ಜಯಲಕ್ಷ್ಮಿ ಹಸ್ತದಲ್ಲಿ ವಿಜಯ ಮಾಲಿಕೆಯನ್ನು ಹಿಡಿದು ಎರಡು ಪಕ್ಷಗಳ ಮಧ್ಯದಲ್ಲಿ ನಿಂತು ಯಾವ ಪಕ್ಷಕ್ಕೆ ಒಲಿಯುವುದೆಂದು ಸಂದೇಹಗ್ರಸ್ತಳಾದಳು. ಯೋಧರ ಪಾದಧೂಲಿ ಗಗನಾಂಗಣವನ್ನು ಮುಸುಕಿ ನೇಸರನ್ನು ಅಡ್ಡಗಟ್ಟಿದುದರಿಂದ ಹಗಲಾದರೂ ರಣಕ್ಷೇತ್ರವನ್ನು ಕತ್ತಲೆ ಆವರಿಸಿತು. ವೀರರ ಕರವಾಳಗಳು ಮಿನುಗಿ ಕತ್ತಲೆಯನ್ನು ಕಳೆಯಲು ಪ್ರಯತ್ನಿಸುತ್ತಿದ್ದುವು. ವೀರರ ಸಿಂಹನಾದಗಳು, ಅಶ್ವಗಳ ಹೇಷಾರವಗಳು, ಗಜಗಳ ಬೃಂಹಿತಗಳು ಮತ್ತು ರಣಹದ್ದುಗಳ ವಿಕಟಾಕ್ರೋಶಗಳು ಯೋಧರ ಕಿವಿಗಳನ್ನು ಕಿವುಡಾಗಿಸುತ್ತಿದ್ದುವು. ಸೈಕನಿರ ಅಟ್ಟೆಗಳು ಬೆಟ್ಟಗಳಂತೆ ಬಿದ್ದುವು; ನೆತ್ತರ ಕಾಲುವೆಗಳು ಹರಿದುವು; ಮುರಿದ ತೇರು ಮತ್ತು ಕೈದುಗಳ ರಾಶಿಗಳು ಪರ್ವತಾಕಾರವನ್ನು ತಾಳಿದುವು. ಆದರೆ ಜಯಲಕ್ಷ್ಮಿ ಯಾರಿಗೂ ಒಲಿಯಳು; ಯಾರನ್ನೂ ವರಿಸಳು.

ಎಂಟನೆಯ ದಿನ ಕಾಯಕೋಸ ಸಾರ್ವಭೌಮ ಮಸ್ತಕದ ಮೇಲಿಂದ ಮುಕುಟವನ್ನು ತೆಗೆದು ನೆಲದ ಮೇಲೆ ಬಗ್ಗಿ ಪ್ರಣಾಮ ಮಾಡಿ, ಅಂಜಲಿಬದ್ಧನಾಗಿ "ಇರಾನಿಯರ ಭಯಭಕ್ತಿಗಳಿಂದ ಕೂಡಿದ ಆರಾಧನೆಗೂ ರಾಕ್ಷಸವರ್ಗದ ದ್ವೇಷಕ್ಕೂ ಪಾತ್ರನಾದ ಭಗವಂತನೇ, ನಮಗೆ ಗೆಲುವನ್ನು ಕರುಣಿಸು." ಎಂದು ಭಗವಂತನನ್ನು ಪ್ರಾರ್ಥಿಸಿದನು.

ಮತ್ತೆ ಇರಾನಿಯರ ಸಮ್ರಾಟನು ದಂಡನಾಯಕನ ಸ್ಥಾನವನ್ನು ತಾನೇ

ಸ್ವೀಕರಿಸಿ, ಶಿರಸ್ತ್ರಾಣವನ್ನು ಧರಿಸಿ ಯುದ್ಧರಂಗಕ್ಕೆ ಇಳಿದನು. ರುಸ್ತುಂ ಸೈನ್ಯದ ಮಧ್ಯ ಭಾಗದಲ್ಲಿ ನಿಂತು ಹಗೆಗಳನ್ನು ಭೇದಿಸತೊಡಗಿದನು. ಅವನು ಶತ್ರುಗಳ ರುಂಡಗಳನ್ನು ತರಿದುರುಳಿಸುತ್ತಾ ಅರಿಸೇನೆಯ ಮಧ್ಯದಲ್ಲಿದ್ದ ಮಜಂದ್ರದ ರಾಜನ ಕಡೆಗೆ ಸಾಗಿದನು. ಸಮೀಪಕ್ಕೆ ಬಂದು ರುಸ್ತುಮನನ್ನು ಕಾಣಲು ಅರಿನೃಪನ ಎದೆಯು ಬಡಿತ ಭಯದಿಂದ ನಿಂತುಹೋಯಿತು. ಅನುವು ದೊರೆತಿದ್ದರೆ ಅವನು ಯುದ್ಧರಂಗವನ್ನು ಬಿಟ್ಟು ಪಲಾಯನ ಮಾಡು ತ್ತಿದ್ದನು. ಆದರೆ ಅದಕ್ಕೆ ಅವಕಾಶವಿರಲಿಲ್ಲ. ಇಷ್ಟರಲ್ಲಿ ರುಸ್ತುಮನ ಈಟಿ ಅವನ ದೇಹವನ್ನು ಭೇದಿಸಿತ್ತು. ಹಗೆ ಕುದುರೆಯ ಮೇಲಿಂದ ಕೆಳಗೆ ಬೀಳು ವುದನ್ನು ನಿರೀಕ್ಷಿಸುತ್ತಾ ರುಸ್ತುಂ ನಿಂತನು. ಆದರೆ ಮಜಂದ್ರದ ರಾಜನು ತನ್ನ ಮಾಯಾ ವಿದ್ಯೆಯ ಪ್ರಭಾವದಿಂದ ಒಂದು ಮಹಾಶಿಲೆಯಾಗಿಬಿಟ್ಟನು. ಈ ಅದ್ಭುತ ದೃಶ್ಯವನ್ನು ಕಂಡು ರುಸ್ತುಂ ಮತ್ತು ಇರಾನೀ ವೀರರು ವಿಸ್ಮಯಾಕುಲ ರಾದರು. ಕದನ ನಿಲ್ಲಲು ಕಾರಣವೇನೆಂಬುದನ್ನು ಅರಿಯಲು ಚಕ್ರವರ್ತಿಯೂ ಅಲ್ಲಿಗೆ ಧಾವಿಸಿದನು.

"ಮಹಾಪ್ರಭು, ನಾನು ಮಜಂದ್ರದ ರಾಜನನ್ನು ಈಟಿಯಿಂದ ಇರಿದೆ. ಆದರೆ ಅವನು ತನ್ನ ಮಾಯಾವಿದ್ಯೆಯಿಂದ ಮನುಷ್ಯಾಕಾರವನ್ನು ತ್ಯಜಿಸಿ ಬಂಡೆಯಾಗಿದ್ದಾನೆ. ಈಗ ಅವನು ನನ್ನ ಖಡ್ಗದ ಭಯವಿಲ್ಲದೆ ಸುರಕ್ಷಿತ ನಾಗಿದ್ದಾನೆ." ಎಂದು ನಿವೇದಿಸಿದನು.

"ಈ ಬಂಡೆಯನ್ನು ತಂದು ನನ್ನ ಸಿಂಹಾಸನದ ಮುಂದಿರಿಸಿರಿ." ಎಂದು ಕೂಡಲೇ ಚಕ್ರವರ್ತಿಯ ಆಜ್ಞೆಯಾಯಿತು. ಆದರೆ ಇರಾನೀ ಯೋಧರಲ್ಲಿ ಯಾರೂ ಆ ಮಹಾ ಶಿಲೆಯನ್ನು ಕದಲಿಸಲು ಶಕ್ತರಾಗಲಿಲ್ಲ. ಕೊನೆಗೆ ರುಸ್ತುಮನೇ ಬಂದು ಆ ಬಂಡೆಯನ್ನು ತನ್ನ ತೋಳುಗಳಲ್ಲಿ ಎತ್ತಿಕೊಂಡು ಹೋಗಿ ಸಿಂಹಾಸನದ ಮುಂದಿರಿಸಿದನು. ಮತ್ತು "ನಿನ್ನ ಮಾಯಾ ವಿದ್ಯೆಯ ಚಮತ್ಕಾರಗಳನ್ನು ನಿಲ್ಲಿಸು. ಇಲ್ಲದಿದ್ದರೆ ಈ ಶಿಲೆಯನ್ನು ಈ ಗದೆಯಿಂದ ಕುಟ್ಟಿ ಪುಡಿಪುಡಿ ಮಾಡುವೆನು." ಎಂದು ರುಸ್ತುಂ ಗರ್ಜಿಸಿದನು. ರುಸ್ತುಮನ ವೀರವಾಣಿಯನ್ನು ಕೇಳಿ ಶಿಲೆ ರೂಪಾಂತರ ಹೊಂದಿತು. ಲೋಹ ಕವಚ ಶಿರಸ್ತ್ರಾಣಗಳನ್ನು ಧರಿಸಿದ ಮಜಂದ್ರದ ರಾಜನು ಪ್ರತ್ಯಕ್ಷನಾದನು. ರುಸ್ತುಂ ಅವನ ತೋಳುಗಳನ್ನು ಹಿಡಿದು ನಿಲ್ಲಿಸಿದನು. ಕೂಡಲೇ ಕಟುಕರು ಬಂದು ಸಮ್ರಾಟನ ಅಪ್ಪಣೆಯಂತೆ ಮಜಂದ್ರದ ರಾಜನ ಶಿರಚ್ಛೇದನ ಮಾಡಿ, ಅವನ ಜೀವನಯಾತ್ರೆಯನ್ನು ಕೊನೆಗೊಳಿಸಿದರು.

ಹೀಗೆ ಈ ಭೀಕರ ಸಂಗ್ರಾಮ ಸಮಾಪ್ತಿಗೊಂಡಿತು. ಸೈನಿಕರು ಮಜಂದ್ರ ರಾಜ್ಯವನ್ನು ಸೂರೆಗೈದರು. ತನಗೆ ವಿಜಯವನ್ನೊದಗಿಸಿದ ದೇವರಿಗೆ ಕೃತಜ್ಞತೆಗಳನ್ನು ನಿವೇದಿಸುವ ಕಾರ್ಯದಲ್ಲಿ ಕಾಯಕೋಸ ಚಕ್ರವರ್ತಿ ಏಳು ದಿನಗಳನ್ನು ಕಳೆದನು. ಅನಂತರ ಏಳು ದಿನಗಳ ವರೆಗೆ ಚಕ್ರವರ್ತಿ ಸಿಂಹಾಸನದ ಮೇಲೆ ಕುಳಿತು ದೀನ ದರಿದ್ರರಿಗೆ ಸಾಕೆನುವಂತೆ ಧನ ಕನಕಗಳನ್ನು ದಾನಮಾಡಿದನು. ಕೊನೆಗೆ ವಿಜಯೋತ್ಸವ, ಔತಣಗಳು ಸಡಗರದಿಂದ ಜರಗಿದುವು. ಈ ಅಭೂತಪೂರ್ವ ವಿಜಯವನ್ನೊದಗಿಸಿದ ರುಸ್ತುಮನಿಗೆ ಚಕ್ರವರ್ತಿ ಎಲ್ಲರ ಮುಂದೆ ಕೃತಜ್ಞತೆ ಮತ್ತು ಧನ್ಯವಾದಗಳನ್ನು ಸಮರ್ಪಿಸಿದನು.

ಆದರೆ ರುಸ್ತುಂ ಅಲ್ಲಾದನನ್ನು ಮಾತ್ರ ಮರೆತಿರಲಿಲ್ಲ. ಅವನು ಚಕ್ರವರ್ತಿಯನ್ನು "ಮಹಾಪ್ರಭೂ, ನೀನು ನನಗೆ ಕರುಣಿಸತಕ್ಕ ಸ್ಥಾನಮಾನಗಳು ನನಗೆ ಸರಿಯಾಗಿ ದಾರಿ ತೋರಿಸಿದ ಮಾರ್ಗದರ್ಶಿಗೆ ಸಲ್ಲತಕ್ಕವುಗಳಾಗಿವೆ. ಆದುದರಿಂದ ಅಲ್ಲಾದನನ್ನು ಮಜಂದ್ರದ ಸಿಂಹಾಸನದ ಮೇಲೆ ಕುಳ್ಳಿರಿಸಿ ರಾಜ್ಯಾಭಿಷೇಕ ಮಾಡಬೇಕೆಂದು ಬಿನ್ನವಿಸುತ್ತೇನೆ" ಎಂದು ಪ್ರಾರ್ಥಿಸಿದನು.

ಸಮ್ರಾಟನು ರುಸ್ತುಮನ ಪ್ರಾರ್ಥನೆಯನ್ನು ಅಲ್ಲಗಳೆಯಲಿಲ್ಲ. ಅವನು ವೀರಯೋಧನ ಕೋರಿಕೆಯಂತೆ ಅಲ್ಲಾದನನ್ನು ಮಜಂದ್ರದ ಸಿಂಹಾಸನದ ಮೇಲೆ ಕುಳ್ಳಿರಿಸಿ ರಾಜ್ಯಾಭಿಷೇಕ ಮಾಡಿದನು. ಅಲ್ಲಾದ ಅಂದಿನಿಂದ ಮಜಂದ್ರದ ರಾಜನಾಗಿ ಬೆಳಗಿದನು.

## ಒಂಬತ್ತು

ಮಜಂದ್ರದ ವಿಜಯವನ್ನು ಗಳಿಸಿದ ರುಸ್ತುಮನನ್ನು ಕಾಯಕೋಸ ಚಕ್ರವರ್ತಿ ಮರೆಯಲಿಲ್ಲ. ಅವನು ಅಮೂಲ್ಯ ರತ್ನಾಭರಣಗಳು, ಉಡಿಗೆ ತೊಡಿಗೆಗಳು, ವಾಹನಗಳು, ದ್ರಾಕ್ಷಾರಸದ ಭರಣಿಗಳು ಮೊದಲಾದ ವಿವಿಧ ವಸ್ತುಗಳನ್ನು ಕಡುಗಲಿಗೆ ಮೆಚ್ಚುಗೆಗಳೆಂದು ಕೊಟ್ಟು ಸನ್ಮಾನಿಸಿದನು. ರುಸ್ತುಂ ಚಕ್ರವರ್ತಿಯನ್ನು ಬೀಳ್ಕೊಂಡು ಶಿಸ್ತಾನಕ್ಕೆ ಪ್ರಯಾಣಗೈದನು. ಜೇತಾರನಾಗಿ ಸ್ವಗೃಹಕ್ಕೆ ಮರಳಿದ ಪುತ್ರದರ್ಶನವು ಜಾಲ ರುದಾಬೆಯರನ್ನು

ಸಂತಸದ ಕಡಲಲ್ಲಿ ತೇಲಿಸಿತು. ರುಸ್ತುಂ ತಾಯಿ-ತಂದೆಯರೊಡನೆ ನೆಮ್ಮದಿ ಯಿಂದ ಕಾಲಕಳೆಯುತ್ತಿದ್ದನು.

ಹೀಗಿರಲು ಒಂದುದಿನ ರುಸ್ತುಂ ತಾರ್ತರ ರಾಜ್ಯದ ಗಡಿಯಲ್ಲಿದ್ದ ಒಂದು ಅರಣ್ಯದಲ್ಲಿ ಬೇಟೆಯಾಡಲು ಹೋದನು. ಅಲ್ಲಿ ಕಾಡುಗತ್ತೆಗಳು ಹೇರಳವಾಗಿ ದ್ದುವು. ಕೆಲವು ಕತ್ತೆಗಳನ್ನು ಬಾಣಪ್ರಯೋಗಮಾಡಿ ಸಂಹರಿಸಿದನು. ಇನ್ನು ಕೆಲವನ್ನು ಪಾಶದಿಂದ ಬಂಧಿಸಿದನು. ಅವನು ಮರಗಳ ಒಣ ಕೊಂಬೆಗಳನ್ನು ಉರಿಸಿ ಬೆಂಕಿಮಾಡಿ, ಕೊಂದ ಕತ್ತೆಗಳ ಚರ್ಮ ಸುಲಿದು ಮಾಂಸವನ್ನು ಬೆಂಕಿಯಲ್ಲಿ ಬೇಯಿಸಿದನು. ಸವಿಯಾದ ಮಾಂಸ ಅಂದು ಅವನ ಆಹಾರ ವಾಯಿತು. ಅವನು ಆ ಮೇಲೆ ರಕ್ಷನನ್ನು ಮೇಯಲು ಬಿಟ್ಟು ಒಂದು ಮರದ ನೆರಳಲ್ಲಿ ಮಲಗಿ ನಿದ್ರಿಸಿದನು.

ಆ ವೇಳೆಯಲ್ಲಿ ಆ ದಾರಿಯಲ್ಲಿ ಹೋಗುತ್ತಿದ್ದ ಏಳು ಮಂದಿ ತಾರ್ತರರು ಹುಲ್ಲುಗಾವಲಲ್ಲಿ ಮೇಯುತ್ತಿದ್ದ ರಕ್ಷನನ್ನು ಕಂಡು ಅದನ್ನು ಸೆರೆಹಿಡಿಯಲು ಬಯಸಿದರು. ಅವರು ರಕ್ಷನ ಸುತ್ತಲೂ ಅದು ಪಾರಾಗಿ ಹೋಗದಂತೆ ಹಗ್ಗಗಳ ಬಲೆ ಹೆಣೆದರು. ತನ್ನನ್ನು ಸೆರೆಹಿಡಿಯಲು ಬಂದ ತಾರ್ತರರ ಮೇಲೆ ರಕ್ಷ ಕೋಪಗೊಂಡು ಸಿಂಹದಂತೆ ಬಿದ್ದಿತು. ಅದು ಮುಂಗಾಲು ಗಳನ್ನೆತ್ತಿ ಇರ್ವರು ತಾರ್ತರರ ನೆತ್ತಿಯ ಮೇಲೆ ಬಡಿದು ಅವರನ್ನು ಸಂಹರಿ ಸಿತು. ಮೂರನೆಯವನ ಮಸ್ತಕವನ್ನು ಹಲ್ಲುಗಳಿಂದ ಕಡಿದು ತುಂಡರಿಸಿತು. ಆದರೆ ಉಳಿದ ನಾಲ್ವರು ಕುದುರೆಯನ್ನು ಸೆರೆಹಿಡಿವ ಕಾರ್ಯದಲ್ಲಿ ಯಶಸ್ವಿ ಯಾದರು. ಅವರು ಕುದುರೆಯನ್ನು ಸೆರೆಹಿಡಿದು ತಮ್ಮ ನಗರಕ್ಕೆ ಕೊಂಡೊ ಯ್ದರು.

ಸಂಜೆಯಾಗಲು ರುಸ್ತುಂ ನಿದ್ದೆಯಿಂದ ಎಚ್ಚತ್ತಾಗ ಕುದುರೆ ಕಾಣಿಸ ಲಿಲ್ಲ. ಸತ್ತುಬಿದ್ದ ತಾರ್ತರರನ್ನು ಕಂಡಾಗ ರಕ್ಷನನ್ನು ತಾರ್ತರರು ಸೆರೆಹಿಡಿದು ಒಯ್ದಿರಬಹುದೆಂದು ಅವನಿಗೆ ಖಚಿತವಾಯಿತು. "ನಾನು ನನ್ನ ಲೋಹ ಕವಚ ಮತ್ತು ಆಯುಧಗಳನ್ನು ಹೊತ್ತುಕೊಂಡು ಹೇಗೆ ಹೋಗಲಿ? ತಾರ್ತರರು ನೋಡಿ, ರುಸ್ತುಮನ ರಕ್ಷನನ್ನು ಅವನು ನಿದ್ರಿಸುತ್ತಿರುವಾಗ ಅಪಹರಿಸಿದೆವು, ಎಂದು ಹೀಯಾಳಿಸಲಿಕ್ಕಿಲ್ಲವೇ?" ಎಂದು ರುಸ್ತುಂ ತನ್ನಲ್ಲಿಯೇ ಆಲೋಚಿಸಿದನು. ಅವನು ಅಲ್ಲಿ ಸುಮ್ಮನೆ ಕುಳಿತುಕೊಳ್ಳದೆ, ಕುದುರೆಯ ಗೊರಸಿನ ಹಜ್ಜೆಗಳನ್ನು ಅರಸುತ್ತಾ ಅಲ್ಲಿಂದ ಹೊರಟು ಮುಂದೆ ತೆರಳಿದನು.

ಕೊನೆಗೆ ಅವನು 'ಸುಮೆಂಗ' ಎಂಬ ನಗರವನ್ನು ಸೇರಿದನು. ಸುಮೆಂಗದ ರಾಜನು ತನ್ನ ರಾಜಧಾನಿಗೆ ರುಸ್ತುಂ ಬರುತ್ತಿರುವನೆಂದು ತಿಳಿದು, ತಾನೇ ನಗರದ ಹೊರಬಾಗಿಲಿಗೆ ತೆರಳಿ ಅವನನ್ನು ಎದುರುಗೊಂಡು, ಸತ್ಕರಿಸಿ ಆದರದಿಂದ ಅರಮನೆಗೆ ಕರತಂದನು. ಅವನು ರುಸ್ತುಮನನ್ನು ಉಚಿತ ರೀತಿಯಲ್ಲಿ ಸತ್ಕರಿಸಿ ತನ್ನ ಅತಿಥಿಯಾಗಬೇಕೆಂದು ಬೇಡಿಕೊಂಡನು. ಅವನ ಆಮಂತ್ರಣವನ್ನು ಸ್ವೀಕರಿಸಿ, ಆ ಅರಮನೆಯಲ್ಲಿ ಕೆಲವು ದಿನಗಳನ್ನು ಕಳೆಯಲು ರುಸ್ತುಂ ಒಪ್ಪಿಕೊಂಡನು.

ಒಂದು ದಿನ ಸುಮೆಂಗದ ಪ್ರಭು ತಾನು ಏರ್ಪಡಿಸಿದ ಔತಣಕ್ಕೆ ಆಸ್ಥಾನದ ವೀರರನ್ನೆಲ್ಲಾ ಆಹ್ವಾನಿಸಿದ್ದನು. ಔತಣ ವಿಶೇಷ ಸಂಭ್ರಮದಿಂದ ಜರಗಿತು. ಅವರೆಲ್ಲರೂ ಅಮೃತದಂತಿರುವ ದ್ರಾಕ್ಷಾರಸವನ್ನು ಕುಡಿದು ತಣಿದರು. ಅಪ್ಸರೆಯರನ್ನು ನಾಚಿಸುತ್ತಿದ್ದ ದಿವ್ಯ ಸುಂದರಿಯರು ಮಧುರ ಗೀತಗಳನ್ನು ಹಾಡಿ ಅತಿಥಿಗಳ ಆಲಸ್ಯ ಬೇಸರಿಕೆಗಳನ್ನು ನಿವಾರಿಸಿದರು. ಸುಮೆಂಗದ ಅರಸು ರುಸ್ತುಮನನ್ನು ರಾಜಯೋಗ್ಯವಾದ ಪೀಠದಲ್ಲಿ ಕುಳ್ಳಿರಿಸಿ ಸತ್ಕರಿಸಿದನು.

ಸುಮೆಂಗದ ರಾಜನಿಗೆ ಒಬ್ಬಳು ಕುವರಿಯಿದ್ದಳು. ಅವಳ ಹೆಸರು ತಾಹಮಿನೆಯೆಂದು. ಅವಳು ಬಹು ಚೆಲುವೆ. ಆಕೆಯನ್ನು ಹೋಲುವ ಸುಂದರಿಯರು ತಾರ್ತರ ರಾಜ್ಯದಲ್ಲಿಯೇ ಇರಲಿಲ್ಲ. ಆಕೆ ರುಸ್ತುಮನ ಪರಾಕ್ರಮದ ಕತೆಗಳನ್ನು ಕೇಳಿದ್ದಳು; ಆತನೆಸಗಿದ ಸಾಹಸ ಕಾರ್ಯಗಳನ್ನು ಕೇಳಿ ತಿಳಿದಿದ್ದಳು. ಅವಳ ಹೃದಯ ರುಸ್ತುಮನಿಗೆ ಒಲಿದಿತ್ತು. ಆದರೆ ಅವಳು ತನ್ನ ಅನುರಾಗವನ್ನು ಯಾರಿಗೂ ತಿಳಿಸದೆ ತನ್ನ ಎದೆಯಲ್ಲಿಯೇ ಗೋಪ್ಯವಾಗಿರಿಸಿದ್ದಳು. ಅವಳು ರಸ್ತುಂ ಬೇಟೆಯಾಡಲು ತಾರ್ತರ ರಾಜ್ಯದ ಗಡಿಗೆ ಬರುವನೆಂದು ತಿಳಿದಾಗ ಅವನನ್ನು ಸುಮೆಂಗಕ್ಕೆ ಬರಮಾಡಲು ಅವನ ರಕ್ಷನನ್ನು ಸೆರೆಹಿಡಿದುಕೊಂಡು ಬರಲು ಅವಳೇ ಗೋಪ್ಯವಾಗಿ ತಾರ್ತರ ಯೋಧರನ್ನು ಕಳುಹಿಸಿದ್ದಳು. ಅವರು ಹಿಂದೆ ಹೇಳಿದಂತೆ ರಕ್ಷನನ್ನು ಹಿಡಿದು ಸುಮೆಂಗಕ್ಕೆ ತಂದರು. ತಾಹಮಿನೆಯ ಊಹೆ ನಿಜವಾಯಿತು. ತನ್ನ ಕುದುರೆಯನ್ನು ಪಡೆಯಲೆಂದು ರುಸ್ತುಂ ಸುಮೆಂಗಕ್ಕೆ ಬಂದು ತನ್ನ ತಂದೆಯ ಅತಿಥಿಯಾದುದನ್ನು ಕಂಡು ಆಕೆಗೆ ಅಪಾರ ಹರುಷವೆನಿಸಿತು.

ರುಸ್ತುಂ ಧೀರನಾಗಿದ್ದಂತೆಯೇ ಸದ್ಗುಣ ಸಂಪನ್ನನು. ಅವನು ಶಕ್ತಿಶಾಲಿಯಾಗಿದ್ದಂತೆಯೇ ತಾಹಮಿನೆ ಸುಂದರಿಯಾಗಿದ್ದಳು. ಆಕೆಯ ಮೊಗ

ಪೂರ್ಣಚಂದ್ರನಂತೆ ಪ್ರಕಾಶಮಾನವಾದುದು. ತಾರೆಗಳಂತೆ ಅವಳ ನೇತ್ರ ಗಳು ಕಾಂತಿಯುಕ್ತವಾದವುಗಳು. ಅವಳ ಮೈ ಮಲ್ಲಿಗೆಯ ಬಳ್ಳಿಯಂತೆ ಕೋಮಲವಾದುದು. ಹಣೆಯ ಮೇಲೆ ಬಿದ್ದ ಮುಂಗುರುಳು ಚಂದ್ರಬಿಂಬ ದಲ್ಲಿರುವ ಕಲೆಯನ್ನು ಸ್ಮರಣೆಗೆ ತರುತ್ತಿದ್ದಿತು. ಅವಳ ಹುಬ್ಬುಗಳು ಕಾಮನ ಬಿಲ್ಲನ್ನು ಹೋಲುತ್ತಿದ್ದುವು. ಧವಳದಂತಹ ರಾಜಿ ಮುತ್ತುಗಳ ಕಾಂತಿಯನ್ನು ಧಿಕ್ಕರಿಸುತ್ತಿದ್ದಿತು. ಅವಳನ್ನು ಹೋಲುವ ಗಾಡಿಕಾರ್ತಿ ತಾರ್ತರ ರಾಜ್ಯ ದಲ್ಲಿಯೇ ಇರಲಿಲ್ಲ.

ಒಂದಿರುಳು ಔತಣದ ಸಡಗರಗಳೆಲ್ಲ ಮುಗಿದ ಮೇಲೆ ತಾಹಮಿನೆ ರುಸ್ತುಮನಿದ್ದಲ್ಲಿಗೆ ಬಂದಳು. ಜತೆಯಲ್ಲಿ ಹಣತೆಹಿಡಿದ ದೀಪದ ಮಲ್ಲಿ ಯಿದ್ದಳು. ತಾಹಮಿನೆಯ ಚೆಲುವು ರುಸ್ತುಮನ ಬಗೆಯನ್ನು ಕದಡಿತು. ಅವನು "ಸುಂದರ ಸ್ವಪ್ನದಂತಿರುವ ನೀನು ಯಾರು?" ಎಂದು ಪ್ರಶ್ನಿಸಿದನು. ಈ ಬಗೆಯ ಸೌಂದರ್ಯರಾಶಿ ಭೂಲೋಕದಲ್ಲಿರಬಹುದೆಂಬುದನ್ನು ಅವನ ಮನಸ್ಸು ಒಪ್ಪಲಿಲ್ಲ.

"ನಾನು ಸುಮೆಂಗದ ಅರಗುವರಿ ತಾಹಮಿನೆ." ಮೆದುದನಿಯಲ್ಲಿ ತಾಹಮಿನೆ ಉಸುರಿದಳು. ಅವಳ ದನಿ ವೀಣಾರವವನ್ನು ಧಿಕ್ಕರಿಸುತ್ತಿದ್ದಿತು. "ನೀನು ಲೋಕೈಕವೀರ ರುಸ್ತುಂ ಎಂಬುದನ್ನು ನಾನು ಬಲ್ಲೆ. ನಿನ್ನ ಆಗಮನ ವನ್ನು ನನ್ನ ತಂದೆ ಬಹುಕಾಲದಿಂದ ನಿರೀಕ್ಷಿಸುತ್ತಿದ್ದನು. ನಿನ್ನ ಧೈರ್ಯ ಶೌರ್ಯ ಮತ್ತು ಸ್ಥೈರ್ಯಗಳ ಕತೆಗಳನ್ನು ನಾನು ಕೇಳಿದ್ದೇನೆ. ನಿನ್ನ ಕರವಾಳದ ಹೊಳಪನ್ನು ಕಂಡ ಮಾತ್ರದಿಂದ ಹದ್ದುಗಳು ಸಹ ಹೆದರಿ ದೂರ ಹಾರುತ್ತವೆ. ನಿನ್ನ ನಚ್ಚಿನ ಕುದುರೆ ರಕ್ಷ ಕಳವಾಯಿತೆಂದು ನೀನು ಮರುಗ ಬೇಕಾದುದಿಲ್ಲ. ಆ ಕುದುರೆ ನಿನಗೆ ಮರಳಿ ದೊರೆಯುವುದು. ಸುಮೆಂಗ ರಾಜ್ಯ ಎಂದೆಂದಿಗೂ ತನ್ನ ವಚನವನ್ನು ಕಾಪಾಡುವುದು"

ತಾಹಮಿನೆಯ ಅಪೂರ್ವ ಚೆಲುವು ರುಸ್ತುಮನ ಬಗೆಯನ್ನು ಸೆಳೆ ಯಿತು. ಆಕೆ ತನ್ನ ಮನದನ್ನೆಯಾಗಲು ಯೋಗ್ಯಳೆಂದು ಅವನು ನಿಶ್ಚಯಿಸಿ ದನು. ಅವನು ಕುಮಾರಿಯನ್ನು ತನಗೆ ಕೊಟ್ಟು ಮದುವೆಮಾಡಬೇಕೆಂದು ಸುಮೆಂಗದ ರಾಜನನ್ನು ಕೇಳಿದನು. ಅರಸನು ಮಗಳ ಮನದೊಲವು ಯಾವ ಪರಿಯಿದೆಯೆಂದು ತಿಳಿಯಲು ಅವಳ ಅಭಿಪ್ರಾಯವನ್ನು ಕೇಳಿದನು.

"ಬಹು ವರುಷಗಳ ಹಿಂದೆಯೇ ರುಸ್ತುಮನ ಖ್ಯಾತಿಯನ್ನು ಕೇಳಿ

ಅವನನ್ನಲ್ಲದ, ಬೇರೆ ಯಾರನ್ನೂ ವರಿಸುವುದಿಲ್ಲವೆಂದು ಪಣತೊಟ್ಟಿರುವೆನು. ನನ್ನ ಮನದ ಬಯಕೆಯನ್ನು ಈಡೇರಿಸಲೆಂದು ರುಸ್ತುಮನನ್ನು ಇಲ್ಲಿಗೆ ಬರ ಮಾಡಿದ ದೈವಕ್ಕೆ ನಾನು ಮಣಿವೆನು." ಎಂದು ತಾಹಮಿನೆ ತನ್ನ ಮನದ ಇಂಗಿತವನ್ನು ತಂದೆಗೆ ಸೂಚಿಸಿದಳು.

ಲೋಕೈಕ ವೀರನೆಂದು ನೆಗಳ್ತೆವೆತ್ತ ರುಸ್ತುಮನನ್ನು ವರಿಸಲು ಮಗಳು ಒಪ್ಪಿರುವಳೆಂಬುದನ್ನು ಅರಿತು ಸುಮೆಂಗದ ರಾಜನು ಹರ್ಷಗೊಂಡನು. ಆ ದೇಶದ ಪದ್ಧತಿಗಳಿಗನುಸಾರವಾಗಿ ರುಸ್ತುಂ ಮತ್ತು ತಾಹಮಿನೆಯರ ವಿವಾಹ ಅತ್ಯಂತ ವೈಭವದಿಂದ ಜರಗಿತು. ಅನೇಕ ದಿನಗಳ ಪರ್ಯಂತ ಇಡೀ ಹೊಳಲೇ ನಲವಿನ ಕಡಲಲ್ಲಿ ತೇಲಿತು. ನಗರದ ಆಬಾಲವೃದ್ಧರು ರುಸ್ತುಮನ ಧೈರ್ಯ ಪರಾಕ್ರಮಗಳನ್ನೂ ತಾಹಮಿನೆಯ ಸೌಂದರ್ಯ ಗುಣಾತಿಶಯ ಗಳನ್ನೂ ಹಾಡಿ ಹಿಗ್ಗಿದರು.

ಸುಮೆಂಗದಲ್ಲಿ ಮನದನ್ನೆಯ ಒಡನಾಟದಲ್ಲಿ ರುಸ್ತುಂ ಸುಖಸಂತೋಷ ಗಳನ್ನು ಅನುಭವಿಸುತ್ತಿದ್ದಾಗ ಇರಾನಿನಿಂದ ದೂತನೊಬ್ಬನು ಬಂದು "ಇರಾ ನಿಗೆ ಬರಬೇಕೆಂದು ಚಕ್ರವರ್ತಿಗಳ ಅಪ್ಪಣೆಯಾಗಿದೆ." ಎಂಬ ರಾಜ ಸಂದೇಶ ವನ್ನು ಅವನಿಗೆ ತಿಳಿಸಿದನು. ರಾಜಾಜ್ಞೆಯನ್ನು ಮಾನಿಸಲು ರುಸ್ತುಂ ನಚ್ಚಿನ ಮಡದಿಯನ್ನು ಬಿಟ್ಟು ಅಗಲಬೇಕಾಯಿತು. ಅಗಲುವ ಮುನ್ನ ರುಸ್ತುಂ ಮನದನ್ನೆಯುನ್ನು ಕರೆದು ಸಮಾಧಾನಪಡಿಸಿ ಅವಳ ಕೈಗೊಂದು ಮುದ್ರಿಕಾ ಭರಣವನ್ನು ಕೊಟ್ಟು, ಗರ್ಭಿಣಿಯಾಗಿದ್ದ ಪತ್ನಿಯನ್ನು ಸಂಬೋಧಿಸಿ, "ನೀನು ಹೆಣ್ಣು ಮಗುವನ್ನು ಪಡೆದರೆ ಈ ಮುದ್ರಿಕಾಭರಣವನ್ನು ಅವಳ ಮುಡಿಗೆ ತೊಡಿಸು. ಈ ಆಭರಣ ದೈವಿಕ ಶಕ್ತಿಯುಳ್ಳದು. ಅದು ಕೂಸಿಗೆ ಸಂತೋಷವನ್ನೂ ಗೌರವವನ್ನೂ ಒದಗಿಸುವುದು. ಹುಟ್ಟುವ ಮಗು ಗಂಡಾ ದರೆ, ಈ ಆಭರಣವನ್ನು ಕೂಸಿನ ತೋಳಿಗೆ ಬಂಧಿಸಬೇಕು. ಅದು ಮಗುವಿಗೆ ಅವನ ಮುತ್ತಾನ ಸಾಹಸ ಶಕ್ತಿ ಪರಾಕ್ರಮಗಳನ್ನೂ ಸದ್ಗುಣಗಳನ್ನೂ ಒದಗಿಸುವುದು." ಎಂದು ಹೊರಡಲನುವಾದನು.

ರುಸ್ತುಂ ತನ್ನ ಮಡದಿಯ, ಮಾವನ ಒಪ್ಪಿಗೆ ಪಡೆದು ಕುದುರೆಯನ್ನೇರಿ ಇರಾನಿಗೆ ತೆರಳಿದನು. ಪತಿಯ ಅಗಲಿಕೆ ತಾಹಮಿನೆಯ ಎದೆಯನ್ನು ಕೊರೆಯತೊಡಗಿತು. ಅವಳ ಕಣ್ಣುಗಳು ಕಂಬನಿಯ ಸರಿಯನ್ನು ಕರೆದುವು. ರುಸ್ತುಂ ನೀಡಿದ ಮುದ್ರಿಕಾಭರಣದಲ್ಲಿ ಅವನ ಹೆಸರಿದ್ದಿತು. ಎಲ್‌ಬ್ರೂಜ

ಪರ್ವತದಲ್ಲಿ ಜಾಲನನ್ನು ಕಾಪಾಡಿದ ಸಿಮರಾಜ ಪಕ್ಷಿಯ ಚಿತ್ರವಿದ್ದಿತು. ರುಸ್ತುಮನೂ ಪ್ರಿಯ ಪತ್ನಿಯನ್ನು ಮರೆಯಲಿಲ್ಲ. ಅವಳ ನೆನಪು ಅವನ ಹೃದಯದಲ್ಲಿ ಅಂಕಿತವಾಗಿತ್ತು. ಅವನು ಆಗಾಗ ಅಮೂಲ್ಯ ರತ್ನಾಭರಣ ಗಳನ್ನೂ ದಿವ್ಯಾಂಬರಗಳನ್ನೂ ದೂತರ ಮೂಲಕ ಪ್ರೇಮದ ಗುರುತಾಗಿ, ಉಡುಗೊರೆಯಾಗಿ ಮಡದಿಗೆ ಕಳುಹಿಕೊಡುತ್ತಿದ್ದನು.

## ಹತ್ತು

ತಿಂಗಳು ತುಂಬಲು, ತಾಹಮಿನೆ ಒಂದು ಶುಭದಿನದಲ್ಲಿ ಗಂಡು ಮಗು ವೊಂದನ್ನು ಪ್ರಸವಿಸಿದಳು. ಮಗು ಮುದ್ದು ಮುದ್ದಾಗಿದ್ದಿತು. ದಿನ ಕಳೆ ದಂತೆ ಕೂಸು ಬಳೆಯತೊಡಗಿತು. ತಾಯಿ ಕಂದನ ಮುದ್ದು ಮೊಗ ನೋಡಿ ಪತಿಯ ಅಗಲಿಕೆಯ ಅಳಲನ್ನು ಮರೆಯತೊಡಗಿದಳು. ರುಸ್ತುಂ ಮೊದಲೇ ತಿಳಿಸಿದ್ದಂತೆ ಹಸುಳೆಗೆ 'ಸೊಹ್ರಾಬ'ನೆಂದು ನಾಮಕರಣ ಮಾಡ ಲಾಯಿತು. ಕೂಸಿಗೆ ತಿಂಗಳು ತುಂಬಿದಾಗಲೇ ಅದು ಒಂದು ವರ್ಷದ ಹುಡುಗನಷ್ಟು ಪುಷ್ಟವಾಯಿತು. ಬಾಲಕನ ತೋಳುಗಳು ಉದ್ದವಾದುವು; ಎದೆ ಅಗಲವಾಯಿತು. ಮೊಗ ಬಾಲಸೂರ್ಯನಂತೆ ಬೆಳಗಿತು. ಬಾಲಕನು ನಾಲ್ಕಾರು ವರ್ಷಗಳ ಹರೆಯದವನಾಗಲು, ಮನೆಯೊಳಗಿನ ಮೆತ್ತನೆಯ ಹಾಸಿಗೆಗಳು ಅವನಿಗೆ ಬೇಸರವನ್ನೊದಗಿಸಿದುವು. ಕುಸ್ತಿ, ಬೇಟೆ ಮೊದ ಲಾದ ವೀರ ವಿನೋದಗಳು ಅವನ ಮನವನ್ನು ಸೆಳೆದುವು. ಅವನು ಹತ್ತು ವರ್ಷ ಪ್ರಾಯದವನಾದಾಗ ಸುಮೆಂಗದಲ್ಲಿ ಅತಿ ವೇಗವುಳ್ಳ ಕುದುರೆ ಯನ್ನೇರಿ ಸವಾರಿ ಮಾಡಬಲ್ಲವನಾದನು. ಈ ಬಾಲವೀರನು ಶೂರರಾದ ಜಟ್ಟಿಗಳನ್ನು ಕುಸ್ತಿಯಲ್ಲಿ ಹೊಡೆದನು. ಮಗ ಶೂರನಾಗಿ ಬಳೆವುದನ್ನು ಕಂಡು ತಾಯಿ ತಾಹಮಿನೆಗೆ ಹರುಷವೆನಿಸಿತು. ಮಗನು ಮುಂದೆ ಮಹಾ ವೀರನಾಗುವನೆಂದು ತಾಯಿಯ ಎದೆ ಹೆಮ್ಮೆಯ ಹೂವಾಯಿತು.

ತಾಹಮಿನೆ ಇಲ್ಲಿ ಸಣ್ಣದೊಂದು ತಪ್ಪು ಮಾಡಿದಳು. ಅದಕ್ಕೆ ಮಾತೃ ಪ್ರೇಮವೇ ಕಾರಣ. ಅವಳು ತಾನು ಪಡೆದುದು ಗಂಡು ಕೂಸೆಂಬುದನ್ನು ಅರುಹದೆ, ಜನಿಸಿದುದು ಹೆಣ್ಣು ಮಗುವೆಂದು ಗಂಡನಿಗೆ ಸುಳ್ಳುಸುದ್ದಿಯನ್ನು

ಕಳುಹಿದಳು. ಹೀಗೆ ಅಸತ್ಯ ವಾರ್ತೆಯನ್ನು ಕಳುಹಲು ಕಾರಣವು ಇದ್ದಿತು. ಹುಟ್ಟಿದವನು ಗಂಡೆಂದು ತಿಳಿದರೆ ರುಸ್ತುಂ ಎಳವೆಯಲ್ಲಿಯೇ ಮಗನನ್ನು ಕಲಿಯನ್ನಾಗಿ ಮಾಡಲು ಇರಾನಿಗೆ ಕರೆದೊಯ್ಯುವನೆಂಬ ಭೀತಿ ತಾಯಿಯನ್ನು ಬಾಧಿಸಿತು. ಮಗನನ್ನು ಅಗಲಿ ಬಾಳುವುದು ಆಕೆಗೆ ಅಸದಳವೆನಿಸಿತು. ಆದುದರಿಂದ ಅವಳು ಗಂಡನಿಗೆ ಅಸತ್ಯ ವಾರ್ತೆಯನ್ನು ತಿಳಿಸಿದಳು. ಹೀಗೆ ಸೊಹ್ರಾಬನು ತನ್ನೊಡನೆ ಬಾಳುವಂತೆ ಅವಳು ಪ್ರಯತ್ನಿಸಿದಳು. ಮುಂದೆ ಅದೇ ಮಗನಿಗೆ ಮುಳಿವಾಗುವುದೆಂಬ ಯೋಚನೆ ಅವಳಿಗಿರಲಿಲ್ಲ.

ಸೊಹ್ರಾಬನು ಬಳೆದು ತರುಣನಾದನು. ಆದರೆ ತನ್ನ ತಂದೆ ಯಾರೆಂಬುದು ಅವನಿಗೆ ತಿಳಿಯದು. ಇತರ ಯುವಕರೆಲ್ಲ ತಮ್ಮ ಹಿರಿಯರೊಡನೆ ಬದುಕಿ ಬಾಳುವುದನ್ನು ಕಂಡಾಗ ತನ್ನ ತಂದೆ ಏನಾದನು ಎಂಬ ಜಿಜ್ಞಾಸೆ ಸಹಜವಾಗಿ ಈ ತರುಣನ ಹೃದಯದಲ್ಲಿ ಮೂಡಿತು. ತನ್ನ ತಂದೆ ಯಾರು? ಅವನೆಲ್ಲಿರುವನು? ಅವನೇಕೆ ಇಲ್ಲಿಗೆ ಬರುವುದಿಲ್ಲ?—ಹೀಗೆ ಹತ್ತಾರು ಪ್ರಶ್ನೆಗಳನ್ನು ಕೇಳಿ ಸೊಹ್ರಾಬನು ತಾಯನ್ನು ಪೀಡಿಸತೊಡಗಿದನು. ತನ್ನ ತಂದೆ ಲೋಕ ವಿಖ್ಯಾತ ವೀರ ರುಸ್ತುಂ ಎಂಬುದನ್ನು ತಿಳಿದರೆ ಮಗನೆಲ್ಲಿ ತಂದೆಯನ್ನು ಅರಸಲೆಂದು ತನ್ನನ್ನು ತೊರೆದು ಹೋಗುವನೋ ಎಂಬ ಹೊಸ ಅಂಜಿಕೆ ತಾಯಿಯನ್ನು ಸೋಂಕಿತು. ಇಂದು ನಾಳೆ ಎಂದು ಹೇಳುತ್ತಾ ಅವಳು ದಿನಗಳನ್ನು ದೂಡಿದಳು. ಆದರೆ ಬಹುದಿನಗಳ ತನಕ ಹೀಗೆ ಕಾಲಹರಣ ಗೈವುದು ಆಕೆಗೆ ಶಕ್ಯವೆನಿಸಲಿಲ್ಲ. ಕೊನೆಗೊಂದು ದಿನ ಮಗನ ನಿರ್ಬಂಧವನ್ನು ತಡೆಯಲಾಗಲಿಲ್ಲ. ಇನಿತು ದಿನಗಳ ತನಕ ಅವನಿಂದ ಗೋಪ್ಯವಾಗಿರಿಸಿದ್ದ ಯಥಾರ್ಥವನ್ನು ಅವಳು ಅರುಹಬೇಕಾಗಿ ಬಂತು.

"ನೋಡು ನಿನ್ನ ತಂದೆ ಸಾಮಾನ್ಯ ಪುರುಷನಲ್ಲ." ತಾಹಮಿನೆ ಮಗನನ್ನು ಕರೆದು ಅವನ ತಂದೆ ಯಾರೆಂಬುದನ್ನು ಅರುಹಿದಳು. "ಲೋಕೈಕ ವೀರನೆಂದು ಖ್ಯಾತಿವೆತ್ತ ರಸ್ತುಮನೇ ನಿನ್ನ ತಂದೆ. ದೇವರು ಲೋಕದಲ್ಲಿ ರುಸ್ತುಮನಂತಿರುವ ಇನ್ನೊಬ್ಬ ವೀರನನ್ನು ಮಾತ್ರ ಸೃಷ್ಟಿಸಿದ್ದಾನೆ; ಅವನೇ ನೀನಾಗಿದ್ದೀಯೇ."

ತಾಯಿ ತನಗೆ ರುಸ್ತುಂ ಬರೆದ ಓಲೆಗಳನ್ನು ಮತ್ತು ಕಳುಹಿದ ಅಮೂಲ್ಯ ರತ್ನಾಭರಣಗಳನ್ನು ಮಗನಿಗೆ ತೋರಿಸಿದಳು. ತನ್ನ ತಂದೆ ರುಸ್ತುಂ ಎಂದು ತಿಳಿದಾಗ ಆ ತರುಣನ ಹೃದಯ ಹಿಗ್ಗಿನಿಂದ ಅರಳಿತು. ತನ್ನ ತಂದೆಯು,

ಅಜ್ಜನ ಮತ್ತು ಮುತ್ತಜ್ಜನ ಸಾಹಸದ ಕತೆಗಳು ಅವನ ಮನಸ್ಸನ್ನು ಸೂರೆಗೊಂಡುವು. ತಂದೆಯ ದರ್ಶನ ಮಾಡಬೇಕೆಂಬ ಹೆಬ್ಬಯಕೆ ತರುಣ ವೀರನ ಹೃದಯದಲ್ಲಿ ಅಂಕುರಿಸಿತು. ತಾನು ತಂದೆಯನ್ನು ಹುಡುಕಿಕೊಂಡು ಹೋಗುವೆನೆಂದು ತಾಯಿಗೆ ತಿಳಿಸಿದನು.

"ನೀನು ರುಸ್ತುಮನ ಮಗನೆಂದು ತಾರ್ತರ ರಾಜ ಅಫ್ರಸಿಯಾಬನಿಗೆ ತಿಳಿಯದಿರಲಿ." ತಾಯಿ ಕಂಬನಿಯ ಹೊನಲನ್ನು ಸುರಿಸುತ್ತಾ ಉಸುರಿದಳು. "ರುಸ್ತುಮನಲ್ಲಿರುವ ಹಗೆತನದಿಂದ ರುಸ್ತುಮನ ಮಗನು ನೀನೆಂಬ ಕಾರಣ ಅವನು ನಿನ್ನನ್ನು ಕೊಲ್ಲದಿರನು. ನೀನು ತರುಣನಾಗಿದ್ದೀಯೆ ಎಂಬ ಸಂಗತಿಯನ್ನು ನಿನ್ನ ತಂದೆ ತಿಳಿದರೆ, ನಿನ್ನನ್ನು ತನ್ನ ಸಂಗಡ ಕರೆದುಕೊಂಡು ಹೋಗುವನು. ನೀನು ನನ್ನಿಂದ ಅಗಲಿದೆಯೆಂದರೆ, ನನ್ನ ಬಾಳುವೆಯಲ್ಲಿರುವ ಹರುಷ ಮಾಯವಾಗಿ ದುಃಖದ ಕಾರ್ಮುಗಿಲು ಕವಿಯುವುದು."

"ನನ್ನ ತಂದೆಯನ್ನು ಅರಸಬೇಡವೆಂದು ಹೇಳುವುದು ವೀರಪತ್ನಿಯಾದ ನಿನಗೆ ಉಚಿತವಲ್ಲ. ನಾನು ತಂದೆಯ ಹೆಸರನ್ನು ಎತ್ತಕೂಡದೆಂದು ನೀನು ಹೇಳುವುದು ವ್ಯರ್ಥವೇ ಸರಿ. ಇನ್ನು ತಂದೆಯ ಹಗೆಗಳನ್ನು ಕುರಿತು ಹೇಳುವುದಾದರೆ,—ಅಪ್ಪನ ಪಕ್ಕದಲ್ಲಿ ನಿಂತು ಅವನ ಹಗೆಗಳೊಡನೆ ಹೋರಾಡುವುದು ಮಗನ ಕರ್ತವ್ಯವಾಗಿದೆ. ನಾನು ಅಸಂಖ್ಯಾತ ವೀರರನ್ನು ಕಲೆಹಾಕುವೆನು. ಇರಾನಿನ ಮೇಲೆ ದಂಡೆತ್ತಿ ಹೋಗಿ ಕಾಯಕೋಸ ಚಕ್ರವರ್ತಿಯನ್ನು ಸಿಂಹಾಸನದಿಂದ ಉರುಳಿಸುವೆನು. ತಂದೆಯನ್ನು ಇರಾನಿನ ಮಹಾರಾಜನನ್ನಾಗಿಯೂ, ನಿನ್ನನ್ನು ಮಹಾರಾಣಿಯನ್ನಾಗಿಯೂ ಮಾಡುವೆನು. ಇನಿತು ಕಾರ್ಯವನ್ನು ನಾನು ಸಾಧಿಸಿದೆನೆಂದರೆ, ಅಫ್ರಸಿಯಾಬನು ಗಣನೆಗೆ ಬಾರದ ವ್ಯಕ್ತಿಯಾಗುವನು. ನೇಸರುದಿಸಿದಾಗ ತಾರೆಗಳು ತೇಜೋವಿಹೀನವಾಗುವಂತೆ ಅಫ್ರಸಿಯಾಬನ ದರ್ಪ ಪರಾಕ್ರಮಗಳು ಅಡಗುವುವು. ನನಗೆ ಒಂದು ಉತ್ತಮವಾದ ಕುದುರೆ ಮಾತ್ರ ಬೇಕಾಗಿದೆ." ಎಂದು ವೀರ ವಾಕ್ಯಗಳಿಂದ ತಾಯಿಯನ್ನು ಸಂತಯಿಸಲು ಯತ್ನಿಸಿದನು.

ಮಗನ ಉದ್ಗಾರಗಳನ್ನು ಕೇಳಿ ತಾಯಿ ಶೋಕಪೀಡಿತಳಾದಳು. ಸೊಹ್ರಾಬನು ತನ್ನ ನಿರ್ಧಾರವನ್ನು ಮಾರ್ಪಡಿಸನೆಂಬುದು ಆಕೆಗೆ ತಿಳಿದಿತ್ತು. ಅವಳು ಅಶ್ವಶಾಲೆಯ ಸೇವಕರನ್ನು ಕರೆದು ಮಗನಿಗೆ ಕುದುರೆಗಳನ್ನೆಲ್ಲಾ ತೋರಿಸಬೇಕೆಂದು ಆಣತಿ ಗೈದಳು. ಸೊಹ್ರಾಬನು ಅಶ್ವಶಾಲೆಗೆ ತೆರಳಿ ಅನೇಕ

ಜಾತ್ಯಶ್ವಗಳನ್ನು ಪರೀಕ್ಷಿಸಿದನು. ಆದರೆ ಅವು ಅವನಿಗೆ ಮೆಚ್ಚಿಕೆಯಾಗ ಲಿಲ್ಲ. ಕೊನೆಗೆ ರುಸ್ತುಮನ ರಕ್ಷನಿಗೆ ಹುಟ್ಟಿದ ಕುದುರೆಯೊಂದನ್ನು ಅವನು ಕಂಡುಹಿಡಿದನು. ಅವನು ಈ ಅಶ್ವವನ್ನು ಬಯಲಿಗೆ ತಂದು ಅದರ ಬೆನ್ನ ಮೇಲೇರಿದನು. ಅವನ ಅಜ್ಜನು ಮೊಮ್ಮಗನು ಕುದುರೆಯ ಮೇಲೇರಿ ಈಟಿತಿರುಗಿಸುವುದನ್ನು ಕಂಡಾಗ ಸೊಹ್ರಾಬನು ತಂದೆಯಂತೆಯೆ ತನ್ನ ಪೌರುಷದಿಂದ ಜಗತ್ತನ್ನು ಬೆಳಗಿಸುವನೆಂದು ಸಂತಸ ತಾಳಿದನು. ಅವನು ಗ್ರೀಸ್ ದೇಶದಿಂದ ತನಗೆ ದೊರೆತ ಶಿರಸ್ತ್ರಾಣ ಲೋಹ ಕವಚಗಳನ್ನೂ ಬೇಕಾದಷ್ಟು ಧನವನ್ನೂ ಒಂಟೆ ಕುದುರೆಗಳ ನೆರವಿಯನ್ನೂ ವೀರ ಯೋಧರ ಪಡೆಯೊಂದನ್ನೂ ಸೊಹ್ರಾಬನಿಗೆ ಉಡುಗೊರೆಗಳೆಂದು ಕೊಟ್ಟನು.

ಇರಾನನ್ನು ಆಕ್ರಮಿಸಲು ಸೊಹ್ರಾಬನು ಹಂಚಿಕೆ ಹೂಡಿದ್ದಾನೆಂಬುದು ರುಸ್ತುಮನ ಕಡುಹಗೆಯೂದ ಅಫ್ರಸಿಯಾಬನಿಗೆ ತಿಳಿಯಿತು. ಸೊಹ್ರಾಬ ನನ್ನು ಉಪಯೋಗಿಸಿ ರುಸ್ತುಮನನ್ನು ವಧಿಸಬೇಕೆಂದು ತಾರ್ತರರಾಜ ಅಫ್ರಸಿಯಾಬನು ಸಂಚು ನಡೆಸಿದನು. ಅವನು ತನ್ನ ಪ್ರಧಾನಿಗಳ ಮತ್ತು ಸೇನಾನಾಯಕರ ಸಭೆಯೊಂದನ್ನು ಸೇರಿಸಿ, "ನಾವು ಸೊಹ್ರಾಬ ರುಸ್ತುಮ ರಿಗೆ ಪರಸ್ಪರ ಪರಿಚಯವಾಗದಂತೆ ಮುಂಜಾಗ್ರತೆಯನ್ನು ವಹಿಸಬೇಕು. ರಣರಂಗದಲ್ಲಿ ಅವರೀರ್ವರಿಗೂ ದ್ವಂದ್ವಯುದ್ಧ ನಡೆವಂತೆ ನಾವು ತಂತ್ರ ಹೂಡುವುದು ಅಗತ್ಯವಾಗಿದೆ. ಒಂದುವೇಳೆ ಮಗನೇ ತಂದೆಯನ್ನು ಕೊಂದರೆ ಕಾಲಿಗೆ ನಾಟಿದ ಒಂದು ಮುಳ್ಳನ್ನು ಇನ್ನೊಂದು ಮುಳ್ಳಿನಿಂದ ತೆಗೆದಂತಾಗುವುದು. ಅನಂತರ ಹುಡುಗ ಸೊಹ್ರಾಬನನ್ನು ಸದೆಬಡಿಯು ವುದು ಸುಲಭದ ಕೆಲಸ. ಹಾಗಲ್ಲ, ರುಸ್ತುಮನೇ ಮಗನನ್ನು ಕೊಂದರೆ, ಪುತ್ರ ವಧೆಯ ಭೀಕರತೆ ಆ ಪಿತೃಹೃದಯವನ್ನು ವಿದೀರ್ಣಗೊಳಿಸಿ ಅವನ ಧೈರ್ಯ ಸ್ಥೈರ್ಯಗಳನ್ನು ಶಿಥಿಲಗೊಳಿಸುವುದು." ಎಂದು ನುಡಿದನು.

ಅಫ್ರಸಿಯಾಬನ ಈ ಹಂಚಿಕೆಯನ್ನು ಪ್ರಧಾನಿಗಳು ಮತ್ತು ಸೇನಾನಿ ಗಳು ಒಪ್ಪಿದರು. ತಾರ್ತರ ರಾಜನು ಸೊಹ್ರಾಬನಲ್ಲಿಗೆ ರಾಯಭಾರಿಗಳನ್ನು ಕಳುಹಿಸಿದನು. ಅವನು ರತ್ನಾಭರಣಗಳ ಚೀಲಗಳನ್ನು ಹೇರಿದ ಹತ್ತು ಕುದುರೆ ಮತ್ತು ಹತ್ತು ಒಂಟೆಗಳನ್ನೂ ರತ್ನಖಚಿತ ಕಿರೀಟ ಮತ್ತು ಸಿಂಹಾಸನ ಗಳನ್ನೂ ಸೊಹ್ರಾಬನಿಗೆ ಪಾರಿತೋಷಕಗಳೆಂದು ಕಳುಹಿದನು. ರಾಯಭಾರಿ ಗಳು ಈ ಪಾರಿತೋಷಕಗಳನ್ನೂ ಮತ್ತು ಅಫ್ರಸಿಯಾಬನ ರಾಯಸದೊಲೆ

ಯನ್ನೂ ಸೊಹ್ರಾಬನಿಗೆ ಒಪ್ಪಿಸಿದರು. ಅಫ್ರಸಿಯಾಬನು ಆ ಪತ್ರದಲ್ಲಿ, "ನೀನು ಇರಾನನ್ನು ಗೆಲ್ಲಬೇಕೆಂದು ಮಾಡಿದ ನಿರ್ಧಾರವನ್ನು ಕಂಡು ನನಗೆ ಸಂತೋಷವಾಯಿತು. ನಿನ್ನ ನೆರವಿಗೆ ನನ್ನ ಸೇನೆಗಳೂ ಸೇನಾಪತಿಗಳೂ ಬರುವರು. ನನ್ನ ಸೇನಾನಾಯಕರು ಇರಾನಿನ ರಾಜಮುಕುಟವನ್ನು ನಿನ್ನ ಮಸ್ತಕದ ಮೇಲಿರಿಸಿ ರಾಜ್ಯಾಭಿಷೇಕವನ್ನು ಗೈವರು." ಎಂಬ ಸಂದೇಶವನ್ನು ಕಳುಹಿಸಿದ್ದನು.

ತರುಣ ಸೊಹ್ರಾಬನಿಗೆ ಕಪಟ ತಿಳಿಯದು. ಅವನು ಅಫ್ರಸಿಯಾಬನ ವಚನಗಳಲ್ಲಿ ಪೂರ್ಣ ವಿಶ್ವಾಸವಿರಿಸಿದನು. ಅವನು ಸೇನಾಸಮೇತನಾಗಿ ಇರಾನಿನ ಮೇಲೆ ದಂಡಯಾತ್ರೆಯನ್ನು ಕೈಗೊಂಡನು. ತಾಯಿ ತಾಹಮಿನೆ ತನ್ನ ಸೋದರ 'ಝಿಂದೆ' ಎಂಬಾತನನ್ನು ಮಗನೊಡನೆ ಕಳುಹಿಸಿದಳು. ಸೊಹ್ರಾಬನು ಸುಮೆಂಗದಿಂದ ಹೊರಡುವಾಗ ಅವಳು ಸೋದರನೊಡನೆ "ಸಮಯ ಬಂದಾಗ ನೀನು ನನ್ನ ಕಂದನನ್ನು ಕಾಪಾಡು. ಇರಾನಿನ ಯೋಧರಲ್ಲಿ ರುಸ್ತುಂ ಯಾರೆಂಬುದನ್ನು ತೋರಿಸಿಕೊಡು. ನಿನಗೆ ರುಸ್ತುಮನ ಪರಿಚಯ ಚೆನ್ನಾಗಿ ಇದೆ." ಎಂದು ಹೇಳಿದಳು.

ಸೊಹ್ರಾಬನ ಸೇನೆ ದಂಡಯಾತ್ರೆಯನ್ನು ಕೈಗೊಂಡಿತು. ಹಲವು ದಿನಗಳ ಪಯಣದ ಅನಂತರ ಅದು ಇರಾನಿನ ಗಡಿಯನ್ನು ಸಮೀಪಿಸಿತು. ಅಲ್ಲಿ ಧವಳ ದುರ್ಗ ಎಂಬ ಹೆಸರಿನ ಕೋಟೆಯೊಂದಿತ್ತು. ಈ ದುರ್ಗದ ಪಾಲಕನು ವೃದ್ಧನಾಗಿದ್ದನು. ಆದರೆ ಈ ಕೋಟೆಯಲ್ಲಿದ್ದ ಹೆಜೀರನೆಂಬ ಒಬ್ಬ ವೀರನು "ನನ್ನೊಡನೆ ದ್ವಂದ್ವ ಯುದ್ಧಕ್ಕೆ ಬಾ." ಎಂದು ಸೊಹ್ರಾಬನನ್ನು ಆಹ್ವಾನಿಸಿದನು.

"ನೀನು ಸಿಂಹವನ್ನು ಗೆಲ್ಲಲು ಶಕ್ತನೇ?" ಸೊಹ್ರಾಬನ ಮಾತು.

"ನನ್ನನ್ನು ಸಮೀಪಿಸಿ ನೋಡು. ನಿನ್ನ ತಲೆ ಕಾಯಕೋಸ ಚಕ್ರವರ್ತಿಗೆ ಕಾಣಿಕೆಯಾಗಿ ಪರಿಣಮಿಸಿ ಆತನನ್ನು ಆಹ್ಲಾದಗೊಳಿಸುವುದು. ನಿನ್ನ ಮೂಳೆಗಳು ಈ ಬಯಲಲ್ಲಿ ಚಿರ ವಿಶ್ರಾಂತಿಯನ್ನು ಹೊಂದುವುವು." ಎಂದು ಹೆಜೀರನು ತರುಣ ವೀರನನ್ನು ಮೂದಲಿಸಿದನು.

ಹೆಜೀರನ ಆತ್ಮಸ್ತುತಿಯ ನುಡಿಗಳನ್ನು ಕೇಳಿದಾಗ ಸೊಹ್ರಾಬನ ತುಟಿಗಳ ಮೇಲೆ ಮೃದು ಹಾಸ್ಯ ಲಾಸ್ಯವಾಡಿತು. ಅವನು ಹೆಜೀರನನ್ನು ಸಮೀಪಿಸಿದಾಗ ಅವನು ತನ್ನ ಈಟಿಯಿಂದ ಸೊಹ್ರಾಬನನ್ನು ಅಪ್ಪಳಿಸಿದನು. ಈಟಿ

ಸೊಹ್ರಾಬನ ಚರ್ಮಪಟ್ಟಿಕೆಗೆ ತಗಲಿದರೂ ಅದು ಹರಿದು ತುಂಡಾಗಲಿಲ್ಲ. ನುತ್ತೆ ಸೊಹ್ರಾಬನು ಹಗೆಯ ಮೇಲೆ ಭಲ್ಲೆಯನ್ನೆಸೆದಾಗ ಅದು ಹೆಜೀರನ ಮೈಗೆ ನಾಟಿ ಅವನನ್ನು ನೆಲದ ಮೇಲೆ ಬೀಳಿಸಿತು. ಸೊಹ್ರಾಬನು ಮಿಂಚಿನ ವೇಗದಲ್ಲಿ ಕುದುರೆಯ ಮೇಲಿಂದಿಳಿದು ಹೆಜೀರನ ಎದೆಯ ಮೇಲೆ ಕುಳಿತು ಅವನ ಕೊರಳನ್ನು ತರಿಯಲೆಂದು ಕೃಪಾಣವನ್ನು ಮೇಲೆತ್ತಿದನು. ಆಗ ಹೆಜೀರನು ಪ್ರಾಣಭಯದಿಂದ ತನಗೆ ಜೀವದಾನ ಮಾಡಬೇಕೆಂದು ಯಾಚಿಸಲು, ಕರುಣೆ ತಾಳಿದ ಸೊಹ್ರಾಬನು ಹಗೆಯ ಪ್ರಾಣವನ್ನು ಉಳಿಸಿದನು. ಮತ್ತು ಅವನನ್ನು ಸಂಕಲೆಗಳಲ್ಲಿ ಬಿಗಿದು ಸೆರೆಯಾಳಾಗಿ ರಾಜನ ಕಡೆಗೆ ಕಳುಹಿದನು.

ಆ ದುರ್ಗಪಾಲಕನಿಗೆ ಚೆಲುವೆಯಾದ ಒಬ್ಬಳು ಮಗಳಿದ್ದಳು. ಅವಳ ಹೆಸರು ಫರ್ದ್ ಎಂದು. ಅವಳು ಅನುಪಮ ಸುಂದರಿಯಾಗಿದ್ದಳಲ್ಲದೆ ಧೀರ ಯೋಧನಂತೆ ಧೀರಳೂ ಶಕ್ತಿ ಸಂಪನ್ನಳೂ ಆಗಿದ್ದಳು. ಕೋಟೆಯ ವೀರ ಯೋಧನು ದ್ವಂದ್ವಯುದ್ಧದಲ್ಲಿ ಪರಾಜಿತನಾದುದನ್ನು ಕಂಡು ಅವಳು ಕಾಳಗಕ್ಕೆ ಹೊರಡಲು ಅಣಿಯಾದಳು. ಅವಳು ನೀಳವಾದ ಮುಡಿಯನ್ನು ಬಿಗಿದು ಕಟ್ಟಿದಳು; ಮಸ್ತಕದ ಮೇಲೆ ಶಿರಸ್ತ್ರಾಣವನ್ನು ಧರಿಸಿದಳು; ಮೈಗೆ ಲೋಹ ಕವಚವನ್ನು ತೊಟ್ಟಳು; ಕರದಲ್ಲಿ ಕರವಾಳವನ್ನು ಹಿಡಿದಳು; ಹೆಗಲಿಗೆ ಬಿಲ್ಲನ್ನು ಸಿಕ್ಕಿಸಿದಳು ಮತ್ತು ಕುದುರೆಯನ್ನೇರಿ ರಣರಂಗಕ್ಕೆ ತೆರಳಿದಳು. ಅವಳು ದ್ವಂದ್ವ ಯುದ್ಧಕ್ಕೆ ತಾರ್ತರ ವೀರರನ್ನು ಆಹ್ವಾನಿಸುತ್ತಾ ಮುನ್ನುಗ್ಗಿದಳು. ಆದರೆ ಅವಳ ಸಮರಾಹ್ವಾನಕ್ಕೆ ಅವರಾರೂ ಮಾರುಗೊಡಲಿಲ್ಲ. ಖಡ್ಗವನ್ನು ಜಳಪಿಸುತ್ತಾ ಬರುತ್ತಿರುವ ಅವಳನ್ನು ಕಂಡು ಸೊಹ್ರಾಬನು "ಬೇಟೆಗಾರರ ಭಲ್ಲೆಗೆ ಪ್ರಾಣವನ್ನು ಒಪ್ಪಿಸಲು ಬೇರೊಂದು ಹರಿಣ ಓಡಿ ಬರುತ್ತಿದೆ." ಎಂಬ ಉದ್ಗಾರವೆತ್ತಿದನು. ಆಕೆ ಹೆಣ್ಣೆಂದು ಗೊತ್ತುಹಚ್ಚಲು ಅವನಿಂದ ಸಾಧ್ಯವಾಗಲಿಲ್ಲ. ಈ ನವಯೋಧನನ್ನು ನೆರೆಹಿಡಿಯಲೆಂದು ಸೊಹ್ರಾಬನು ಪಾಶವನ್ನು ತೆಗೆದುಕೊಂಡನು.

ಆದರೆ ಅನಿತರಲ್ಲಿ ಫರ್ದಳು ಬಿಲ್ಲಿಗೆ ಬಾಣವನ್ನು ಹೂಡಿ ಸೊಹ್ರಾಬನನ್ನು ಎಚ್ಚಳು. ಒಂದರ ಅನಂತರ ಇನ್ನೊಂದರಂತೆ ಬರುತ್ತಿದ್ದ ಅಂಬುಗಳಿಂದ ಮೈಯನ್ನು ಸಂರಕ್ಷಿಸಿಕೊಳ್ಳಲು ಅವನು ಪಾಶವನ್ನು ಎಸೆದು ಗುರಾಣಿಯನ್ನು ತನ್ನ ದೇಹಕ್ಕೆ ಅಡ್ಡ ಹಿಡಿಯಬೇಕಾಯಿತು. ಸೊಹ್ರಾಬನ ಎದೆಯಲ್ಲಿ

ಕೋಪಾನಲ ಪ್ರಜ್ವಲಿಸಿತು. ಅವನು ಪ್ರತಿಭಟನ ಮೇಲೆರಗಿದನು. ಆದರೆ ಅವಳು ಭಲ್ಲೆಯನ್ನು ಹಿಡಿದು ಅವನ ಹಾದಿಯನ್ನು ಅಡ್ಡಗಟ್ಟಿ ಭಲ್ಲೆಯನ್ನು ಸೊಹ್ರಾಬನ ಮೇಲೆಸೆದಳು. ಅವನು ಕುದುರೆಯ ಬೆನ್ನ ಮೇಲೆ ಮಲಗಿ ಭಲ್ಲೆಯ ಪ್ರಹಾರವನ್ನು ನಿವಾರಿಸಿಕೊಂಡು ಈಟಿಯನ್ನು ಹಗೆಯ ಮೇಲೆ ಪ್ರಯೋಗಿಸಿದನು. ಈಟಿ ಅವಳು ತೊಟ್ಟಿದ್ದ ಲೋಹಕವಚವನ್ನು ಸೀಳಿತು. ಈ ಪ್ರಹಾರದ ಆಘಾತವನ್ನು ತಾಳಲಾಗದೆ ಅವಳು ಕುದುರೆಯ ಮೇಲಿಂದ ಉರುಳಿದಳು.

ಈ ಆಘಾತದಿಂದ ಆ ವೀರ ಮಹಿಳೆಯ ಅದಟು ಕುಂದಲಿಲ್ಲ. ಅವಳು ಲೋಹಕವಚಕ್ಕೆ ನಾಟಿದ ಈಟಿಯನ್ನು ಕಿತ್ತು ತೆಗೆದಳು. ಇನ್ನೊಮ್ಮೆ ಕುದುರೆಯನ್ನೇರಿ ಆಕೆ ಸೊಹ್ರಾಬನನ್ನು ಎದುರಿಸಲು ಅಣಿಯಾದಳು. ಅವನು ಕೃಪಾಣವನ್ನೆತ್ತಿ ಅವಳ ತಲೆಗೆ ಹೊಡೆದನು. ಅವಳ ಮಸ್ತಕದ ಮೇಲಿದ್ದ ಶಿರಸ್ತ್ರಾಣ ಇಬ್ಭಾಗವಾಯಿತು. ಅವಳು ಬಿಗಿದು ಕಟ್ಟಿದ್ದ ಜಡೆ ಕೆದರಿತು. ವಿರೋಧಿಯ ಕೆದರಿದ ಮುಡಿಯನ್ನು ಕಂಡಾಗ ತನ್ನೊಡನೆ ಹೋರಾಡುತ್ತಿರುವುದು ಗಂಡಲ್ಲ, ಹೆಣ್ಣೆಂಬುದು ಸೊಹ್ರಾಬನಿಗೆ ತಿಳಿಯಿತು. ಅವನು "ಇರಾನಿನ ತರುಣಿಯರು ಇನಿತು ಕೆಚ್ಚಿನಿಂದ ಹೆಣಗುತ್ತಿರುವಾಗ ಯೋಧರ ಪೌರುಷವೆನಿತಿರಬಹುದು!" ಎಂಬ ಉದ್ಗಾರವೆತ್ತಿದನು.

ಸೊಹ್ರಾಬನು ಘರ್ದಾಳನ್ನು ತನ್ನ ಪಾಶದಿಂದ ಬಂಧಿಸಿ, "ಇನ್ನು ನೀನು ತಪ್ಪಿಸಿಕೊಂಡು ಪಾರಾಗಲಾರೆ. ನೀನೇಕೆ ಈ ಕಾಳಗಕ್ಕೆ ಕೈಹಾಕಿದೆ?" ಎಂದು ಪ್ರಶ್ನಿಸಿದನು.

"ಗಾಳಿಯಲ್ಲಿ ಕುಣಿಯುತ್ತಿರುವ ನನ್ನ ಮುಡಿಯನ್ನು ಇತ್ತಂಡದ ವೀರರು ಕಂಡಾಗ ಹೆಣ್ಣನ್ನು ಗೆದ್ದುದರಿಂದ ಸೊಹ್ರಾಬನ ಖ್ಯಾತಿ ಮಸುಳಿತು ಎಂಬ ಉದ್ಗಾರವೆತ್ತುವರು, ನನ್ನನ್ನು ಈ ಪಾಶದ ಉರುಳಿನಿಂದ ಬಿಡಿಸು. ಈ ಕಾಳಗದ ವಿಷಯ ನಾವೀರ್ವರೂ ಪ್ರಸ್ತಾಪಿಸುವುದು ಬೇಡ. ನೀನು ವಶಪಡಿಸಿಕೊಳ್ಳಲು ಬಯಸಿದಾಗ ಈ ಧವಳದುರ್ಗ, ಇಲ್ಲಿನ ಸೈನಿಕರು ಮತ್ತು ಸಮಸ್ತ ಭಂಡಾರಗಳು ನಿನ್ನ ಕೈಸೇರುವುವು." ಎಂದು ಘರ್ದಾಳು ಹೇಳಿದಳು.

"ನೀನು ನಿನ್ನ ಕೋಟೆಯ ಎತ್ತರದ ಗೋಡೆಗಳ ಮೇಲೆ ವಿಶ್ವಾಸವಿರಿಸಿ ನಿನ್ನ ಈ ವಾಗ್ದಾನವನ್ನು ಮುರಿಯಬೇಡ. ನಾನು ಆ ಎತ್ತರದ ಗೋಡೆ

ಗಳನ್ನು ಮುರಿದು ಕೋಟೆಯನ್ನು ನೆಲಸಮ ಮಾಡಬಲ್ಲೆನು." ಸೊಹ್ರಾಬನು ಮಾರ್ನುಡಿದನು.

ಸೊಹ್ರಾಬನು ಘರ್ದಾಳ ವಚನಗಳಲ್ಲಿ ವಿಶ್ವಾಸವಿರಿಸಿ ಅವಳನ್ನು ಪಾಶದ ಉರುಳಿನಿಂದ ವಿಮೋಚಿಸಿದನು. ಅವಳು ಹಿಂತೆರಳಿ ಕೋಟೆಯ ಹೆಬ್ಬಾಗಿ ಲೊಳಗೆ ಪ್ರವೇಶಿಸಿದಳು. ಅವಳ ಅತಿಶಯ ಸೌಂದರ್ಯದಿಂದ ಮೋಹಿತ ನಾದ ಸೊಹ್ರಾಬನು ಅವಳನ್ನು ಹಿಂಬಾಲಿಸಿದನು. ಕೋಟೆಯನ್ನು ಮಗಳು ಪ್ರವೇಶಿಸಲು ದುರ್ಗಪಾಲನು ಅವಳನ್ನು ತನ್ನ ತೋಳುಗಳಲ್ಲಿ ಬಿಗಿದಪ್ಪಿ, "ದೇವರು ದೊಡ್ಡವನು! ಮಹಾಬಲಶಾಲಿಯಾದ ಆ ತರುಣನ ದವಡೆಯಿಂದ ನೀನು ಪಾರಾಗಿ ಬಂದೆಯಲ್ಲ! ನಿನ್ನ ಧೈರ್ಯ ಮತ್ತು ಯುದ್ಧ ಚಾತುರ್ಯ ಗಳು ನಮಗೆ ಹೆಮ್ಮೆಯನ್ನುಂಟುಮಾಡುತ್ತಿವೆ." ಎಂದು ಮಗಳ ಕಲಿತನ ವನ್ನು ಬಾಯಿತುಂಬ ಹೊಗಳಿದನು.

ಅಂದು ಸಂಜೆ ಘರ್ದಾಳು ಕೋಟೆಯ ಗೋಡೆಯ ಮೇಲೇರಿ ನಿಂತು ರಣರಂಗವನ್ನು ನಿಟ್ಟಿಸುತ್ತಿದ್ದಳು. ಅವಳನ್ನು ಕಂಡ ಸೊಹ್ರಾಬನು ಅವಳಿ ದ್ದೆಡೆಗೆ ತೆರಳಿದನು. ಅವಳಿದ್ದೆಡೆಯಲ್ಲಿ ಗೋಡೆಯ ಕೆಳಪಾರ್ಶ್ವದಲ್ಲಿ ಅವನು ನಿಂತನು. ಸೊಹ್ರಾಬನನ್ನು ಕಂಡ ಆ ಚಲುವೆ "ಅಯ್ಯಾ ತಾರ್ತರವೀರ, ನೀನೇಕೆ ಈ ದುರ್ಗಕ್ಕೆ ಮುತ್ತಿಗೆ ಹಾಕಿ ವೃಥಾ ಸಮಯವನ್ನು ಕಳೆಯು ತ್ತಿರುವೆ? ನೀನು ಸುಮಂಗಕ್ಕೆ ಮರಳಿ ಹೋಗಬಾರದೇ?" ಎಂದು ನುಡಿದಳು.

"ನಿಷ್ಠುರ ಹೃದಯದ ಸುಂದರಿಯೇ, ನಾನು ಈ ಕೋಟೆಯ ಗೋಡೆ ಗಳನ್ನೊಡೆದು ದುರ್ಗವನ್ನು ಧ್ವಂಸಮಾಡಿ ನಿನ್ನನ್ನು ಸೆರೆಹಿಡಿಯುವಾಗ ನಿನಗೆ ದುಃಖವಾಗದೇ?"

"ಎಲೆ ಚೆನ್ನಿಗ! ರುಸ್ತುಂ ಇಲ್ಲಿಗೆ ಬರುವ ಮುನ್ನ ನೀನು ಇಲ್ಲಿಂದ ಹೊರಟುಹೋಗು." ಸುಂದರಿಯ ತುಟಿಗಳ ಮೇಲೆ ನಗೆಯಲರೊಂದು ಬಿರಿಯಿತು "ನಿನ್ನಂತಹ ಚೆಲುವನು ರುಸ್ತುಮನೆಂಬ ಹದ್ದಿಗೆ ಬಲಿಯಾ ಗುವುದು ದುಃಖದ ಸಂಗತಿ!"

ಲಜ್ಜೆಯಿಂದ ಸೊಹ್ರಾಬನ ದೇಹವೆಲ್ಲ ಪರಿತಪ್ತವಾಯಿತು. ಮರುದಿನ ಮುಂಜಾನೆಯೊಳಗೆ ಕೋಟೆಯನ್ನು ಧ್ವಂಸಗೊಳಿಸಿ ನೆಲಸಮ ಮಾಡುವೆನೆಂಬ ವೀರಶಪಥವನ್ನು ಅವನು ತೊಟ್ಟು ಪಾಳೆಯಕ್ಕೆ ಹಿಂತಿರುಗಿದನು.

ಸೊಹ್ರಾಬನು ತೊಟ್ಟ ವೀರಪ್ರತಿಜ್ಞೆ ದುರ್ಗಪಾಲಕನಿಗೆ ತಿಳಿಯಿತು. ಅವನ ಎದೆ ಭಯದಿಂದ ತಲ್ಲಣಗೊಂಡಿತು. ಆ ಇರುಳೇ ಅವನು ಕಾಯು ಕೋಸ ಚಕ್ರವರ್ತಿಯ ಆಸ್ಥಾನಕ್ಕೆ ಒಬ್ಬ ದೂತನನ್ನು ವಾಯುವೇಗದಲ್ಲಿ ಕಳುಹಿದನು. ಸೊಹ್ರಾಬನೆಂಬ ಪ್ರಬಲ ವೈರಿ ದುರ್ಗವನ್ನು ಆಕ್ರಮಿಸಿ ರುವನೆಂದೂ, ದುರ್ಗರಕ್ಷಣೆಗೆ ರುಸ್ತುಮನನ್ನು ಕಳುಹಬೇಕೆಂದೂ ಅವನು ಚಕ್ರವರ್ತಿಯನ್ನು ಪ್ರಾರ್ಥಿಸುವ ಒಂದು ಓಲೆಯನ್ನು ರಾಜಸನ್ನಿಧಿಗೆ ಕಳು ಹಿದನು.

ದುರ್ಗಪಾಲಕನು ತನ್ನ ಸೇನಾನಾಯಕರ ಸಭೆಯೊಂದನ್ನು ನೇರಿಸಿ ದನು. ಸೇನಾನಾಯಕರು ಹಗೆಯಿಂದ ದುರ್ಗವನ್ನು ರಕ್ಷಿಸುವುದು ಅಸಾಧ್ಯ ಕಾರ್ಯವೆಂದು ದುರ್ಗದ ಪಾಲಕನಿಗೆ ತಿಳಿಸಿದರು. ಗುಪ್ತ ಮಾರ್ಗದ ಮೂಲಕ ದುರ್ಗವನ್ನು ತೊರೆದು ಹೊರಹೋಗುವುದೇ ಮೇಲೆಂದು ಸಭೆ ನಿರ್ಣಯಿಸಿತು. ಆ ಇರುಳು ದುರ್ಗಪಾಲಕನು ತನ್ನ ಮಗಳು ಮತ್ತು ಯೋಧರೊಡನೆ ಗುಪ್ತಮಾರ್ಗದ ಮೂಲಕ ದುರ್ಗವನ್ನು ತ್ಯಜಿಸಿ, ಸೊಹ್ರಾ ಬನ ವಜ್ರಮುಷ್ಟಿಯಿಂದ ಪಾರಾದನು.

ಆ ಇರುಳು ಸೊಹ್ರಾಬನಿಗೆ ನಿದ್ದೆ ಬರಲಿಲ್ಲ. ಅವನು ಇರುಳೆಲ್ಲ ಚೆಲುವೆ ಯಾದ ಫರ್ದಳನ್ನು ಸ್ಮರಿಸಿದನು. ಅವನ ಎದೆ ಆಕೆಗೆ ಒಲಿದಿದ್ದಿತು.

ಸೊಹ್ರಾಬನು ಮರುದಿನ ಮುಂಜಾನೆ ಧವಳದುರ್ಗವನ್ನು ಆಕ್ರಮಿ ಸಲು ತನ್ನ ಸೇನೆಗೆ ಆಣತಿಗೈಯುತ್ತಿದ್ದಾಗಲೇ ದುರ್ಗದ ಹೆಬ್ಬಾಗಿಲುಗಳು ತೆರೆದಿರುವುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ದುರ್ಗದೊಳಗೆ ಜನರಾರೂ ಇರಲಿಲ್ಲ. ಅವನಿಗೆ ಜನರಹಿತ ದುರ್ಗವನ್ನು ಕಂಡು ಅತ್ಯಂತ ನಿರಾಶೆಯಾಯಿತು. ಒಂದು ಹನಿ ನೆತ್ತರನ್ನು ಸಹ ಹರಿಸದೆ ಧವಳ ದುರ್ಗ ವನ್ನು ಸ್ವಾಧೀನಪಡಿಸಿಕೊಂಡುದು ಅಪೂರ್ವ ವಿಜಯವೆಂದು ಸೇನಾಪತಿಗಳು ಮಾತಾಡಿಕೊಳ್ಳುತ್ತಿದ್ದರು. ಆದರೆ ಫರ್ದಳು ತನಗೆ ಇನ್ನೆಂದಿಗೂ ದೊರೆಯ ಲಾರಳೆಂಬುದನ್ನು ಆಲೋಚಿಸಿದಾಗ ಸೊಹ್ರಾಬನ ನೇತ್ರಗಳಿಂದ ಅಶ್ರುಬಿಂದು ಗಳು ಉದುರಿದುವು.

# ಹನ್ನೊಂದು

ಕಾಯಕೋಸ ಚಕ್ರವರ್ತಿ ದಂತ ಸಿಂಹಾಸನದ ಮೇಲೆ ಕುಳಿತು ಓಲಗ ನಡೆಸುತಿದ್ದಾಗ, ಧವಳ ದುರ್ಗದ ದೂತನು ಆಸ್ಥಾನಕ್ಕೆ ಬಂದು ತಾನು ತಂದ ಓಲೆಯನ್ನು ಒಪ್ಪಿಸಿ ಧವಳ ದುರ್ಗಕ್ಕೆ ಪ್ರಾಪ್ತವಾದ ವಿಪತ್ತನ್ನು ನಿವೇದಿಸಿದನು. ರಾಯಸಿಗನು ಪತ್ರವನ್ನು ಓದಿ ಅದರಲ್ಲಿ ಅಡಕವಾದ ವಿಷಯಗಳನ್ನು ಚಕ್ರ ವರ್ತಿಗೂ ಸಭಿಕರಿಗೂ ಅರಿಕೆ ಮಾಡಿದನು. ರುಸ್ತುಮನ ಗೆಳೆಯರಾದ ಗುದರಾಜ, ಜೀವ, ಫರದಾಬಾದ ಮತ್ತು ತಸ್ಸ ಎಂಬ ನಾಯಕರು ಈ ವಿಷಮ ಸ್ಥಿತಿಯನ್ನು ಕುರಿತು ಗಾಢವಾಗಿ ಆಲೋಚಿಸಿದರು. ಅವರೆಲ್ಲ ರುಸ್ತುಮ ನನ್ನು ಶಿಸ್ತಾನದಿಂದ ಬರಮಾಡಿಕೊಳ್ಳಬೇಕೆಂಬ ಅಭಿಪ್ರಾಯವನ್ನು ರಾಜಸನ್ನಿ ಧಿಯಲ್ಲಿ ಅರಿಕೆ ಮಾಡಿದರು.

ಚಕ್ರವರ್ತಿ ರುಸ್ತುಮನಿಗೆ ಪತ್ರ ಬರೆಯಲು ಅಪ್ಪಣೆಮಾಡಿದನು. ಚಕ್ರವರ್ತಿ ಹೇಳಿದ ಒಕ್ಕಣೆಯಂತೆ ರಾಯಸಿಗನು, "ನಿನ್ನ ಶಕ್ತಿ ಪರಾಕ್ರಮ ಗಳು ಇರಾನಿನ ಸಿಂಹಾಸನದ ಖ್ಯಾತಿಯನ್ನು ಉಳಿಸಿವೆ. ಈಗ ಇನ್ನೊಮ್ಮೆ ತಾರ್ತರರು ನಮ್ಮ ರಾಜ್ಯವನ್ನು ಆಕ್ರಮಿಸಿ ಸೂರೆಗೈಯಲು ಉದ್ಯುಕ್ತರಾಗಿ ದ್ದಾರೆ. ಅವರೆಸಗುತ್ತಿರುವ ಅತ್ಯಾಚಾರಗಳನ್ನು ಪ್ರತಿರೋಧಿಸಲು ನಿನ್ನ ತೋ ಳ್ಬಲ್ಮೆ ಅಗತ್ಯವಾಗಿದೆ. ಆಕ್ರಮಣಗಾರರ ನಾಯಕನು ಒಬ್ಬ ಆಶ್ಚರ್ಯಕರನಾದ ಯುವಕನಾಗಿದ್ದಾನೆ. ಅವನು ನಮ್ಮ ಹೆಜೀರನನ್ನು ಸೆರೆಹಿಡಿದು ಧವಳ ದುರ್ಗವನ್ನು ನೆಲಸಮ ಮಾಡಿದ್ದಾನೆ. ಆನೆಗಳ ಹಿಂಡೊಂದು ಕಬ್ಬಿನ ತೋಟವನ್ನು ಸೂರೆಗೈಯುವಂತೆ ಅವನು ನಮ್ಮ ನಗರಗಳನ್ನೂ ಹಳ್ಳಿಗಳನ್ನೂ ಧ್ವಂಸ ಮಾಡುತ್ತಿದ್ದಾನೆ. ಮಜಂದ್ರದ ರಾಜ ಮತ್ತು ಧವಳಾಸುರರು ನಿನ್ನ ವಿಕ್ರಮವೇನೆಂಬುದನ್ನು ಬಲ್ಲರು. ನಿನ್ನ ಕನಕವರ್ಣದ ಗದೆ ಸೂರ್ಯನನ್ನೂ ಅಂಜಿಸುವುದು. ಅನಾಥವಾದ ನಿನ್ನ ತಾಯ್ನಾಡನ್ನು ಕಾಪಾಡಲು ಬೇಗ ಬಾ. ನಿನ್ನ ಚಕ್ರವರ್ತಿಯ ಪ್ರಾರ್ಥನೆಯನ್ನು ಮನ್ನಿಸು" ಎಂದು ಬರೆದನು.

ಬರೆದ ರಾಯಸಕ್ಕೆ ಚಕ್ರವರ್ತಿ ಸ್ವಹಸ್ತದಿಂದಲೇ ರಾಜಮುದ್ರೆಯ ನ್ನೊತ್ತಿ ಅದನ್ನು ರುಸ್ತುಮನ ಗೆಳೆಯ ಜೀವನ ಕೈಗೆ ಕೊಟ್ಟು, "ನೀನು ಬೇಗ ಹೋಗಿ ಕುದುರೆಗೆ ಜೀನು ಹಾಕು. ತ್ವರೆಯಾಗಿ ಹೋಗೆಂದು ನಾನು ಹೇಳ ಬೇಕಾದುದಿಲ್ಲ. ನೀನು ಶಿಸ್ತಾನದಲ್ಲಿ ರುಸ್ತುಮನ ನಿರ್ಬಂಧಕ್ಕೊಳಗಾಗಿ

ಅವನ ಆತಿಥ್ಯವನ್ನು ಕೈಗೊಳ್ಳುತ್ತಾ ನಿಲ್ಲಬೇಡ. ನೀನು ತಲುಪಿದಾಗ ಅವನು ಗುಲಾಬಿ ಹೂಗಳನ್ನು ಕೀಳುತ್ತಾ ಇದ್ದರೆ ಆ ಹೂಗಳ ಕಂಪನ್ನು ಮೂಸುವುದಕ್ಕು ಸಹ ಅವಕಾಶ ಕೊಡದೆ ಕರೆದುಕೊಂಡು ಬಾ!" ಎಂದು ಆಣತಿಗೈದನು.

ವೀರಯೋಧ ಜೀವನು ರಾಜಾಜ್ಞೆಯಂತೆ ಹಗಲಿರುಳುಗಳೆನ್ನದೆ ಪ್ರಯಾಣ ಮಾಡಿದನು. ರುಸ್ತುಮನ ಅರಮನೆಯನ್ನು ನೇರುವ ತನಕ ಅವನು ನಿದ್ರಿಸಲಿಲ್ಲ; ಉಣಲಿಲ್ಲ ಮತ್ತು ಕುಡಿಯಲಿಲ್ಲ. ಅವನು ಶಿಸ್ತಾನವನ್ನು ಸಮೀಪಿಸಿದಾಗ ರುಸ್ತುಮನ ಬಂಟರು "ಇರಾನಿನಿಂದ ಒಬ್ಬ ಯೋಧನು ಬಿರುಗಾಳಿಯಂತೆ ಅತೀ ತೀವ್ರವಾಗಿ ಬರುತ್ತಿದ್ದಾನೆ" ಎಂಬ ವಾರ್ತೆಯನ್ನು ತಮ್ಮ ಸ್ವಾಮಿಗೆ ಬಿನ್ನವಿಸಿದರು.

ಆ ವೇಳೆಯಲ್ಲಿ ರುಸ್ತುಂ ಆಸ್ಥಾನದಲ್ಲಿ ಕುಳಿತು ಪ್ರಜೆಗಳ ನ್ಯಾಯ ಕೇಳುತ್ತಿದ್ದನು. ಆದರೆ ಇರಾನಿನಿಂದ ರಾಯಭಾರಿ ಬರುತ್ತಿರುವನೆಂಬುದು ತಿಳಿಯಲು, ಅವನು ನ್ಯಾಯಕಾರ್ಯವನ್ನು ನಿಲ್ಲಿಸಿ ತನ್ನ ಪರಿವಾರದವರೊಡನೆ ಜೀವನನ್ನು ಎದುರ್ಗೊಂಡು ಸ್ವಾಗತಿಸಲು ತೆರಳಿದನು. ಜೀವನು ಚಕ್ರವರ್ತಿಯ ರಾಯಸವನ್ನು ರುಸ್ತುಮನ ಕೈಗೆ ಕೊಟ್ಟು ಇರಾನಿಗೆ ಒದಗಿದ ನೂತನ ವಿಪತ್ತನ್ನು ಅರುಹಿದನು.

ಚಕ್ರವರ್ತಿಯ ಪತ್ರವನ್ನು ಓದಿ ರುಸ್ತುಮನಿಗೆ ಸೋಜಿಗವೆನಿಸಿತು. "ಈ ವೀರಯೋಧನು ತಾರ್ತರನಾಗುವುದರ ಬದಲು ಇರಾನಿಯನಾಗಿದ್ದರೆ ಅವನು ಸಾರಿಮನನನ್ನೋ ಅಥವಾ ಸಾನನನನ್ನೋ ಹೋಲುತ್ತಿದ್ದನು. ಅವನು ನನ್ನಂತಿದ್ದಾನೆಂದು ಜೀವನು ಹೇಳುತ್ತಿದ್ದಾನೆ. ಅವನು ನನ್ನ ಮಗನಾಗಲು ಸಾಧ್ಯವಿಲ್ಲ. ಸುಮೆಂಗದಲ್ಲಿ ತಾಹಮಿನೆ ಹೆಣ್ಣು ಕೂಸನ್ನು ಹಡೆದಳು; ಗಂಡು ಕೂಸನ್ನಲ್ಲ." ಎಂದು ತನ್ನಲ್ಲಿಯೇ ಆಲೋಚಿಸಿದನು.

"ಆ ತರುಣ ತಾರ್ತರನ ಹೆಸರು ಕೇಳಿ ನೀವೇಕೆ ಗಾಳಿಗೆ ಅಲುಗುವ ಎಲೆಗಳಂತೆ ಕಂಪಿಸುತ್ತಿರುವಿರಿ? ಈಗ ನಾವೆಲ್ಲರೂ ಔತಣವೇರ್ಪಡಿಸಿ ಹಬ್ಬ ಮಾಡೋಣ. ಯುದ್ಧ ಕಾರ್ಯವನ್ನು ಇನ್ನೊಂದು ದಿನ ಆಲೋಚಿಸೋಣ. ತಾರ್ತರರ ಮೇಲೆ ಪರಾಕ್ರಮದ ಸಮುದ್ರ ಉಕ್ಕಿ ಹರಿದಾಗ ಈ ತರುಣ ತಾರ್ತರನ ಕಲಿತನದ ಕಿಚ್ಚು ತಾನಾಗಿಯೇ ನಂದಿಹೋಗುವುದು." ಎಂದು ರುಸ್ತುಂ ಹೇಳಿದನು.

"ನೋಡು ರುಸ್ತುಂ, ನೀನು ತಡಮಾಡಕೂಡದೆಂದು ರಾಜಾಜ್ಞೆಯಾಗಿದೆ" ಎಂದು ಜೀವನು ತಾನು ಬಂದ ಕಾರ್ಯದ ಗೌರವವನ್ನು ರುಸ್ತುಮನಿಗೆ ಮನದಟ್ಟು ಮಾಡಲು ಪ್ರಯತ್ನಿಸಿದನು.

"ರಾಜನ ಚಿಂತೆ ನಾಳೆಗಿರಲಿ. ಕೆಂಪು ದ್ರಾಕ್ಷಾರಸ ನಮ್ಮನ್ನು ಎದುರು ನೋಡುತ್ತಿದೆ. ಬಾ, ನಮ್ಮ ಬತ್ತಿದ ಗಂಟಲುಗಳನ್ನು ಒದ್ದೆ ಮಾಡೋಣ. ಉಲ್ಲಾಸದ ಗಾನ ನರ್ತನಗಳು ನಮ್ಮ ಮನದ ಬೇಸರಿಕೆಯನ್ನು ಕಳೆಯಲಿ!" ಎಂದು ರುಸ್ತುಂ ನುಡಿದನು.

ಹೀಗೆ ಅವರು ರಾಜಾಜ್ಞೆಯನ್ನು ಅವಜ್ಞೆಗೈದು ನಾಲ್ಕು ದಿನ ಆಮೋದ ಪ್ರಮೋದಗಳನ್ನು ನಡೆಸಿದರು. ಐದನೆಯ ದಿನ ಅವರು ರಾಜದಾನಿಗೆ ಹೊರಡಲು ಅಣಿಯಾದರು.

"ರಾಜನು ನಮ್ಮ ಮೇಲೆ ಕೋಪಗೊಳ್ಳುವನು." ಅಂಜಿಕೆ ತುಂಬಿದ ಹೃದಯದೊಡನೆ ಜೀವನು ಎಚ್ಚರಿಕೆ ಹೇಳಿದನು. "ಯಾವ ಮಾನವನೂ ನನ್ನ ಮೇಲೆ ಮುಳಿಯಲು ಧೈರ್ಯಪಡನು." ರಕ್ಷನ ಬೆನ್ನ ಮೇಲೇರುತ್ತಾ ರುಸ್ತುಂ ಮಾರ್ನುಡಿದನು.

ರುಸ್ತುಂ ಮತ್ತು ಜೀವ ಪಯಣಗೈದು ರಾಜಧಾನಿಯನ್ನು ಸೇರಿದರು. ರುಸ್ತುಂ ರಾಜಮಂದಿರವನ್ನು ಸಮೀಪಿಸಿದಾಗ ತಸ್ಸ ಮತ್ತು ಗುದರಾಜ ಬಂದು ಆ ಮಹಾವೀರನನ್ನು ಎದುರುಗೊಂಡು ರಾಜಸನ್ನಿಧಿಗೆ ಕರೆದು ಕೊಂಡುಹೋದರು. ರುಸ್ತುಂ ಚಕ್ರವರ್ತಿಗೆ ಕಾಣಿಕೆಗಳನ್ನೊಪ್ಪಿಸಿ ಪ್ರಣಾಮಗೈದನು. ಆದರೆ ಕಾಯುಕೋಪ ಚಕ್ರವರ್ತಿ ರುಸ್ತುಂ ತಡಮಾಡಿ ಬಂದನೆಂಬ ಕಾರಣದಿಂದ ಮೋರೆಯನ್ನು ಬೇರೆಕಡೆ ತಿರುಗಿಸಿ, ವೀರನ ಕಾಣಿಕೆ ಮತ್ತು ಪ್ರಣಾಮಗಳನ್ನು ನಿರಾಕರಿಸಿದನು.

"ನನ್ನ ಕಟ್ಟಾಣತಿಯನ್ನು ಮೀರಲು ರುಸ್ತುಂ ಹೇಗೆ ಧೈರ್ಯಗೊಂಡನು? ಈಗ ನನ್ನ ಹಸ್ತದಲ್ಲಿ ಖಡ್ಗವಿರುತ್ತಿದ್ದರೆ, ಅವನ ರುಂಡ ದೇಹದಿಂದ ಬೇರೆಯಾಗಿ ಕಿತ್ತಳೆ ಹಣ್ಣಿನಂತೆ ನೆಲದ ಮೇಲೆ ಹೊರಳುತ್ತಿದ್ದಿತು! ಅವನನ್ನು ಕರೆದೊಯ್ದು ಶೂಲಕ್ಕೇರಿಸಿರಿ!" ಎಂದು ಚಕ್ರವರ್ತಿಯ ಕಟ್ಟಾಜ್ಞೆಯಾಯಿತು.

ಚಕ್ರವರ್ತಿಯ ಕ್ರೋಧವಚನಗಳನ್ನು ಆಲಿಸಿ ಜೀವನು ವಿಸ್ಮಯದಿಂದ ಸ್ತಂಭಿತನಾಗಿ, "ಮಹಾಪ್ರಭು, ತಾವು ರುಸ್ತುಮನ ದೇಹವನ್ನು ಸ್ಪರ್ಶಿಸಲಾರಿರಿ!" ಎಂದು ಹೇಳಿದನು.

ಈ ನುಡಿ ರಾಜನ ಕೋಪವನ್ನು ಇನ್ನಷ್ಟು ಉದ್ರೇಕಗೊಳಿಸಿತು. ಅವನು ತಸ್ಸನ ಕಡೆಗೆ ತಿರುಗಿ "ಈರ್ವರನ್ನೂ ನನ್ನ ಮುಂದಿನಿಂದ ಕರೆದೊಯ್ದು ಶೂಲಕ್ಕೇರಿಸಿರಿ. ಅವರ ಎಲುಬುಗಳನ್ನು ಚೂರ್ಣಮಾಡಿರಿ!" ಎಂದು ಮತ್ತೊಮ್ಮೆ ಗರ್ಜಿಸಿದನು.

ಚಕ್ರವರ್ತಿಯ ಕೋಪದಿಂದ ರುಸ್ತುಮನನ್ನು ಉಳಿಸಲೆಂದು ತಸ್ಸನು ಅವನ ಕೈಹಿಡಿದು ಆಸ್ಥಾನದಿಂದ ಕರೆದೊಯ್ಯಲು ಪ್ರಯತ್ನಿಸಿದನು. ಚಕ್ರವರ್ತಿಯ ನಿಂದನೆ ಧಿಕ್ಕಾರಗಳನ್ನು ಕೇಳಿ ರುಸ್ತುಮನ ನೆತ್ತರು ಮುನಿಸಿನಿಂದ ಬಿಸಿಯೇರಿತು. ಅವನು ತನ್ನ ಕೈಹಿಡಿಯಲು ಬಂದ ತಸ್ಸನಿಗೆ ಭದ್ರಮುಷ್ಟಿಯಿಂದ ಗುದ್ದೊಂದನ್ನು ಗುದ್ದಿದನು. ಈ ಪ್ರಹಾರವನ್ನು ತಡೆಯಲಾಗದೆ ತಸ್ಸನು ನೆಲದಮೇಲೆ ಹೊರಳಿದನು. ರುಸ್ತುಂ ಕೂಡಲೇ ರಕ್ಷನ ಕಡಿವಾಣವನ್ನು ಹಿಡಿದು ರಾಜನ ಕಡೆ ದೃಷ್ಟಿಯನ್ನು ಹೊರಳಿಸಿದನು; ಅವನ ಕಣ್ಣುಗಳು ಕೆಂಡಗಳನ್ನು ಕಾರಿದುವು. ಅವನು "ಎಲೈ ಚಕ್ರವರ್ತಿಯೇ, ನೀನು ಆ ತಾರ್ತರ ತರುಣ ವೀರನನ್ನು ಸೆರೆಹಿಡಿಯಬಲ್ಲೆಯಾದರೆ, ಅವನಿಗೋಸುಗ ನನ್ನನ್ನು ಏರಿಸಲು ಉದ್ದೇಶಿಸಿದ ಆ ಶೂಲವನ್ನು ಉಳಿಸು. ನಿನ್ನಂತಹ ಚಕ್ರವರ್ತಿಗೆ ನಾನೇಕೆ ಅಂಜಿ ತಲೆಬಾಗಿಸಬೇಕು? ನೀನೇ ಹೋಗಿ ಸೊಹ್ರಾಬನ ಮೂಳೆಗಳನ್ನು ನಿನ್ನ ಶಕ್ತಿಹೀನ ಕೈಗಳಿಂದ ಮುರಿಯಲೆತ್ನಿಸು. ನಾನು ಅಪೇಕ್ಷಿಸಿದ್ದರೆ ರಾಜದಂಡವನ್ನು ಕೈಯಲ್ಲಿ ಹಿಡಿದು ಇರಾನಿನ ಚಕ್ರವರ್ತಿಯಾಗುತ್ತಿದ್ದೆ. ಆದರೆ ನನ್ನ ಕುಲದ ಪರಂಪರೆಯಂತೆ ಇರಾನಿನ ಸಿಂಹಾಸನದಲ್ಲಿ ನಿಷ್ಠೆಯುಳ್ಳವನಾಗಿ ಎಲ್‌ಬ್ರೂಜ ಪರ್ವತದಿಂದ ಕಾಯಕೋಬಾದನನ್ನು ಅರಸಿ ತಂದು ಸಿಂಹಾಸನದ ಮೇಲೆ ಕುಳ್ಳಿರಿಸಿದೆ. ಅವನಿಂದ ನಿನಗೆ ಈ ಕಿರೀಟ ದೊರಕಿದೆ. ಅಂದು ಕದನದಲ್ಲಿ ಧವಳಾಸುರನು ವಿಜಯಿಯಾಗಿದ್ದರೆ ನಿನ್ನ ಅರಸುತನವೆಲ್ಲಿರುತ್ತಿತ್ತು?" ಎಂದು ಗರ್ಜಿಸಿದನು.

ಅನಂತರ ರುಸ್ತುಮನ ಕಣ್ಣುಗಳು ಇರಾನಿನ ವೀರ ಯೋಧರ ಕಡೆಗೆ ಹೊರಳಿದುವು. ಅವನು "ಭೀಕರ ವೀರನಾದ ಸೊಹ್ರಾಬನು ಎಷ್ಟು ಖ್ಯಾತಿಗಳಿಸಿರುವನೆಂಬುದನ್ನು ನೀವೇ ತಿಳಿದಿರುವಿರಿ. ಅವನೀಗ ರಾಜಧಾನಿಯ ಮೇಲೆ ದಂಡೆತ್ತಿ ಬರುವನು. ನೀವು ಬುದ್ಧಿವಂತರಾದರೆ ಈ ರಾಜನನ್ನು ತೊರೆದು ನಿಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವಿರಿ." ಎಂದು ನುಡಿದನು.

ರುಸ್ತುಮನ ಕೋಪೋದ್ಗಾರಗಳು ಇರಾನಿನ ಯೋಧರನ್ನು ಕಳವಳಕ್ಕೆ

ಈಡುಮಾಡಿದುವು. ಅವನು ರಕ್ಷನನ್ನೇರಿ ಆಸ್ಥಾನದಿಂದ ದೌಡಾಯಿಸಿದಾಗ ಅವರ ಹೃದಯುಗಳನ್ನು ಚಿಂತೆ ನಿರಾಶೆಗಳು ಕವಿದುವು. ವೀರರಲ್ಲಿ ವೃದ್ಧನೂ ಪ್ರಾಜ್ಞನೂ ಆದ ಗುದರಾಜನು ಕೋಪಾಂಧ ಚಕ್ರವರ್ತಿಯನ್ನು ಮತ್ತು ಅವಮಾನಿತ ವೀರನನ್ನು ಶಾಂತಗೊಳಿಸಿ ಈರ್ವರನ್ನು ಬೆಸೆವ ಕಾರ್ಯಕ್ಕೆ ಕೈಹಚ್ಚಿದನು.

"ತಮ್ಮಿಂದ ಈ ಬಗೆಯ ಅವಮಾನಕ್ಕೆ ಒಳಗಾಗಲು ರುಸ್ತುಮನು ಮಾಡಿದ ಮಹದಪರಾಧವಾದರೂ ಏನು? ಈ ಬಗೆಯ ಕ್ಷುಲ್ಲಕ ಲಘು ವಿಚಾರಗಳು ಚಕ್ರವರ್ತಿಯಾದವನಿಗೆ ಯೋಗ್ಯವಲ್ಲ. ಮಜಂದ್ರದಲ್ಲಿ ತಮ್ಮನ್ನು ಸಲಹಿದ ವೀರಯೋಧನು ಯಾರು? ಎಷ್ಟು ಮಂದಿ ಖೂಳ ರಕ್ಕಸರು ರುಸ್ತುಮನ ಗದೆಯಿಂದ ಪಾರಾಗಿ ಹೋಗಿರುವರು? ಈ ಬಗೆಯ ಸೇವೆಗಳಿಗೆ ಕೊಡುವ ಉಡುಗೊರೆ ಮರಣ ದಂಡನೆಯೇ? ಮುನಿಸು ಮಾತುಗಳಿಂದೂ ಜಾಣ್ಮೆನುಡಿಗಳಾಗವು. ತಾಳ್ಮೆಯಿಂದ ಕೂಡಿದ ಚತುರ ವಚನಗಳು ರಾಜನೆನಿಸಿದವನಿಗೆ ತೊಡವುಗಳಾಗಿವೆ." ಎಂದು ಅರಿಕೆ ಮಾಡಿದನು.

ಈಗ ಚಕ್ರವರ್ತಿಯ ನೆತ್ತಿಗೇರಿದ ಮುನಿಸಿನ ಅಮಲು ಕೆಳಗೆ ಇಳಿಯಿತು. ರುಸ್ತುಮನ ತೋಳ್ಬಲ್ಮೆಯ ನೆರವಿಲ್ಲದಿದ್ದರೆ ತನ್ನ ಸಿಂಹಾಸನ ಸೊಹ್ರಾಬನಿಂದ ಉಳಿಯದು ಎಂಬ ವಿವೇಕ ಅರಸನಲ್ಲಿ ಉದಯಿಸಿತು. ಅವನು "ನಿನ್ನ ಮಾತು ನಿಜ. ಅರಸನಾದವನ ಮಾತು ಔಚಿತ್ಯದ ಅರಿವಿನಿಂದ ಬೆಳಗಬೇಕು. ನೀನು ಹೋಗಿ ರುಸ್ತುಮನನ್ನು ಸಮಾಧಾನಪಡಿಸಿ ಕರೆದುಕೊಂಡು ಬಾ." ಎಂದು ಗುದರಾಜನಿಗೆ ತಿಳಿಸಿದನು.

ಗುದರಾಜ ಇತರ ಯೋಧರೊಡನೆ ಕುದುರೆಯೇರಿ ರುಸ್ತುಮನನ್ನು ಹಿಂಬಾಲಿಸಿದನು. ಅವನು "ನೋಡು ರುಸ್ತುಂ, ಕೋಪಾಕುಲನಾದ ಚಕ್ರವರ್ತಿ ನಿನ್ನ ಮನಸ್ಸನ್ನು ತೀಕ್ಷ್ಣ ವಚನಗಳಿಂದ ನೋಯಿಸಿದುದಕ್ಕೆ ಈಗ ತುಂಬಾ ಪಶ್ಚಾತ್ತಾಪ ಪಡುತ್ತಿದ್ದಾನೆ. ಅವನ ಕೋಪ ನಿನ್ನ ಮನಸ್ಸಿಗೆ ನೋವು ಮಾಡಿತೆಂಬುದು ನಿಜ. ಆದರೆ ಇರಾನ್ ನಿನಗೆ ಯಾವ ಅಪರಾಧವನ್ನೂ ಮಾಡಲಿಲ್ಲ." ಎಂದು ರುಸ್ತುಮನನ್ನು ಸಮಾಧಾನಪಡಿಸಲು ಯತ್ನಿಸಿದನು.

"ನಿನ್ನ ಚಕ್ರವರ್ತಿಯನ್ನಾಗಲೀ ಇರಾನನ್ನಾಗಲೀ ನಾನು ಗಣನೆಗೆ ತರುವುದಿಲ್ಲ. ನಾನೂ ಒಬ್ಬ ಚಕ್ರವರ್ತಿ. ನನ್ನ ಕುದುರೆಯ ಬೆನ್ನೇ ಸಿಂಹಾಸನ; ಕೈಯ ಗದೆಯೇ ರಾಜದಂಡ." ಎಂದು ರುಸ್ತುಂ ಉತ್ತರಿಸಿದನು.

"ನೋಡು, ರುಸ್ತುಮನೇ ತಾರ್ತರ ಸೊಹ್ರಾಬನಿಗೆ ಅಂಜಿದನೆಂದು ಇರಾನಿನ ಯೋಧರು ಅರಿತರೆ ಅವರೆಲ್ಲರೂ ನಾಡನ್ನು ತೊರೆವರು. ಇಷ್ಟರ ವರೆಗೆ ನಿನ್ನಿಂದ ಸಂರಕ್ಷಿತವಾದ ಇರಾನ್ ತಾರ್ತರರ ಬೇಟೆಯ ಸ್ಥಳವಾಗುವುದು."

"ನನ್ನ ಎದೆಯಲ್ಲಿ ಭಯಕ್ಕೆ ಎಡೆಯಿಲ್ಲವೆಂಬುದನ್ನು ನಿನಗಿಂತ ಚೆನ್ನಾಗಿ ಇತರರು ಯಾರೂ ತಿಳಿಯರು. ಚಕ್ರವರ್ತಿ ನನ್ನನ್ನು ಅವಮಾನಿಸಿ ಅಲ್ಲಗಳೆದನೆಂಬುದು ನಿಜ. ಆದರೆ ತಾಯ್ನಾಡು-ಇರಾನಿಗೆ ನನ್ನಂತಹ ವೀರನ ಸೇವೆ ಇನ್ನೂ ಅಗತ್ಯವಾಗಿದೆ."

ರುಸ್ತುಂ ಕುದುರೆಯನ್ನು ತಿರುಗಿಸಿದನು. ಅವನು ಗೆಳೆಯ ಗುದರಾಜನ ಜತೆಯಲ್ಲಿ ರಾಜಾಸ್ಥಾನಕ್ಕೆ ಮರಳಿದನು. ರುಸ್ತುಂ ಮರಳಿ ಬಂದುದನ್ನು ಕಂಡು ಚಕ್ರವರ್ತಿ ಸಂತಸ ತಾಳಿದನು. ಅವನು ಸಿಂಹಾಸನದಿಂದ ಎದ್ದು ರುಸ್ತುಮನನ್ನು ತನ್ನ ತೋಳುಗಳಲ್ಲಿ ಬಿಗಿದಪ್ಪಿದನು. "ಮಹಾವೀರ, ನೀನು ಮುನಿಸುಗೊಂಡು ಆಸ್ಥಾನದಿಂದ ಹಿಂತೆರಳಿದುದನ್ನು ಕಂಡು ನನ್ನ ಬಾಯಲ್ಲಿ ಬೂದಿ ಸುರುವಿದಂತಾಯಿತು. ನನ್ನ ಅಪರಾಧವನ್ನು ಮನ್ನಿಸು. ನೀನು ಆಸ್ಥಾನವನ್ನು ತೊರೆದುದನ್ನು ಕಂಡು ನನ್ನ ಹೃದಯ ಕೃಷ್ಣಪಕ್ಷದ ಚಂದ್ರನಂತೆ ಕ್ಷಯಿಸಿತು. ಈಗ ನನ್ನ ಕೃತಜ್ಞತೆಯನ್ನು ನಿನ್ನ ಮೇಲೆ ಅಭಿಷೇಚಿಸುವೆ" ಎಂದು ಕ್ಷಮಾಯಾಚನೆ ಮಾಡಿದನು.

"ಮಹಾಪ್ರಭೂ, ನಿನ್ನ ಆಜ್ಞೆಯನ್ನು ಈಡೇರಿಸಲು ರುಸ್ತುಂ ಸಿದ್ಧನಾಗಿದ್ದಾನೆ."

"ಈ ದಿನ ಔತಣ ನಿನ್ನನ್ನು ಕಾದಿದೆ. ಇಂದು ಔತಣಮಾಡಿ ನಲಿಯೋಣ. ನಾಳೆ ಸೇನೆಗಳನ್ನು ರಣರಂಗಕ್ಕೆ ನಡೆಸೋಣ."

ಕಾಯಕೋಸ ಚಕ್ರವರ್ತಿ ರುಸ್ತುಮನನ್ನು ಎಲ್ಲಾ ಇರಾನಿ ಸೇನೆಗಳ ಮಹಾದಂಡನಾಯಕನನ್ನಾಗಿ ನಿಯಮಿಸಿದನು. ಅಂದು ಇರುಳು ರುಸ್ತುಂ ಚಕ್ರವರ್ತಿಯೊಡನೆ "ನಾಳೆ ಯುದ್ಧ ಆರಂಭವಾಗುವ ಮುನ್ನ ಆ ತರುಣ ತಾರ್ತರ ವೀರನನ್ನು ಈ ಕಣ್ಣುಗಳಿಂದ ನೋಡಲು ಬಯಸುವೆನು. ಆದುದರಿಂದ ನನ್ನ ಸುಪ್ರಸಿದ್ಧ ಲೋಹಕವಚವನ್ನು ಧರಿಸದೆ, ಪ್ರಚ್ಛನ್ನ ವೇಷದಲ್ಲಿ ಶತ್ರುಪಾಳಯಕ್ಕೆ ಹೋಗಲು ನೀನು ನನ್ನನ್ನು ಅನುಮತಿಸಬೇಕು." ಎಂದು ಅರಿಕೆ ಮಾಡಿದನು.

ಅದಕ್ಕೆ "ಆ ಕೃತ್ಯ ನಿನ್ನಿಂದಲೇ ಸಾಧ್ಯ. ನೀನು ಅಗತ್ಯವಾಗಿ ಹೋಗ ಬಹುದು." ಎಂದು ಚಕ್ರವರ್ತಿ ಅನುಮತಿಸಿದನು.

ರುಸ್ತುಂ ಒಬ್ಬ ತಾರ್ತರನ ವೇಷವನ್ನು ತಾಳಿದನು. ಇರುಳಾಗಿ ಕತ್ತಲೆ ಕವಿಯಲು, ರುಸ್ತುಂ ಯಾರಿಗೂ ತಿಳಿಯದಂತೆ ಶತ್ರುಪಾಳೆಯ ವನ್ನು ಪ್ರವೇಶಿಸಿದನು. ಮೆಲ್ಲನೆ ಹೋಗಿ ಶತ್ರುವಿನ ಗುಡಾರದ ಬಾಗಿಲಲ್ಲಿ ನಿಂತು ಹಣಿಕಿ ನೋಡಿದನು. ಆ ದೃಶ್ಯ ಅವನ ಕಣ್ಣುಗಳನ್ನು ಮಂಕು ಗೊಳಿಸಿತು. ತಾರ್ತರ ಯೋಧರು ಔತಣ ಸಮಾರಂಭಕ್ಕೆಂದು ಸೊಹ್ರಾಬನ ಪಾಳೆಯದಲ್ಲಿ ನೇರಿದ್ದರು. ಅವರ ನಾಯಕನಾದ ತರುಣಯೋಧನನ್ನು ಕಂಡು ರುಸ್ತುಮನ ಹೃದಯದಲ್ಲಿ ಆಶ್ಚರ್ಯ ಮತ್ತು ಮೆಚ್ಚಿಕೆಗಳು ಮೂಡಿದುವು. ಅವನು ಮರೆಯಲ್ಲಿ ನಿಂತು ಆ ತರುಣನನ್ನು ನಿರೀಕ್ಷಿಸತೊಡಗಿದನು.

ಈ ವೇಳೆಯಲ್ಲಿ ಸೊಹ್ರಾಬನ ಮಾವ ಝಿಂಧೆ ಔತಣಸಮಾರಂಭವನ್ನು ಬಿಟ್ಟು ಹೊರಬಂದನು. ಕತ್ತಲಲ್ಲಿ ಅವಿತಿರುವ ರುಸ್ತುಮನ ಭೀಮಕಾಯ ಅವನ ದೃಷ್ಟಿಯಲ್ಲಿ ಬಿದ್ದಿತು. ಅವನು ರುಸ್ತುಂ ಇದ್ದಲ್ಲಿಗೆ ಬಂದು "ಇದಾರು ಬೆಳಕಿಗಂಜಿ ಕತ್ತಲಲ್ಲಿ ನಿಂತಿರುವುದು?" ಎಂದು ಪ್ರಶ್ನಿಸಿದನು. ರುಸ್ತುಂ ಪಡಿದನಿಗೊಡಲಿಲ್ಲ. ಅವನು ತನ್ನ ಬಲಿಷ್ಠ ತೋಳನ್ನೆತ್ತಿ ಝಿಂಧೆಯ ಕೊರಳ ಮೇಲಪ್ಪಳಿಸಿದನು. ಆ ಪ್ರಹಾರ ಝಿಂಧೆಯ ಪ್ರಾಣವನ್ನು ದೇಹದಿಂದ ಬೇರ್ಪಡಿಸಿತು. ಮುಂದೆ ತಾರ್ತರರ ಔತಣಗಳಲ್ಲಾಗಲಿ ಯುದ್ಧಗಳಲ್ಲಾಗಲಿ ಭಾಗವಹಿಸಲು ಝಿಂಧೆ ಇಲ್ಲವಾದನು.

ತಂದೆ ಮಗಂದಿರಿಗೆ ಪರಸ್ಪರ ಪರಿಚಯುವನ್ನೊದಗಿಸಿ ಅವರೀರ್ವರನ್ನೂ ಒಂದುಗೂಡಿಸಬಲ್ಲ ಸೊಹ್ರಾಬನ ಬಂಧು ಇಲ್ಲವಾದನು. ತಾನು ಕಂಡು ಮಾತಾಡಲು ಬಯಸುತ್ತಿದ್ದ ಮೈದುನನ ಹಸ್ತದಿಂದಲೇ ಝಿಂಧೆ ಹತನಾದನು. ವಿಧಿ ಹೂಡಿದ ಭೀಷಣ ಲೀಲಾ ವಿನೋದದಲ್ಲಿ ಲೋಕೈಕ ವೀರ ರುಸ್ತುಂ ಸಹ ಒಂದು ಆಟಿಕೆಯಾಗಿ ಪರಿಣಮಿಸಿದನು.

ಔತಣದಲ್ಲಿ ಮಾವ ಝಿಂಧೆ ಇಲ್ಲದಿರುವುದು ಸೊಹ್ರಾಬನ ದೃಷ್ಟಿಯಲ್ಲಿ ಬಿದ್ದಿತು. ಅವನು ಮಾವನನ್ನು ಅರಸಿ ಕರಕೊಂಡು ಬರಲು ದೂತರನ್ನಟ್ಟಿ ದನು. ಅವರು ಗುಡಾರದ ಬಾಗಿಲಲ್ಲಿ ಸತ್ತುಬಿದ್ದ ಝಿಂಧೆಯನ್ನು ಕಂಡು ಭಯಭರಿತರಾದರು. ಅವರು ಹೋಗಿ ಸೊಹ್ರಾಬನಿಗೆ ನಡೆದ ದುರಂತವನ್ನು ಅರುಹಿದರು. "ನಮ್ಮಲ್ಲಿ ನಾಯಿಗಳೂ ಕುರಿಗಾಹಿಗಳೂ ಇದ್ದಾರೆ. ಆದರೂ

ತೋಳನೊಂದು ಬಂದು ಮಂದೆಯೊಳಗೆ ಪ್ರವೇಶಿಸಿ ಒಂದು ಉತ್ತಮ ಕುರಿ ಯನ್ನು ಹೊಡೆದುಕೊಂಡು ಹೋಯಿತು. ಈ ದಿನ ಇರುಳು ನಮ್ಮ ಖಡ್ಗ ಮತ್ತು ಭಲ್ಲೆಗಳನ್ನು ಮಸೆದು ಹರಿತವಾಗಿರಿಸೋಣ. ಝಿಂಧೆಯ ಮರಣದ ಸಲುವಾಗಿ ನಾಳೆ ನಾವು ಇರಾನಿಯರ ಮೇಲೆ ಸೇಡು ತೀರಿಸಿಕೊಳ್ಳೋಣ." ಎಂದು ಸೊಹ್ರಾಬನು ಗರ್ಜಿಸಿದನು.

ಶತ್ರುಪಾಳೆಯದಿಂದ ರುಸ್ತುಂ ಮರಳಿದನು. ಸೊಹ್ರಾಬನಿಗೆ ತನ್ನ ಮುತ್ತಜ್ಜ ಸಾನನ ದೇಹಾಕಾರದೊಡನೆ ಇರುವ ಸಾಮ್ಯ ರುಸ್ತುಮನ ಚಿತ್ತ ದಲ್ಲಿ ಸುಳಿಯಿತು. ಈ ಸಂಗತಿಯನ್ನೇ ಆಲೋಚಿಸುತ್ತಾ ಇರಾನಿಯರ ಪಾಳೆಯವನ್ನು ಸಮೀಪಿಸಿದಾಗ, ಪಹರೆಗಾರರ ನಾಯಕನಾದ ಜೀವನು ರುಸ್ತುಮನನ್ನು ಹಗೆಯೆಂದು ಭಾವಿಸಿ ಅವನ ಮೇಲೆ ಬೀಳಲುದ್ಯುಕ್ತನಾದನು. ಆದರೆ ರುಸ್ತುಂ ಅವನ ಕೈಹಿಡಿದು ನಿಲ್ಲಿಸಿ, "ತಾರ್ತರ ವೀರರಿಂದ ಪರಿವೇಷ್ಟಿತ ನಾದ ಆ ತರುಣನನ್ನು ಕಂಡಾಗ ಸಾನನು ಮೈದಳೆದು ಬಂದು ಕುಳಿತುದನ್ನು ಕಂಡಂತೆ ನನಗೆ ಭಾಸವಾಯಿತು." ಎಂದು ನುಡಿದನು. ತಾನು ಹಗೆಯ ಪಾಳೆಯವನ್ನು ಸೇರಿದಾಗ ಝಿಂದೆ ಹೇಗೆ ಹತನಾದನೆಂಬುದನ್ನು ರುಸ್ತುಂ ಜೀವನಿಗೆ ವಿವರಿಸಿದನು.

## ಹನ್ನೆರಡು

ಮೂಡಲ ಬಾನಂಚಿನಲ್ಲಿ ಭಾನು ಎದ್ದು ಬಂದು ಆಗಸವನ್ನು ಕವಿದಿದ್ದ ಕತ್ತಲೆಯ ಜವನಿಕೆಯನ್ನು ಓಸರಿಸಿದನು. ಬೆಳಗಾಗಲು ಸೊಹ್ರಾಬನು ಯೋಧ ವೇಷವನ್ನು ಧರಿಸಿ, ಯುದ್ಧ ಪ್ರಾರಂಭಿಸಲು ಉತ್ಸುಕನಾಗಿ ಪಾಶ ವನ್ನು ಕೈಯಲ್ಲಿ ಸುತ್ತಿದನು. ಇನ್ನೊಂದು ಕೈಯಲ್ಲಿ ಭೀಷಣ ಖಡ್ಗವನ್ನು ಹಿಡಿ ದನು. ಯಜಮಾನನ ಯುದ್ಧೋತ್ಸಾಹ ಕುದುರೆಗೂ ಅರಿವಾಯಿತು. ಅದು ಆತುರದಲ್ಲಿ ಗೊರಸಿನಿಂದ ನೆಲದ ಮಣ್ಣನ್ನು ಕೆದಕತೊಡಗಿತು. ಸೊಹ್ರಾಬನು ಕೋಟೆಯ ಶಿಖರವೊಂದನ್ನು ಏರಿದನು. ತಾನಿದ್ದಲ್ಲಿಗೆ ಕೈದಿಯಾದ ಹೆಜೀರ ನನ್ನು ಬರಮಾಡಿಕೊಂಡನು. ಹೆಜೀರನು ಇರಾನಿಯನಾದುದರಿಂದ ರುಸ್ತುಮ

ನನ್ನು ಬಲ್ಲವನಾಗಿದ್ದನು. ಅವನಿಂದ ರುಸ್ತುಂ ಯಾರೆಂಬುದನ್ನು ತಿಳಿಯು ಬೇಕೆಂಬುದು ಸೊಹ್ರಾಬನ ಉದ್ದೇಶವಾಗಿದ್ದಿತು.

ದೂರದಲ್ಲಿ ಇರಾನಿಯರ ಪಾಳೆಯಗಳಿದ್ದುವು. ಗುಡಾರಗಳ ಮೇಲೆ ಬೇರೆ ಬೇರೆ ಪತಾಕೆಗಳಿದ್ದುವು. ಸೊಹ್ರಾಬನು ಹೆಜೀರನನ್ನು ನೋಡಿ, "ನೀನು ಬಿಡುಗಡೆ ಹೊಂದಲು ಬಯಸುವಿಯಾದರೆ, ನನ್ನ ಪ್ರಶ್ನೆಗಳಿಗೆ ನಿಜವಾದ ಉತ್ತರಗಳನ್ನು ಹೇಳಬೇಕು. ನೀನು ಸುಳ್ಳು ಹೇಳಿದರೆ ಕತ್ತಲೆಯ ಕೋಣೆ ಯಲ್ಲಿ ಸಾಯುವ ವರೆಗೆ ನರಳಬೇಕಾಗುವುದು" ಎಂದು ಎಚ್ಚರಿಸಿದನು. "ನಾನು ಅಸತ್ಯವನ್ನೇಕೆ ನುಡಿಯಬೇಕು? ನಿನ್ನ ಅಪೇಕ್ಷೆಗಳಿಗನುಸಾರ ನಿಜವನ್ನೇ ಉತ್ತರಿಸುವೆನು" ಎಂದು ಹೆಜೀರನು ಮರುನುಡಿದನು. "ಹಾಗಾ ದರೆ ಹೇಳು, ಇರಾನಿನ ಮಹಾ ಯೋಧರು ಯಾರು? ಚಕ್ರವರ್ತಿ ಕಾಯ ಕೋಸನೆಲ್ಲಿರುವನು? ತಸ್ಸ, ಗುದರಾಜ ಮತ್ತು ಜೀವರೆಂಬ ನಾಯಕ ರೆಲ್ಲಿದ್ದಾರೆ? ಲೋಕೈಕ ವೀರನೆಂದು ಹೆಸರುಗಳಿಸಿದ ರುಸ್ತುಮನೆಲ್ಲಿದ್ದಾನೆ? ನೀನು ಅವರಾರನ್ನೂ ತಿಳಿದಿಲ್ಲವೇ? ಹೇಳು! ಹೇಳು!!"

"ನೋಡು ಅಲ್ಲಿ ಚಿರತೆಯ ಚರ್ಮದಿಂದ ನಿರ್ಮಿತವಾದ ಗುಡಾರವಿದೆ. ಅದರ ಸುತ್ತಲೂ ಹೊಂಜರಿಗೆಯ ಕಸೂತಿ ಕೆಲಸಗಳಿವೆ. ಮತ್ತು ವಜ್ರದ ಜಾಲರಿಗಳು ತೂಗುತ್ತಿವೆ. ಆ ಗುಡಾರದ ಗೂಟಗಳಿಗೆ ಆನೆಗಳು ಕಟ್ಟಲ್ಪ ಟ್ಟಿವೆ. ಗುಡಾರದ ತುದಿಯಲ್ಲಿ ಸುವರ್ಣ ವರ್ಣದ ಸೂರ್ಯಾಕೃತಿಯುಳ್ಳ ಧ್ವಜ ಹಾರಾಡುತ್ತಿದೆ. ಅದು ಯಾರ ಗುಡಾರ?" ಎಂದು ಸೊಹ್ರಾಬ್ ಪ್ರಶ್ನೆ ಹಾಕಿದನು.

"ಆ ಗುಡಾರದಲ್ಲಿ ಚಕ್ರವರ್ತಿ ಕಾಯಕೋಸ ತನ್ನ ಸಭೆ ಜರಗಿ ಸುತ್ತಾನೆ."

"ಪಕ್ಕದಲ್ಲಿರುವ ಗುಡಾರದ ಮುಂದೆ ವೀರರು ಕಲೆತಿದ್ದಾರೆ. ಆನೆಯ ಚಿತ್ರವುಳ್ಳ ಬಾವುಟ ಗಾಳಿಯಲ್ಲಿ ಹಾರುತ್ತಿದೆ. ಅದು ಯಾರ ಗುಡಾರ?"

"ಆ ಧ್ವಜ ಹಿಂದಿನ ಚಕ್ರವರ್ತಿಯ ಪುತ್ರನಾದ ತಸ್ಸನದು. ಅವನು ಧೀರರೆಲ್ಲರ ಆಪ್ತ ಮಿತ್ರ".

"ನೋಡು, ಸ್ವಲ್ಪ ದೂರದಲ್ಲಿ ನಸುಗೆಂಪು ಬಣ್ಣದ ಗುಡಾರವಿದೆ. ಈಟಿ ಧರಿಸಿದ ವೀರರೆಲ್ಲ ಸಾಲಾಗಿ ನಿಂತಿದ್ದಾರೆ. ಅದು ಯಾರ ಪಾಳೆಯ?"

"ಅದು ಚಕ್ರವರ್ತಿಯ ಪ್ರಧಾನ ಅಮಾತ್ಯ ಗುದರಾಜನದು. ಅವನ

ಗುಡಾರದ ಮೇಲೆ ಸಿಂಹಧ್ವಜ ಹಾರುತ್ತಿದೆ. ವೃದ್ಧನಾದರೂ ಆತನು ಎಳೆಯು ಯುದ್ಧೋತ್ಸಾಹವುಳ್ಳವನು. ಆದುದರಿಂದಲೇ ಹಿಂದುಳಿಯದೆ ಕಾಳಗದಲ್ಲಿ ಭಾಗವಹಿಸಲು ಬಂದಿದ್ದಾನೆ.

"ಅಗೋ ಅಲ್ಲಿ ನೋಡು, ನೀಲಿ ಗುಡಾರವೊಂದು ಕಾಣುತ್ತಿದೆ. ಅದರ ಮೇಲಿರುವ ಧ್ವಜದಲ್ಲಿ ಒಂದು ಮಹಾ ಸರ್ಪದ ಚಿತ್ರವಿದೆ. ಅಲ್ಲಿ ವೀರನೊ ಬ್ಬನು ಸಿಂಹಾಸನದ ಮೇಲೆ ಕುಳಿತಿದ್ದಾನೆ. ಕುಳಿತಿದ್ದರೂ, ಅವನು ಅಲ್ಲಿ ನಿಂತಿರತಕ್ಕ ಇತರ ಯೋಧರಿಗಿಂತಲೂ ಉನ್ನತನು. ಅವನ ತೋಳುಗಳು ಬಲಿಷ್ಠವಾಗಿವೆ. ಅವನು ಹೆಮ್ಮೆಯಿಂದ ತಲೆಯೆತ್ತಿದ್ದಾನೆ. ಅವನ ಕುದುರೆ ಯೆಷ್ಟು ಭಯಾನಕವಾಗಿ ಕೆನೆಯುತ್ತಿದೆ! ಈ ಬಗೆಯ ಯೋಧನನ್ನಾಗಲೀ, ಕುದುರೆಯನ್ನಾಗಲೀ ನಾನು ಕಾಣಲಿಲ್ಲ." ಸೊಹ್ರಾಬ್ ಹೆಜೀರನೊಡನೆ ನುಡಿದನು.

ಹೆಜೀರನು ಒಡನೆ ಮಾರ್ನುಡಿಯಲಿಲ್ಲ. ವಿಧಿಯು ದಾಳ ತನ್ನ ಕೈಯ ಲ್ಲಿದೆಯೆಂಬುದು ಆ ನೆರೆಯಾಳಿಗೆ ಸ್ವಲ್ಪವೂ ಹೊಳೆಯದು. ಇರಾನಿನ ಮಹಾಯೋಧರ ಪೈಕಿ ರುಸ್ತುಮನನ್ನು ಗುರುತಿಸಬಲ್ಲ ಝಿಂದೆ ಇಲ್ಲವಾದುದ ರಿಂದ ತಂದೆ ಮಗಂದಿರನ್ನು ಒಂದುಗೂಡಿಸಲಿರುವ ತಂತು ಈಗ ಈ ಹೆಜೀರ ಮಾತ್ರನಾಗಿದ್ದನೆಂಬುದೂ ಅವನಿಗರಿಯದು.

ಆತ ರುಸ್ತುಂ ಎಂದು ಅರಿತರೆ ಈ ತರುಣವೀರನು ಯಾರಿಗೂ ತಿಳಿಯ ದಂತೆ ರುಸ್ತುಮನ ಗುಡಾರಕ್ಕೆ ಹೋಗಿ ಆತನನ್ನು ಅಪಾಯಕ್ಕೆ ಈಡುಮಾಡ ಬಹುದು ಎಂದು ಹೆಜೀರನು ಹೆದರಿದನು. ಆದುದರಿಂದ ಅವನು "ಆತನು ಚೀನಾ ದೇಶದಿಂದ ಬಂದ ಚಕ್ರವರ್ತಿಯ ಮಿತ್ರನಾದ್ದಾನೆ" ಎಂದು ಸುಳ್ಳುಹೇಳಿದನು.

" ಆದರೆ ಆತನ ಹೆಸರೇನು?"

"ನಾನು ಧವಳದುರ್ಗಕ್ಕೆ ಬಂದ ಅನಂತರ ಆತನು ಬಂದನು. ಆದುದ ರಿಂದ ನನಗೆ ಅವನ ಪರಿಚಯವಿಲ್ಲ."

ರುಸ್ತುಂ, ಅವನ ಲೋಹಕವಚ, ಆಯುಧಗಳು, ಆತನ ನಚ್ಚಿನ ಕುದುರೆ ರಕ್ಷ—ಇವುಗಳ ವಿಷಯ ತಾಯಿ ತಾಹಮಿನೆ ಹೇಳಿದ ಸಂಗತಿಗಳ ನ್ನೆಲ್ಲಾ ಸೊಹ್ರಾಬನು ಸ್ಮರಿಸಿದನು. ತಾಯಿ ಹೇಳಿದ ಲಕ್ಷಣಗಳೆಲ್ಲವೂ ಈ ವೀರನಲ್ಲಿ ಕಂಡುಬಂದುವು. ಆದರೆ ಹೆಜೀರನು ಆತನು ರುಸ್ತುಮನಲ್ಲವೆಂದು ಹೇಳುತ್ತಿರುವನು!

"ನೋಡು ಆ ಕುದುರೆ ಇತರ ಕುದುರೆಗಳಂತಿರದೆ ಬಹು ಎತ್ತರ ವಾಗಿದೆ. ಅದರ ಜೀನಿನ ಮೇಲಿರುವ ಪಾಶ ಇತರ ಪಾಶಾಯುಧಗಳಂತಿರದೆ ವಿಲಕ್ಷಣವಾಗಿದೆ. ಅದು ಯಾರದು?"

"ಅದು ಚೀನಾದೇಶದಿಂದ ಬಂದ ಚಕ್ರವರ್ತಿಯ ಮಿತ್ರನದು. ಆತನ ಹೆಸರು ನನಗೆ ತಿಳಿಯದೆಂದು ಮೊದಲೇ ಹೇಳಿದೆನಲ್ಲ!"

ನಿರಾಶೆಯ ಕತ್ತಲು ಸೊಹ್ರಾಬನ ಹೃದಯವನ್ನು ಕವಿಯಿತು. ಇರಾನಿನ ಸೇನಾಸಾಗರದಲ್ಲಿ ತಾನು ರುಸ್ತುಮನನ್ನು ಗುರುತಿಸಲು ಅಶಕ್ತನಾದೆನಲ್ಲ ಎಂದು ಅವನು ಮರುಗಿದನು. ಅವನು ಇತರ ಇರಾನೀ ಯೋಧರ ಗುಡಾರ ಗಳತ್ತ ದೃಷ್ಟಿಯನ್ನು ಹೊರಳಿಸಿದನು. "ನೋಡು, ರೇಷ್ಮೆ ಬಾವುಟದ ಮೇಲೆ ತೋಳನ ಚಿತ್ರವುಳ್ಳ ಆ ವೀರನು ಯಾರು?"

"ಅವನೇ ಗುದರಾಜನ ಪುತ್ರ ಮತ್ತು ನನ್ನ ಸೋದರ ಜೀವ."

"ದಂತ ಸಿಂಹಾಸನದ ಮೇಲಿರುವಾತನು ಯಾರು?"

"ಆತನೇ ಚಕ್ರವರ್ತಿ ಕಾಯಕೋಸ."

ತಂದೆ ರುಸ್ತುಮನನ್ನು ಅರಸಲು ಸೊಹ್ರಾಬನಿಗೆ ಸಾಧ್ಯವಾಗಲಿಲ್ಲ. ಅವನು ರುಸ್ತುಮನ ಕುದುರೆ ರಕ್ಷನ ಕಡೆ ದೃಷ್ಟಿಹೊರಳಿಸುತ್ತಾ, "ನೀನು ಈ ಸೇನಾ ಸಮೂಹವಲ್ಲಿ ರುಸ್ತುಮನನ್ನು ಕಾಣಲಿಲ್ಲವೇ? ರುಸ್ತುಮನಿಲ್ಲದೆ ಇರಾನ್ ಹಗೆಗಳೊಡನೆ ಹೋಣರಬಲ್ಲುದೆ? ರುಸ್ತುಮನೇ ಇರಾನಿಯರ ಮಹಾನಾಯಕನಾಗುವನೆಂದು ನೀನೇ ಹೇಳುತ್ತಿದ್ದಿಯಲ್ಲ?" ಎಂದು ಹೆಜೀರ ನನ್ನು ಪ್ರಶ್ನಿಸಿದನು.

"ವರ್ಷದ ಈ ವೇಳೆಯಲ್ಲಿ ಜಾಬೂಲಿನಲ್ಲಿ ವಸಂತೋತ್ಸವ ಆರಂಭ ವಾಗುವುದು. ಆ ಉತ್ಸವದಲ್ಲಿ ಭಾಗವಹಿಸಲೆಂದು ರುಸ್ತುಂ ಜಾಬೂಲಿಗೆ ತೆರಳಿರಬಹುದು."

"ನಿನ್ನ ಹಾಳುಹರಟೆಯನ್ನೊಮ್ಮೆ ನಿಲ್ಲಿಸು! ಈ ಸೇನಾಸಮುದ್ರದಲ್ಲಿ ರುಸ್ತುಮನಿದ್ದಾನೆ. ಅವನಾರೆಂದು ನೀನು ನನಗೊಮ್ಮೆ ತೋರಿಸು. ನಿನಗೆ ಉಚಿತ ಪಾರಿತೋಷಕಗಳನ್ನು ಕೊಡುವೆನು."

"ರುಸ್ತುಮನ ಯಶೋಲತೆ ದಿಗಂತದಾಚೆಯ ವರೆಗೆ ಪಸರಿಸಿದೆ. ತಾಯ್ನಾಡಿಗೊದಗಿದ ಪ್ರತಿಯೊಂದು ವಿಪತ್ತನ್ನೂ ಆತ ತೊಡೆದುಹಾಕಿದ್ದಾನೆ. ನೀನು ರಣರಂಗದಲ್ಲಿ ಅವನನ್ನು ಎದುರಿಸಿದುದಾದರೆ, ಆತನು ಹುಲಿಯೋ,

ರಕ್ಕಸನೋ ಅಥವಾ ಭೀಕರ ಸರ್ಪವೋ ಆಗಿ ಮಾರ್ಪಾಡು ಹೊಂದಲೆಂದು ನೀನು ಆಶಿಸಬಹುದು. ಈ ಪ್ರಾಣಿಗಳು ರುಸ್ತುಮನ ಮುಂದೆ ಭೀಕರತೆ ಮತ್ತು ಪರಾಕ್ರಮಗಳಲ್ಲಿ ಸೌಮ್ಯಜೀವಿಗಳಂತೆ ತೋರುವುವು."

"ನೀನೇಕೆ ರುಸ್ತುಮನ ನೆಗಳ್ತೆಯನ್ನು ಬಣ್ಣಿಸುವೆ? ರುಸ್ತುಮನೇನೋ ಕೋಪಾಗ್ನಿಯಿರಬಹುದು. ಆದರೆ ಆ ಕಿಚ್ಚು ಪರ್ವತದ ಗರ್ಭವನ್ನು ಭೇದಿಸಿ ಹೊರಹೊಮ್ಮುವ ಜ್ವಾಲಾಮುಖಿಗೆ ಸಾಟಿಯೆನಿಸದು."

ಈ ಮಾತುಗಳನ್ನು ಕೇಳಿ ಈ ತರುಣವೀರನಿಂದ ರುಸ್ತುಮನಿಗೆ ಅಪಾಯ ಒದಗಬಹುದೆಂಬ ಹೆಜೀರನ ಊಹೆ ಬಲವಾಯಿತು. ತನ್ನನ್ನು ಮಾತಾಡಿಸುವ ಸೊಹ್ರಾಬನು ರುಸ್ತುಮನ ಮಗನೆಂದು ಅವನಿಗೆ ತಿಳಿಯದು. ಆದುದರಿಂದ ಅವನು "ರುಸ್ತುಮನೆಲ್ಲಿದ್ದಾನೆಂದು ನೀನೇಕೆ ನನ್ನನ್ನು ಪ್ರಶ್ನಿಸಿ ಪೀಡಿಸುತ್ತಿರುವೆ? ಅವನು ಬೇಗನೆ ನಿನ್ನನ್ನು ಕಂಡುಹಿಡಿಯುವನು. ನನ್ನ ನುಡಿಗಳಲ್ಲಿ ನಿನಗೆ ನಂಬುಗೆಯಿಲ್ಲದಿದ್ದರೆ ನನ್ನನ್ನು ಕೊಂದುಬಿಡು." ಎಂದು ನುಡಿದನು.

ಚಿಂತಾಕುಲನಾದ ಸೊಹ್ರಾಬನು ಕೋಟೆಯ ಗೋಡೆಯ ಮೇಲಿಂದ ಇಳಿದನು. ತಂದೆಯನ್ನು ಅರಸಲು ಅವನು ಕೈಗೊಂಡ ಹಂಚಿಕೆ ಫಲಪ್ರದ ವಾಗಲಿಲ್ಲ. ಅವನ ಮನಸ್ಸು ಯುದ್ಧದತ್ತ ಹೊರಳಿತು. ಹಿಂದಿನ ರಾತ್ರಿ ಮಾವ ಝಿಂಧೆ ಮಡಿದುದು ಅವನಿಗೆ ನೆನಪಾಯಿತು. ಕಳೆದ ಇರುಳು ತಾನು ಗೈದ ಪ್ರತಿಜ್ಞೆಯನ್ನು ಕಾರ್ಯರೂಪಕ್ಕೆ ತರಲು ಅವನು ನಿರ್ಧರಿಸಿದನು. ಅವನು ಲೋಹಕವಚವನ್ನು ತೊಟ್ಟುಕೊಂಡನು. ಕೈಯಲ್ಲಿ ಕರವಾಳವನ್ನು ಎತ್ತಿಕೊಂಡನು. ನಚ್ಚಿನ ಕುದುರೆಯನ್ನೇರಿ ಹಗೆಗಳ ಪಾಳೆಯದತ್ತ ಸಾಗಿದನು. ಅವನ ಕಣ್ಣುಗಳು ಕಿಡಿಗಳನ್ನು ಕಾರಿದುವು. ಹಗೆಗಳ ನಾಯಕರು ಒಬ್ಬರ ಅನಂತರ ಇನ್ನೊಬ್ಬರು ಸೊಹ್ರಾಬನನ್ನು ಎದುರಿಸದೆ, ಕಾಡಿನಲ್ಲಿ ಸಿಂಹಕ್ಕೆ ಕಾಡುಗತ್ತೆಗಳು ದಾರಿ ಬಿಟ್ಟುಕೊಡುವಂತೆ ದಾರಿ ಬಿಟ್ಟುಕೊಟ್ಟರು. ಸೊಹ್ರಾಬನು ಅವರೆಲ್ಲರನ್ನೂ ದಾಟಿ ಚಕ್ರವರ್ತಿಯ ಗುಡಾರದ ಎದುರಿಗೆ ಹೋದನು.

"ನನ್ನೊಡನೆ ದ್ವಂದ್ವಯುದ್ಧಕ್ಕೆ ಬಾ!" ಎಂದು ಸೊಹ್ರಾಬನು ಚಕ್ರವರ್ತಿಯನ್ನು ದ್ವಂದ್ವಯುದ್ಧಕ್ಕೆ ಆಹ್ವಾನಿಸಿದನು. "ನೀನು ನನ್ನನ್ನು ಕಂಡು ನರಿಯಂತೆ ಗುಡಾರದೊಳಗೆ ಅವಿತುಕೊಂಡಿರುವೆಯಲ್ಲ. ನೀನು ಮತ್ತು ನಿನ್ನ ಯೋಧರು ಈ ದಿನ ಸಾವಿರಗಟ್ಟಲೆ ಮಡಿಯಬೇಕೆಂಬುದು ದೈವ

ಸಂಕಲ್ಪವಾಗಿದೆ. ಜೀವಗಳ್ಳನಾದ ನಿನ್ನ ನೆತ್ತರು ಕುಡಿಯಲು ನನ್ನ ಕೃಪಾಣ ಹಾತೊರೆಯುತ್ತಿದೆ. ನನ್ನ ಮಾವ ಝಿಂಥೆಯ ದೇಹದಿಂದ ಬಸಿದ ನೆತ್ತರಿಗೆ ಪ್ರತಿಯಾಗಿ ಇರಾನಿಯರ ನೆತ್ತರ ಹೊನಲನ್ನು ಹರಿಸಿ ಸೇಡು ತೀರಿಸಿಕೊಳ್ಳ ಬೇಕೆಂದು ಪಣ ತೊಟ್ಟಿರುವೆನು. ನೀನು ನಿನ್ನ ಪ್ರಾಣವನ್ನೇ ಋಣವಾಗಿ ಇತ್ತ ಹೊರತು ನನ್ನ ದ್ವೇಷಾಗ್ನಿ ಶಾಂತವಾಗದು. ನಿನಗೊಬ್ಬ ಮಹಾವೀರ ನಿಲ್ಲವೇ? ತಸ್ಸ, ಜೀವ ಮತ್ತು ಗುದರಾಜರೆಂಬ ವೀರರೆಲ್ಲಿ? ಅಜೇಯ ವೀರ ನೆಂದು ಖ್ಯಾತಿವೆತ್ತ ರುಸ್ತುಮನೆಲ್ಲಿ?"

ಸೊಹ್ರಾಬನ ಸಮರಾಹ್ವಾನಕ್ಕೆ ಮಾರುಗೊಡಲು ಕಾಯಕೋಸ ಚಕ್ರ ವರ್ತಿಯಾಗಲೀ ಇತರ ವೀರರಾಗಲಿ ಧೈರ್ಯಪಡಲಿಲ್ಲ. ಭೀಮಬಲನಾದ ಸೊಹ್ರಾಬ ಕೋಪೋದ್ರಿಕ್ತನಾಗಿ ಚಕ್ರವರ್ತಿಯನ್ನು ಮನಬಂದಂತೆ ಹಳಿದನು. ಚಕ್ರವರ್ತಿಯ ರತ್ನಖಚಿತ ಗುಡಾರ ಸೊಹ್ರಾಬನ ಪಾದತಾಡನೆಗೆ ಮರ ವೊಂದು ಬಿರುಗಾಳಿಗೆ ಉಡಿದುಬೀಳುವಂತೆ ಮುರಿದುಬಿದ್ದಿತು.

ತನ್ನ ಜೀವನಯಾತ್ರೆ ಕೊನೆಗೊಳ್ಳಲಿದೆ ಎಂದು ಕಾಯಕೋಸ ಚಕ್ರ ವರ್ತಿಗೆ ಅನಿಸಿತು. ಅವನು ಸೊಹ್ರಾಬನ ಮೂದಲಿಕೆಯ ಹೊನಲಲ್ಲಿ ಮುಳುಗಿ ಅವಮಾನಿತನಾಗಿದ್ದನು. ಅವನ ಅಂಗರಕ್ಷಕರು ವಿದ್ಯುತ್ಪಾತ ಹೊಂದಿದವರಂತೆ ಸ್ತಂಭಿತರಾಗಿ ಹೋದರು. ಈ ಹಗೆಯಿಂದ ತನ್ನ ಪ್ರಾಣ ಉಳಿಸಿಕೊಳ್ಳುವ ಬಗೆ ಹೇಗೆಂದು ಚಕ್ರವರ್ತಿಗೆ ಚಿಂತೆಯಾಯಿತು. ಕೊನೆಗೆ ಅವನು ರುಸ್ತುಮನ ಗುಡಾರಕ್ಕೆ ಒಬ್ಬ ದೂತನನ್ನು ಕಳುಹಿದನು. ಅವನು "ವಿಜೇತ ತಾರ್ತರ ತರುಣನ ಮುಂದೆ ನನ್ನ ವೀರರೆಲ್ಲರೂ ಭಯದಿಂದ ಬಿಳು ಪೇರಿದರು. ಉದುರಿದ ಹೂಗಳಂತೆ ಅವರ ಮೊಗಗಳು ಬಾಡಿಹೋಗಿವೆ. ಅವರು ಯಾರೂ ಸೊಹ್ರಾಬನ ಸಂಗಡ ಯುದ್ಧಮಾಡಲು ಧೈರ್ಯಪಡರು" ಎಂಬ ಸಂದೇಶವನ್ನು ರುಸ್ತುಮನಿಗೆ ಕಳುಹಿದನು.

ಆ ದಿನ ಹಗೆಗೆ ಕಾಳಗ ಕೊಡಲು ರುಸ್ತುಂ ಉದ್ದೇಶಿಸಿರಲಿಲ್ಲ. ಆದುದ ರಿಂದ ಅವನು "ಮೆದುಳಿಲ್ಲದ ಬರಿದಲೆಯ ಕಾಯಕೋಸನು ಹೋದೆಡೆ ಗಳಲ್ಲೆಲ್ಲಾ ದುರದೃಷ್ಟಗಳು ಹಿಂಬಾಲಿಸುತ್ತವೆ. ಇತರ ಚಕ್ರವರ್ತಿಗಳು ನನ್ನನ್ನು ಮಂತ್ರಾಲೋಚನೆಗೆ ಮತ್ತು ಔತಣಗಳಿಗೆ ಆಹ್ವಾನಿಸುತ್ತಿದ್ದರು. ಆದರೆ ಈ ಕಾಯಕೋಸನು ಮಾತ್ರ ಯುದ್ಧ ಒದಗಿದಾಗ ನನ್ನನ್ನು ಕರೆಸುತ್ತಾನೆ. ಈ ದಿನ ನಾನು ಯುದ್ಧಮಾಡಲಾರೆ. ಬೇರೆ ವೀರರು ತಾರ್ತರ

ತರುಣನನ್ನು ಎದುರಿಸಲಿ. ಆ ವೀರರು ರಣರಂಗದಲ್ಲಿ ಪತನಹೊಂದಿದರೆ ಅವರ ಸ್ಥಾನದಲ್ಲಿ ನಾನು ತಾರ್ತರನಿಗೆ ಯುದ್ಧಕೊಡುವೆನು" ಎಂಬ ಉತ್ತರ ವನ್ನು ಚಕ್ರವರ್ತಿಗೆ ಕಳುಹಿದನು.

ಚಕ್ರವರ್ತಿ ರುಸ್ತುಮನನ್ನು ಕರಕೊಂಡು ಬರಲು ತಸ್ಸನನ್ನು ಕಳುಹಿ ದನು. ಅವನು ರುಸ್ತುಮನ ಪಾಳೆಯಕ್ಕೆ ಬಂದು ಸೊಹ್ರಾಬನೆಸಗಿದ ಕೇಡು ಗಳನ್ನೆಲ್ಲಾ ಬಣ್ಣಿಸಿದನು. ರುಸ್ತುಂ ಪಾಳೆಯದ ಹೊರಗೆ ಬಂದು ಇಣಿಕಿ ನೋಡಿದಾಗ ಭಯಭರಿತವಾದ ಇರಾನಿನ ಸೇನೆ ಓಡುತ್ತಿದ್ದಿತು. ರುಸ್ತುಂ ರಕ್ಷನಿಗೆ ಜೀನು ಹಾಕಿದನು; ಜೀನಿನ ಮೇಲುಗಡೆ ತನ್ನ ಭೀಮಗದೆಯನ್ನಿರಿಸಿ ದನು. ಕುದುರೆಗೆ ಚರ್ಮಕವಚನ್ನು ತೊಡಿಸಿ ಕನೆಕಟ್ಟಿದನು.

ರುಸ್ತುಂ ವ್ಯಾಘ್ರ ಚರ್ಮದ ಕವಚವನ್ನು ತೊಟ್ಟುಕೊಂಡನು. ಅವನು ಅಗಲವಾದ ತನ್ನ ಎದೆಗೆ ಲೋಹ ರಕ್ಷೆಗಳನ್ನು ಬಿಗಿದನು. ಸೊಂಟಕ್ಕೆ ಚಕ್ರ ವರ್ತಿ ಉಡುಗೊರೆ ಕೊಟ್ಟಿದ್ದ ರತ್ನಖಚಿತ ಪಟ್ಟಿಯನ್ನು ಬಿಗಿದನು. ಅವನು ರಕ್ಷನ ಬೆನ್ನ ಮೇಲೇರಿ ಹಗೆಯಿದ್ದೆಡೆಗೆ ಧಾವಿಸಿದನು. ಇತರ ಯೋಧರು ರುಸ್ತುಮನ ನಾಗಧ್ವಜವನ್ನು ಎತ್ತಿಹಿಡಿದು ಅವನನ್ನು ಹಿಂಬಾಲಿಸಿದರು.

ರುಸ್ತುಂ ಸೊಹ್ರಾಬನನ್ನು ಸಮೀಪಿಸಿ ತರುಣ ವೀರನನ್ನೊಮ್ಮೆ ನಿಟ್ಟಿಸಿ ನೋಡಿದನು. ಹಗೆಯ ಸುಂದರ ವಿಶಾಲ ವಕ್ಷ ಮತ್ತು ತೋಳುಗಳು ರುಸ್ತುಮನ ಮನಸ್ಸಿನಲ್ಲಿ ಅಜ್ಜ ಸಾಮನ ನೆನವನ್ನು ಮೂಡಿಸಿದುವು. ಅವನ ಹೃದಯಾಂತರಾಳದಲ್ಲಿ ಸೊಹ್ರಾಬನ ಬಗ್ಗೆ ಅನಿರ್ವಚನೀಯ ಮಮತೆ ಮೂಡಿತು. ಅವನು "ನಾನಿದ್ದಲ್ಲಿಗೆ ಬಾ ನನ್ನ ಸೈನಿಕರನ್ನೆಲ್ಲಾ ದೂರ ವಿರಿಸಿ, ನಿನ್ನನ್ನು ಏಕಾಂಗಿಯಾಗಿ ಎದುರುಗೊಳ್ಳುವೆನು." ಎಂದು ಸೊಹ್ರಾ ಬನಿಗೆ ಹೇಳಿದನು.

ಸೊಹ್ರಾಬನು ಮುಂದೆ ಬಂದು ಸಂತೋಷದಿಂದ "ನಾವಿಬ್ಬರೂ ಯುದ್ಧವೆಸಗೋಣ. ಇತ್ತಂಡದ ವೀರರು ನಮ್ಮ ನೆರವಿಗೆ ಬಾರದೆ ಕಾಳಗ ವನ್ನು ನೋಡುತ್ತಿರಲಿ. ನೀನು ಉನ್ನತ ಶರೀರನೂ ಧೈರ್ಯಶಾಲಿಯೂ ಆಗಿದ್ದೀಯೆ. ಆದರೆ ನಿನ್ನ ತಲೆಯಮೇಲೆ ಪ್ರಾಯದ ಹೊರೆಯಿದೆ. ಈ ಕಾಳಗದಲ್ಲಿ ನಾನು ಗೆಲುವು ಪಡೆವೆನು." ಎಂದು ಉತ್ತರಿಸಿದನು.

ದಯೆಯ ಬೆಳಕು ರುಸ್ತುಮನ ಕಣ್ಣುಗಳಿಂದ ಹೊರಚೆಲ್ಲಿತು. "ನೀನೇಕೆ ಹೆಗ್ಗಳಿಕೆಯನ್ನು ಕೊಚ್ಚುತ್ತಿರುವೆ?" ಅವನು ಸೊಹ್ರಾಬನ ಸುಂದರಾಕೃತಿ

ಯನ್ನು ನಿಟ್ಟಿಸುತ್ತಾ ಹೇಳಿದನು. "ನೀನೆಷ್ಟು ಯುದ್ಧರಂಗಗಳನ್ನು ನೋಡಿ ರುವೆ? ನಾನು ವೃದ್ಧಯೋಧನೆಂಬುದು ನಿಜ. ಆದರೆ ಯುದ್ಧ ವಿದ್ಯೆಯಲ್ಲಿ ನುರಿತ ಪರಿಣತನು ನಾನು. ಧವಳಾಸುರ ಮತ್ತಿತರ ದಾನವರು ನನ್ನ ಖಡ್ಗಕ್ಕೆ ಆಹಾರವಾದರು. ಯಾವ ಜೀವಿಯೂ ನನ್ನೊಡನೆ ಸೆಣಸಿ ಬದುಕಲಾರದು. ನೆಲವು ಶೈತ್ಯದಿಂದ ಕೋಡುವುದು. ಆದರೆ ಬಾಳುವೆ ಮಧುರವಾದುದು; ನಲಿವಿನ ಆಗರವೆನಿಸಿದುದು. ಯುವಕನೂ ಕೋಮಲಾಂಗನೂ ಆದ ನೀನು ಮಸಣದ ಹಾದಿಯನ್ನೇಕೆ ಅರಸುತ್ತಿರುವೆ? ನಿನ್ನಂತೆ ಚೆನ್ನಿಗನೂ ಕಲಿಯೂ ಆದ ತರುಣನು ಇರಾನಿನ ದಂಡಿನಲ್ಲಿ ಇಲ್ಲ. ನೀನೇಕೆ ಯುದ್ಧದಲ್ಲಿ ಮಡಿಯಲು ಬಯಸುವೆ? ನಿನಗೆ ಕೇಡೆಸಗಲು ನನ್ನ ಮನಸ್ಸು ಅಳುಕುತ್ತಿದೆ. ನೀನು ತಾರ್ತರರ ಪಡೆಯನ್ನು ಬಿಟ್ಟು ನನ್ನ ಅರಮನೆಗೆ ಬಾ. ನನ್ನ ಮಗನಾಗು. ನನ್ನ ಧ್ವಜದ ನೆರಳಿನಲ್ಲಿ ಅಪೂರ್ವ ಖ್ಯಾತಿಯನ್ನು ಗಳಿಸು."

ಆತ್ಮಪ್ರಶಂಸೆಯ ಕಿಲುಬು ಎಳ್ಳನಿತು ಸೋಂಕದ ಉದಾರ ವಚನ ಗಳನ್ನು ಸೊಹ್ರಾಬ ಕಿವಿಗೊಟ್ಟು ಆಲಿಸಿದನು. ಮರುಭೂಮಿಯಲ್ಲಿ ಒಂಟಿ ಯಾಗಿ ನಿಂತ ಉನ್ನತ ಗೋಪುರದಂತೆ ತೋರುವ ಈ ಭೀಮಗಂಭೀರ ವ್ಯಕ್ತಿಯು ರುಸ್ತುಮನೇ ಆಗಿರುವನೆಂದು ಸೊಹ್ರಾಬನ ಅಂತರಂಗ ನುಡಿ ಯಿತು. ತನ್ನ ಪಿತೃ ಅನ್ವೇಷಣವೆಂಬ ತಪಸ್ಸು ಇಂದಿಗೆ ಕೊನೆಗಂಡಿತು ಎಂದು ಅವನಿಗೆ ಅನಿಸಿತು. ಅವನು ಕುದುರೆಯಿಂದಿಳಿದು ರುಸ್ತುಮನಿದ್ದಲ್ಲಿಗೆ ಹೋದನು; ರುಸ್ತುಮನ ಪಾದಗಳೆಡೆಯಲ್ಲಿ ಮೊಣಕಾಲೂರಿ ಮಣಿದನು. ಮತ್ತು ರುಸ್ತುಮನ ಬಲಿಷ್ಠ ಕೈಯನ್ನು ಹಿಡಿದುಕೊಂಡನು. ಅವನು ನೀರು ತುಂಬಿದ ಕಣ್ಣುಗಳಿಂದ "ಹಾಲುಗೂದಲಿನ ಜಾಲನ ಮಗ ರುಸ್ತುಂ, ಲೋಕೈಕವೀರ ರುಸ್ತುಂ ನೀನಲ್ಲವೇ?" ಎಂದು ಪ್ರಶ್ನಿಸಿದನು.

ತಂದೆ ಮಗಂದಿರು ಒಂದುಗೂಡುವುದು ವಿಧಿಯ ಇಚ್ಛೆಗೆ ವಿಪರೀತ ವಾದುದು. ತರುಣನ ವರ್ತನೆ ರುಸ್ತುಮನ ಮನಸ್ಸಿನಲ್ಲಿ ಅವಿಶ್ವಾಸವನ್ನು ಕುದುರಿಸಿತು "ನರಿಯಂತೆ ತಂತ್ರಗಾರನಾದ ಈ ತರುಣನ ಮನಸ್ಸಿನಲ್ಲಿರುವು ದೇನು? ನಾನು ರುಸ್ತುಮನೆಂದು ತಿಳಿಸಿದರೆ ಈ ಭೇಟಿಯಿಂದ ಈ ತರುಣನು ಖ್ಯಾತಿಗಳಿಸುವನು." ರುಸ್ತುಂ ತನ್ನಲ್ಲಿಯೇ ಆಲೋಚಿಸಿದನು. "ಅವನು ನನ್ನನ್ನೂ ನೇರನು ಯುದ್ಧವನ್ನೂ ಮಾಡನು. ನನ್ನೊಡನೆ ಸಂಧಾನವನ್ನು ಮಾಡಿಕೊಂಡು ತಾರ್ತರ ರಾಜ್ಯಕ್ಕೆ ಮರಳುವನು. ಅವನು ತಾರ್ತರ

ರಾಜ್ಯದಲ್ಲಿ ಔತಣಗಳನ್ನು ನಡೆಸುತ್ತಾ, 'ನಾನು ಓಕ್ಸಸ್ ನದಿಯ ದಂಡೆಯಲ್ಲಿ ಪಾಳೆಯ ಹೂಡಿ ಇರಾನಿಯರನ್ನು ಎದುರಿಸಿದಾಗ, ಇರಾನಿನ ವೀರರ ಪೈಕಿ ರುಸ್ತುಮನೊಬ್ಬನೇ ನನ್ನ ಯುದ್ಧಾಹ್ವಾನಕ್ಕೆ ಮಾರುಗೊಟ್ಟನು. ನಾವೀರ್ವರೂ ಪರಸ್ಪರ ಮೆಚ್ಚುಗೆಗೊಟ್ಟು ಸಂಧಿಮಾಡಿಕೊಂಡೆವು. ನಾವೀರ್ವರೂ ಸಮ ದಂಡಿಯ ವೀರರಂತೆ ಬೀಳ್ಕೊಂಡೆವು.' ಎಂದು ಆತ್ಮ ಪ್ರಶಂಸೆ ಮಾಡಿಕೊಳ್ಳು ವನು. ಆಗ ಅವನನ್ನು ಓಲೈಸುವ ವೀರರೆಲ್ಲ ಅವನನ್ನು ಸ್ತುತಿಸುವರು. ಹೀಗೆ ನನ್ನ ಮೂಲಕ ಇರಾನಿನ ಪ್ರಾಚೀನ ವೀರರಿಗೆಲ್ಲ ಅವಮಾನ ಒದಗುವುದು."

ತನ್ನ ಪಾದಗಳಿಗೆ ಮಣಿದ ತರುಣನ ಕಡೆಗೆ ರುಸ್ತುಂ ದೃಷ್ಟಿಯನ್ನು ಹೊರಳಿಸಿ, "ನಾನು ರುಸ್ತುಮನಲ್ಲ. ಅವನು ಗಳಿಸಿದ ಹೆಗ್ಗಳಿಕೆಯ ಎಳ್ಳ ನಿತೂ ಭಾಗ ನನ್ನಲ್ಲಿಲ್ಲ. ನೀನು ರುಸ್ತುಮನ ಮೋರೆಯನ್ನೊಮ್ಮೆ ದಿಟ್ಟಿಸಿದ್ದರೆ ಭಯದಿಂದ ರಣಾಂಗಣವನ್ನು ಬಿಟ್ಟು ಓಡುತ್ತಿದ್ದೆ. ಆತ್ಮಸ್ತುತಿಯನ್ನು ಪ್ರೀತಿ ಸುವ ತರುಣನೇ, ನಿನ್ನ ಕಾಳಗದ ಕರೆಗೆ ಓ ಕೊಡಲು ಬಂದ ಸಾಮಾನ್ಯ ವೀರನು ನಾನು. ನೀನು ನನ್ನೊಡನೆ ಯುದ್ಧಮಾಡು. ಇನ್ನು ಹೆಚ್ಚು ಸಮಯ ಕಳೆಯುವುದೊರೊಳಗೆ ನಿನ್ನ ಎಲುಬುಗಳು ಮರುಭೂಮಿಯಲ್ಲಿ ಚದರಿಬೀಳುವುವು." ಎಂದು ರುಸ್ತುಂ ಮಾರ್ನುಡಿದನು.

ಸೊಹ್ರಾಬ ಮಣಿದಲ್ಲಿಂದ ಎದ್ದು ನಿಂತನು. ರುಸ್ತುಮನ ಮಾತು ಗಳನ್ನು ಕೇಳಿ ಅವನ ಎದೆ ಭಾರವಾಯಿತು. ಅವನು ತಾಯಿ ಹೇಳಿದ ಮಾತು ಗಳನ್ನು ಸ್ಮರಿಸಿ ನೋಜಿಗವಟ್ಟನು. "ರುಸ್ತುಮನಿದ್ದರೆ ಕಾಳಗವೇ ನಡೆಯು ತ್ತಿರಲಿಲ್ಲವೆಂದು ನೀನು ಹೇಳಿದ ಮಾತುಗಳೇನೋ ನಿಜ. ಆದರೆ ನೀನು ಅವನ ಬದಲಾಗಿ ಬಂದಿರುವೆ" ಸೊಹ್ರಾಬನ ಕೊರಳಿಂದ ಅಭಿಮಾನ ತುಂಬಿದ ಮಾತುಗಳು ಹೊಮ್ಮಿದವು. "ನಾನೊಬ್ಬ ಹೆಣ್ಣೆಂದು ಭಾವಿಸಿ ನೀನು ನನ್ನನ್ನು ಭಯಪಡಿಸಲು ಹೊರಟಿರುವೆ. ಕಾಳಗದಲ್ಲಿ ಯಾರು ಜಯಶೀಲ ರಾಗುವರೆಂದು ನಮ್ಮೀರ್ವರಿಗೂ ಹೇಳಲು ಅಸದಳ. ಅದು ನದಿಯ ಅಲೆ ಗಳಗೆ ಸಿಲುಕಿದ ಹುಲ್ಲುಕಡ್ಡಿಯಂತೆ ಚಂಚಲವಾಗಿರುವುದು. ಗೆಲ್ಲವೆಣ್ಣು ಕೊನೆಗೆ ಯಾರಿಗೆ ಒಲಿಯುವಳೆಂದು ಊಹಿಸುವುದು ಅಶಕ್ಯ."

ಮತ್ತೆ ವೀರರೀರ್ವರಿಗೂ ದ್ವಂದ್ವಯುದ್ಧ ಆರಂಭವಾಯಿತು. ರುಸ್ತುಂ ತನ್ನ ಭಲ್ಲೆಯನ್ನು ಜಳಪಿಸಿ ಸೊಹ್ರಾಬನನ್ನು ಇರಿದನು. ಭಲ್ಲೆಯ ಪ್ರಹಾರ ವನ್ನು ತರುಣನ ಗುರಾಣಿ ತಡೆಯಿತು. ಭಲ್ಲೆಯ ಪ್ರಹಾರಗಳು ಗುರಾಣಿಗಳ

ಮೇಲೆ ಬಿದ್ದಾಗ ಹುಟ್ಟಿದ ಭೀಷಣ ಸ್ವನಗಳು ವಾಯುಮಂಡಲವನ್ನು ತುಂಬಿ ದುವು. ಪ್ರಹಾರಗಳು ಗುರಾಣಿಗಳ ಮೇಲೆ ಬಿದ್ದಾಗ ಕಿಡಿಗಳು ಹೊಮ್ಮಿ ಮೇಲೆ ಹಾರಿದುವು; ಹಗಲು ತಾರಕೆಗಳು ಉದುರಿದುವೆಂಬ ಭ್ರಾಂತಿಯನ್ನು ನೋಡುಗರಲ್ಲಿ ಉಂಟುಮಾಡಿದುವು. ಭಲ್ಲೆಗಳ ಬಾಯಿಗಳು ಮೊಂಡಾಗಲು ವೀರರು ಅವುಗಳನ್ನು ನೆಲದ ಮೇಲೆಸೆದರು. ಅವರು ಖಡ್ಗಗಳನ್ನೆತ್ತಿಕೊಂಡರು. ಖಡ್ಗಪ್ರಹಾರಗಳಿಂದ ಅಶ್ವಗಳ ರಕ್ಷಾಕವಚಗಳು ಹರಿದುವು. ಯೋಧರ ಮೈಮೇಲಿನ ಲೋಹಕವಚಗಳು ಅಲ್ಲಲ್ಲಿ ಸೀಳಿದುವು. ಕೃಪಾಣಗಳು ಪರಸ್ಪರ ಘರ್ಷಿಸಿದಾಗ ಅಗ್ನಿಜ್ವಾಲೆಗಳೆದ್ದುವು. ಕೊನೆಗೆ ಅವು ಮೊಂಡಾದುವು. ಅವರು ಈ ಕೈದುಗಳನ್ನು ನೆಲದ ಮೇಲೆ ಬಿಸುಟು ಗದೆಗಳನ್ನು ಎತ್ತಿಕೊಂಡರು. ಅವರು ಗದೆಗಳಿಂದ ಪರಸ್ಪರ ಅಪ್ಪಳಿಸಿದರು. ಅವರು ಗದೆಗಳಿಂದ ತಲೆ, ಮೊಗ, ಎದೆ, ತೋಳು ಮತ್ತು ತೊಡೆಗಳನ್ನು ಹೊಡೆದರು. ಹಲವೆಡೆಗಳಲ್ಲಿ ಗಾಯ ಗಳಾಗಿ ಮೈಗಳಿಂದ ಹರಿದ ರಕ್ತಸ್ರೋತವು ನೆಲವನ್ನು ನಾಂದಿತು. ಈರ್ವರೂ ಆಮೂಲಾಗ್ರ ಹೂತ ಮುತ್ತುಗದ ಮರಗಳಂತೆ ತೋರಿದರು. ಅವರ ತೋಳು ಗಳು ದಣಿದುವು; ಎದೆಗಳಿಂದ ಬಿಸಿಯುಸಿರುಗಳು ಹೊಮ್ಮಿದುವು. ಗಂಟಲು ಗಳು ಒಣಗಿದುವು. ಈರ್ವರೂ ಆಯಾಸಗೊಂಡು ಕಾದದೆ, ಕೈಗಳಲ್ಲಿ ಗದೆಗಳನ್ನು ಹಿಡಿದು ನಿಂತರು. ಉಷ್ಣಾತಿರೇಕದಿಂದ ಅವರ ದೇಹಗಳಿಂದ ಬೆವರು ಕೋಡಿವರಿಯಿತು.

ಈರ್ವರ ಅಂತರಂಗದಲ್ಲಿ ಆಗಾಗ ಪ್ರೀತಿಯ ನಲೆಗಳು ಚಿಮ್ಮುವುವು. ಎದುರಾಳಿಯನ್ನು ಕಾಣುವಾಗ ಅವರ ಎದೆಗಳು ಮಾರ್ದವವಾಗುವುವು. ಅಂತರಂಗಗಳು ಈರ್ವರ ರಕ್ತಸಂಬಂಧವನ್ನು ನೆನಪಿಗೆ ತರಲು ಪ್ರಯತ್ನಿಸು ತ್ತಿದ್ದುವು. ಆದರೆ ರೋಷಾಕುಲರಾದ ವೀರರೀರ್ವರೂ ಅಂತರಂಗದ ಕರೆಗೆ ಕಿವಿಗೊಡರು. ಅವರು ಹೃದಯದ ಕೂಗನ್ನು ಅವಜ್ಞೆಗೈದರು. ಈ ರೀತಿ ಅರಣ್ಯದ ಕ್ರೂರಜಂತುಗಳು ಮಾತ್ರ ಕಡುರೋಷದಿಂದ ಸೆಣಸುವುವು. ಆದರೆ ಕ್ರೋಧಾಭಿಮಾನಗಳ ಜವನಿಕೆ ಪಿತಾಪುತ್ರರ ನಡುವೆ ನೆಲಸಿ ಅವರೀ ರ್ವರೂ ಸಿಂಹಗಳಿಗಿಂತ ಕ್ರೂರವಾಗಿ ಹೋಣರುವಂತೆ ಮಾಡಿತು.

ಉಸಿರು ತೆಗೆದುಕೊಳ್ಳಲೆಂದು ಅವರು ಕಾದಾಟವನ್ನು ನಿಲ್ಲಿಸಿ ಕ್ಷಣ ಹೊತ್ತು ವಿರಮಿಸಿದರು. "ಧವಳಾಸುರನ ಸಂಗಡ ನಡೆಸಿದ ಹೋರಾಟವನ್ನು ಈ ಕಾಳಗದೊಡನೆ ಹೋಲಿಸಿದರೆ ಅದು ಮಕ್ಕಳಾಟದಂತೆ ತೋರುವುದು"

ಎಂದು ರುಸ್ತುಂ ತನ್ನಲ್ಲಿಯೇ ಹೇಳಿಕೊಂಡನು. ಸೊಹ್ರಾಬನು "ನೀನು ಸಿದ್ಧನಾಗಿರುವೆಯಾದರೆ ನಾವು ಬಿಲ್ಲಂಬುಗಳಿಂದ ಕಾದೋಣ." ಎಂದು ಉತ್ಸಾಹದ ದನಿಯಲ್ಲಿ ಹೇಳಿದನು.

ಬಿಲ್ಲಂಬುಗಳ ಕಾಳಗ ಆರಂಭವಾಯಿತು. ಈರ್ವರ ಶಕ್ತಿ ಮತ್ತು ಬಾಣ ಪ್ರಯೋಗಗಳ ತೀವ್ರತೆಗಳು ಸಮಾನವಾಗಿದ್ದುವು. ಈರ್ವರೂ ಜಯಲಕ್ಷ್ಮಿಯನ್ನು ಸೆರೆಹಿಡಿಯಲು ಅಶಕ್ತರಾದರು. ಕಾಳಗದ ಕಣ ತುದಿಮುರಿದ ಬಾಣಗಳಿಂದಲೂ ಗರಿಗಳಿಂದಲೂ ತುಂಬಿತು. ಈರ್ವರೂ ಬಿಲ್ಲುಗಳನ್ನು ಬದಿಗಿರಿಸಿ ಮಲ್ಲಯುದ್ಧಕ್ಕಿಳಿದರು. ರುಸ್ತುಮನ ಹಿಡಿತ ಬೆಟ್ಟವನ್ನೇ ಕೀಳುವಷ್ಟು ದೃಢವಾದುದು. ಆದರೆ ಆ ಅಜೇಯ ಶಕ್ತಿ ಸೊಹ್ರಾಬನ ತಾರುಣ್ಯದ ಪರಾಕ್ರಮದ ಮುಂದೆ ಮಣಿದು ಸೋತಿತು. ಸೊಹ್ರಾಬನನ್ನು ನೆಲದಿಂದೆತ್ತಿ ಅಪ್ಪಳಿಸಲು ರುಸ್ತುಂ ಶಕ್ತನಾಗಲಿಲ್ಲ. ಸೊಹ್ರಾಬನಿಗೂ ತಂದೆಯನ್ನು ಕೆಡೆಯಿಸುವುದು ಅಸದಳವೆನಿಸಿತು. ಎರಡು ಮದ್ದಾನೆಗಳಂತೆ ಈರ್ವರು ವೀರರು ಹೋಣರಿದರು. ಮಲ್ಲಯುದ್ಧವಾದ ನಂತರ ಈರ್ವರೂ ಗದೆಗಳನ್ನು ಮರಳಿ ತೆಗೆದುಕೊಂಡರು. ರುಸ್ತುಂ ಗದೆಯನ್ನೆತ್ತಿ ಸೊಹ್ರಾಬನ ಮೇಲೆ ಒಂದು ಭೀಕರ ಪ್ರಹಾರವನ್ನು ಎಸಗಿದನು. ಆದರೆ ಸೊಹ್ರಾಬ್ ಬೆಕ್ಕಿನಂತೆ ಫಕ್ಕನೆ ನೆಗೆದು ಗದಾಪ್ರಹಾರವನ್ನು ನಿವಾರಿಸಿದನು. ಗದೆಯು ನೆಲದ ಮೇಲಪ್ಪಳಿಸಿ ಮೇಲೆ ಪುಟಿದು ನೆಗೆಯಿತು. ರುಸ್ತುಮನ ಹಿಡಿತದಿಂದ ಗದೆ ತಪ್ಪಿತು. ಗದೆಯೊಡನೆ ರುಸ್ತುಮನೂ ನೆಲದಲ್ಲಿ ಹೊರಳಿದನು. ಸೊಹ್ರಾಬನ ಗದೆ ರುಸ್ತುಮನ ಹೆಗಲ ಮೇಲೆ ಕುಣಿಯಿತು. ರುಸ್ತುಮನ ತಲೆ ಗರಗರನೆ ತಿರುಗಿತು. ಅವನು ದೊಡ್ಡ ಪರ್ವತ ಬೀಳುವಂತೆ ನೆಲದಮೇಲೆ ಬಿದ್ದನು.

ಸೊಹ್ರಾಬನು ಬಯಸಿದ್ದರೆ ತನ್ನ ಸೊಂಟದ ಪಟ್ಟಿಯಲ್ಲಿ ಸಿಕ್ಕಿಸಿದ ಕಠಾರಿಯನ್ನು ತೆಗೆದು ಹಗೆಯ ಎದೆಗೆ ತಿವಿದು ಅವನನ್ನು ವಧಿಸಬಹುದಿತ್ತು. ಆದರೆ ಸೊಹ್ರಾಬ ಆ ಕೃತ್ಯವನ್ನು ಕೈಗೊಳ್ಳಲಿಲ್ಲ. ರುಸ್ತುಂ ಬಿದ್ದಲ್ಲಿಂದ ಮೇಲಕ್ಕೆದ್ದನು. ಅವನ ಶರೀರ ಹುಣ್ಣಿನಂತೆ ನೋಯುತ್ತಿದ್ದಿತು. ಆದರೆ ಅವನು ತಾನು ಅನುಭವಿಸುತ್ತಿರುವ ವೇದನೆಯನ್ನು ಹಗೆಗೆ ತೋರ್ಪಡಿಸಲಿಲ್ಲ. ಸೊಹ್ರಾಬನ ತುಟಿಗಳ ಮೇಲೆ ಮೃದುಹಾಸ್ಯ ಲಾಸ್ಯವಾಡಿತು. "ನೀನು ನನ್ನಂತಹ ಶಕ್ತಿಶಾಲಿಯೊಡನೆ ನಿಂತು ಸೆಣಸಲಾರೆ. ನೀನು ಮುದುಕನಾಗಿದ್ದೀಯೇ. ನಾವೀರ್ವರೂ ಎಸಗುವ ಕಾಳಗ ಸಮುದಂಡಿಯಲ್ಲ; ಈಗ

ಸಂಜೆಯಾಗುತ್ತಲಿದೆ. ನಾಳೆ ನಾವೀರ್ವರೂ ರಣಮುಖದಲ್ಲಿ ಸಂಧಿಸೋಣ. ಅನಿತರಲ್ಲಿ ಕಾಯಕೋಸನ ನೆತ್ತರಿಗೆ ಹಾತೊರೆದ ನನ್ನೀ ಕರವಾಳದ ತೃಷೆಯನ್ನಡಗಿಸಲು ಪ್ರಯತ್ನಿಸುವೆನು." ಎಂದು ಸೊಹ್ರಾಬ್ ವಿರಮಿಸಿದನು.

ಹೀಗೆ ನುಡಿದ ಸೊಹ್ರಾಬ್ ಹಸಿದ ತೋಳ ಕುರಿಮಂದೆಯ ಮೇಲೆ ಬೀಳುವಂತೆ ಕಾಯಕೋಸನ ಗುಡಾರದ ಕಡೆಗೆ ನುಗ್ಗಿದನು. ಇತರ ತಾರ್ತರ ಯೋಧರು ನಾಯಕನನ್ನು ಹಿಂಬಾಲಿಸಿದರು. ಹಗೆಯಿಂದ ರಾಜನ ಪ್ರಾಣವನ್ನು ಉಳಿಸಲು ಇರಾನೀ ಯೋಧರು ಎದುರು ಬಂದರು. ರಣಕ್ಷೇತ್ರದಲ್ಲಿ ಒಂದು ದೊಡ್ಡ ಗೊಂದಲವೆದ್ದಿತು ಸೇಡು ತೀರಿಸಿಕೊಳ್ಳಲೆಂದು ರುಸ್ತುಂ ಅಫ್ರಸಿಯಾಬನ ಸೇನೆಯ ಮೇಲೆ ಬಿದ್ದನು. ಅವನು ಖಡ್ಗದಿಂದ ತಾರ್ತರರ ರುಂಡಗಳನ್ನು ಚೆಂಡಾಡಿದನು ಅವರ ದೇಹಗಳಿಂದ ಬಸಿದ ನೆತ್ತರು ಮಡುವಾಗಿ ನಿಂತಿತು. ತಾನಿಲ್ಲದಾಗ ಚಕ್ರವರ್ತಿ ಅಪಾಯಕ್ಕೊಳಗಾಗಬಹುದೆಂದು ಭಾವಿಸಿ ಅವನು ತನ್ನ ಸೇನೆಯತ್ತ ಮರಳಿದನು. ಅವನು ಸೊಹ್ರಾಬನನ್ನು ಕಂಡು "ನನ್ನೊಡನೆ ದ್ವಂದ್ವ ಯುದ್ಧ ತೀರದ ಮುನ್ನ ಚಕ್ರವರ್ತಿಯನ್ನು ಆಕ್ರಮಿಸುವುದು ನಿನಗೆ ಉಚಿತವಲ್ಲ. ನೀನು ಕಾದಲು ಬಯಸುವೆಯಾದರೆ ನನ್ನೊಡನೆ ಯುದ್ಧಮಾಡು." ಎಂದು ಗರ್ಜಿಸಿ ಅವನನ್ನು ತಡೆದನು.

ಮರುದಿನ ದ್ವಂದ್ವ ಯುದ್ಧವನ್ನು ಮುಂದುವರಿಸಲು ಈರ್ವರು ವೀರರೂ ಒಪ್ಪಿ ತಮ್ಮ ತಮ್ಮ ಗುಡಾರಗಳಿಗೆ ಹಿಂದಿರುಗಿದರು.

## ಹದಿಮೂರು

ಯುದ್ಧಪರಿಶ್ರಮದಿಂದ ಬಳಲಿದ ರುಸ್ತುಂ ಆ ಇರುಳು ದಣುವಾರಿಸಿಕೊಳ್ಳುವುದರಲ್ಲಿ ನಿರತನಾಗಿದ್ದಾಗ ಕಾಯಕೋಸನು ರುಸ್ತುಮನನ್ನು ತನ್ನ ಸನ್ನಿಧಿಗೆ ಕರೆತರಲು ದೂತರನ್ನು ಅಟ್ಟಿದನು. ರುಸ್ತುಂ ರಾಜಸನ್ನಿಧಿಗೆ ತೆರಳಿ ವಂದಿಸಿದನು. "ಈ ತಾರ್ತರ ತರುಣನಂತೆ ಧೀರನೂ ಕಲಿಯೂ ಆದ ಹಗೆ ಹಿಂದೆಂದೂ ನಮ್ಮ ನಾಡನ್ನು ಆಕ್ರಮಿಸಿದ ನೆನಪು ನನಗಿಲ್ಲ." ಎನ್ನುತ್ತ ಚಕ್ರವರ್ತಿ ಅವನನ್ನು ತನ್ನ ಬಲಪಾರ್ಶ್ವದಲ್ಲಿ ಕುಳ್ಳಿರಿಸಿದನು.

ಮತ್ತೆ ರುಸ್ತುಂ "ಅವನು ಉಕ್ಕಿನಿಂದ ನಿರ್ಮಿತನಾದ ಮಾನವನೆಂದು ತೋರುವುದು; ನಾವೀರ್ವರೂ ಈಟಿಗಳಿಂದ, ಬಿಲ್ಲಂಬುಗಳಿಂದ ಮತ್ತು ಗದೆ

ಗಳಿಂದ ಹೋರಿದೆವು. ಆದರೆ ಅವನು ಯಾವ ನೋವಿಗೂ ಒಳಗಾಗಲಿಲ್ಲ. ಕುದುರೆಯ ಬೆನ್ನಿನ ಮೇಲಿಂದ ಅವನನ್ನು ಎಳೆದುಹಾಕಲು ನಾನು ಪ್ರಯತ್ನಿಸಿದೆ. ಆದರೆ ನನ್ನ ಉದ್ಯಮ ಗಾಳಿ ಪರ್ವತವನ್ನೆತ್ತಿ ಎಸೆಯಲು ಪ್ರಯತ್ನಿಸಿದಂತಾಯಿತು. ನಾಳೆಯ ಕಾಳಗದಲ್ಲಿ ಗೆಲುವನ್ನು ಪಡೆಯುವವರಾರೆಂಬುದನ್ನು ದೈವ ಮಾತ್ರ ಬಲ್ಲುದು." ಎಂದು ಸೊಹ್ರಾಬನ ಶಕ್ತಿಸಾಹಸಗಳನ್ನು ವರ್ಣಿಸಿದನು. ಇತ್ತ ಸೊಹ್ರಾಬನು ತನ್ನ ಪಾಳೆಯದಲ್ಲಿ ಸೇನಾನಾಯಕರಿಗೆಲ್ಲ ಔತಣವೀಯುತ್ತ "ಆ ವೃದ್ಧ ವೀರನಲ್ಲಿ ರುಸ್ತುಮನ ಶಕ್ತಿ ಸಾಮರ್ಥ್ಯಗಳಿವೆ. ಅವನನ್ನು ಕಾಣುವಾಗ ನನ್ನ ಎದೆಯಲ್ಲಿ ಪ್ರೀತಿ ಗೌರವಗಳು ಮೂಡುತ್ತವೆ. ಆದರೆ ತಂದೆ ಮಕ್ಕಳು ರಣಮುಖದಲ್ಲಿ ಕಾದುವ ಪ್ರಸಂಗವನ್ನು ದೈವವು ಒದಗಿಸದಿರಲಿ." ಎಂದು ನುಡಿದನು.

ಅಫ್ರಾಸಿಯಾಬನು ಸೊಹ್ರಾಬನ ಸುತ್ತಲೂ ಕುಯುಕ್ತಿಗಳ ಬಲೆಯನ್ನು ಹೆಣೆದಿದ್ದನು. ತನ್ನ ಕಡು ಹಗೆ ರುಸ್ತುಮನ ಅಳಿವಿಗೆ ಸೊಹ್ರಾಬನನ್ನು ಬಳಸಿಕೊಳ್ಳಬೇಕೆಂಬ ದುರುದ್ದೇಶದಿಂದಲೇ ಅವನು ಸೊಹ್ರಾಬನಿಗೆ ಈ ದಂಡಯಾತ್ರೆಯಲ್ಲಿ ಸೈನ್ಯದ ನೆರವನ್ನು ಕೊಟ್ಟಿದ್ದನು. ಸೊಹ್ರಾಬನ ಔತಣದಲ್ಲಿ ಅಫ್ರಾಸಿಯಾಬನ ಸರದಾರನೊಬ್ಬನು ಭಾಗವಹಿಸಿದ್ದನು. ಈ ಸರದಾರನಿಗೆ ತಾರ್ತರ ರಾಜನು "ಈ ತರುಣ ಸಿಂಹನಿಗೆ ತನ್ನ ತಂದೆ ಯಾರೆಂಬುದು ತಿಳಿಯಕೂಡದು. ಹಾಗಾದರೆ ಮಾತ್ರ ಇವನು ರುಸ್ತುಮನ ಅಳಿವನ್ನು ಸಾಧಿಸುವನು. ಅನಂತರ ಇವನನ್ನು ಕೊನೆಗಾಣಿಸುವುದು ಸುಲಭ." ಎಂದು ಮೊದಲೇ ತಿಳಿಸಿದ್ದನು. ಆದುದರಿಂದ ಈ ಸರದಾರನು "ನಾನು ರುಸ್ತುಮನನ್ನೂ ಅವನ ಕುದುರೆ ರಕ್ಷನನ್ನೂ ಚೆನ್ನಾಗಿ ಬಲ್ಲೆ. ನಿನ್ನೊಡನೆ ಕಾದಿದ ವೀರ ಮತ್ತು ಕುದುರೆ ರುಸ್ತುಂ ಮತ್ತು ರಕ್ಷರಂತೆ ತೋರಿದರೂ ಅವರು ರುಸ್ತುಂ ಮತ್ತು ರಕ್ಷರಲ್ಲ." ಎಂದು ಸೊಹ್ರಾಬನಿಗೆ ಖಚಿತಮಾಡಲು ಯತ್ನಿಸಿದನು.

ತನ್ನ ಎದೆಯಲ್ಲಿ ಪ್ರೀತಿ ಗೌರವಗಳನ್ನು ಮೂಡಿಸುತ್ತಿದ್ದ ವೃದ್ಧನೊಡನೆ ಕಾದಲು ಅಳುಕುತ್ತಿದ್ದ ಸೊಹ್ರಾಬನ ಮನಸ್ಸು ತಾರ್ತರ ಸರದಾರನ ಮಾತುಗಳಿಂದ ಹಗುರವಾಯಿತು. ರಹಸ್ಯವನ್ನು ಭೇದಿಸಿ ತಂದೆ ಮಗಂದಿರನ್ನು ಒಂದುಗೂಡಿಸಲಲ್ಲ ಝಿಂಥೆಯನ್ನು ವಿಧಿಯು ಪ್ರೇರಣೆಯಿಂದ ರುಸ್ತುಮನ ನಿಡಿದೋಳು ಇಲ್ಲವಾಗಿಸಿತ್ತು. ತನ್ನ ಭೀಷಣ ಲೀಲಾ ವಿನೋದವನ್ನು ಎಸಗಲೆಂದು ವಿಧಿ ಸೊಹ್ರಾಬನ ಸುತ್ತಲೂ ತನ್ನ ಬಲೆಯನ್ನು ಹೆಣೆಯುತ್ತಿದ್ದಿತು.

ಆ ಇರುಳು ರುಸ್ತುಂ ತನ್ನ ತಮ್ಮನ ಪಕ್ಕದಲ್ಲಿ ಕುಳಿತು ಧ್ಯಾನ ಮತ್ತು ಪ್ರಾರ್ಥನೆಗಳಲ್ಲಿ ಹೆಚ್ಚು ಸಮಯವನ್ನು ಕಳೆದನು. ಬೆಳಗಿನ ಜಾವದಲ್ಲಿ ಅವನಿಗೆ ಸಕ್ಕರೆಯಂತಹ ಸವಿನಿದ್ದೆ ಬಂದಿತು. ಅವನು ಜಾಗ್ರತನಾಗಲು ಸೋದರನನ್ನು ಕರೆದು "ಮುಂಜಾನೆಯಾಗುವ ಮುನ್ನ ನನ್ನ ವೀರರು ಯುದ್ಧ ಸನ್ನದ್ಧರಾಗಲಿ. ಈ ಭೀಕರ ಪರಾಕ್ರಮಿ ತಾರ್ತರನೊಡನೆ ನಡೆಸಿದ ದ್ವಂದ್ವಯುದ್ಧದಲ್ಲಿ ನಾನು ಜೇತಾರನಾದರೆ, ಅವರು ಶತ್ರು ಶಿಬಿರಗಳ ಸುಲಿಗೆಯಲ್ಲಿ ಪಾಲುಗಾರರಾಗಲಿ. ಹಾಗಲ್ಲದೆ ನಾನು ಕಾಳಗದಲ್ಲಿ ಮಡಿದೆನಾದರೆ ನನ್ನ ಸೇನೆಯನ್ನು ನೇರಾಗಿ ಜಾಬೂಲಿಗೆ ಕರೆದುಕೊಂಡು ಹೋಗು. ರಾಜ್ಯವನ್ನು ಸುಲಿಗೆಗೈವ ತಾರ್ತರರನ್ನು ತಡೆದು ನಿಲ್ಲಿಸುವ ಸಾಹಸಕ್ಕೆ ಕೈಹಚ್ಚಬೇಡ. ನೀನು ಪೂಜ್ಯ ಜಾಲನನ್ನು ಸಾಂತ್ವನಗೊಳಿಸು. ತಾಯಿ ರುದಾಬೆಗೆ ಈ ದುಃಖ ವಾರ್ತೆಯನ್ನು ಬಹು ಮೆದುವಾಗಿ ತಿಳಿಸು. ನೀನು ಅತಿ ವಾತ್ಸಲ್ಯದಿಂದ ಮಾತೆಯ ಶುಶ್ರೂಷೆಯನ್ನು ಮಾಡು. ವೃದ್ಧರೂ, ತರುಣರೂ, ಧೀರರೂ, ಭೀರುಗಳೂ, ಎಲ್ಲರೂ ಒಂದು ದಿನ ಮಡಿಯಲೇ ಬೇಕು. ನನ್ನ ಹಿರಿಯರಾದ ನರಿಮಾನ ಮತ್ತು ಸಾನರು ತುಳಿದ ಮಾರ್ಗವನ್ನು ತುಳಿದು ನಾನೂ ಒಂದು ದಿನ ಓಕೊಡದ ನಾಡಿಗೆ ತೆರಳಲೇ ಬೇಕು. ಈ ಲೋಕದಲ್ಲಿ ವೀರನಿಗೆ ಶಾಶ್ವತವೆನಿಸಿದ ನೆಲೆಯೇನೂ ಇರುವುದಿಲ್ಲ. ಆದುದರಿಂದ ನನ್ನ ಸಾವಿಗೋಸುಗ ಮರುಗಿ ಕಣ್ಣೀರು ಸುರಿಸಬೇಕಾದುದಿಲ್ಲ." ಎಂದು ಉಪದೇಶಿಸಿದನು.

ನೇಸರ ಕಿರಣಗಳು ಬಾನ್ನಟ್ಟೆಯಲ್ಲಿ ತೂರಿ ಆವರಿಸಿದ ತಮವನ್ನು ಅಟ್ಟಿದುವು. ಎರಡು ಸೇನೆಗಳ ಮಧ್ಯದಲ್ಲಿ ತೆರವಾಗಿದ್ದ ಸ್ಥಳದಲ್ಲಿ ಈರ್ವರು ಮಹಾವೀರರು ಸಂಧಿಸಿದರು. ಗೆಳೆಯನೊಬ್ಬನಿಗೆ ಅಭಿವಾದನೆ ಮಾಡುವಂತೆ ಸೊಹ್ರಾಬನು ರುಸ್ತುಮನನ್ನು ಕಾಣಲು, ರುಸ್ತುಮನು ಮುಗುಳ್ನಗೆಯನ್ನು ಬೀರಿ ಕುಶಲ ಪ್ರಶ್ನೆಗಳನ್ನು ಮಾಡಿದನು: "ಇರುಳು ಚೆನ್ನಾಗಿ ನಿದ್ರಿಸಿದೆಯಾ? ಈ ದಿನ ನಿನ್ನ ಮೈಕೈಗಳು ಹೇಗಿವೆ? ಇಂದೂ ನನ್ನೊಡನೆ ಹೋರಬೇಕೆಂದು ನೀನೇಕೆ ಹಟತೊಟ್ಟಿರುವೆ?" ಸೊಹ್ರಾಬನು ಮಾರ್ನುಡಿದನು: "ನಾವೀರ್ವರೂ ಇಲ್ಲಿ ಕುಳಿತು ದೈವದ ಕ್ಷಮೆಬೇಡಿ ಆತ್ಮ ಮಿತ್ರರಾಗೋಣ. ನಿನ್ನಲ್ಲಿರುವ ಅವುದೋ ಒಂದು ಶಕ್ತಿ ನನ್ನನ್ನು ಸೆಳೆಯುತ್ತಿದೆ. ಇತರರು ಕಾದಲಿ. ನಾವು ಹಬ್ಬಮಾಡೋಣ. ನಿನ್ನ ಹೆಸರು ಕುಲಗಳನ್ನು ತಿಳಿಸು. ನೀನು ಜಾಬೂಲಿನ ಪ್ರಭು, ಬಿಳಿಗೂದಲಿನ ಜಾಲನ ಪುತ್ರ, ಲೋಕೈಕ ವೀರ ರುಸ್ತುಮನಲ್ಲವೇ?"

"ನಾನಿಲ್ಲಿ ಔತಣ ಮಾಡಲು ಅಥವಾ ಹರಟೆ ಹೊಡೆಯಲು ಬಂದಿಲ್ಲ. ಈ ಕ್ಷುಲ್ಲಕ ವಿಷಯಗಳನ್ನು ಮಾತಾಡುವುದರಲ್ಲಿ ಹೊತ್ತುಕಳೆಯುವುದು ಬೇಡ. ನಾನು ಮಲ್ಲಯುದ್ಧವನ್ನೆಸಗಲು ತಯಾರಾಗಿದ್ದೇನೆ. ನಾವೀರ್ವರೂ ಮನಃಪೂರ್ವಕವಾಗಿ ಕಾದೋಣ. ಫಲವನ್ನು ನಿರ್ಧರಿಸುವ ಹೊಣೆ ದೇವರದು" ಎಂದು ರುಸ್ತುಂ ಪ್ರತ್ಯುತ್ತರ ಕೊಟ್ಟನು.

ಸೊಹ್ರಾಬನ ಪ್ರಾರ್ಥನೆಗಳೆಲ್ಲವೂ ನಿರರ್ಥಕವಾದುವು. ಕೊನೆಗೆ ಅವನು "ಎಲೈ ವೃದ್ಧ ವೀರನೆ, ನೀನು ರಣಾಂಗಣದಲ್ಲಿ ಪ್ರಾಣತೆರುವುದರ ಬದಲು ನಿನ್ನ ಮನೆಯಲ್ಲಿ ಮಡದಿಮಕ್ಕಳ ಮಧ್ಯದಲ್ಲಿ ದೇವರ ಕರೆಬಂದಾಗ ಜೀವವನ್ನೊಪ್ಪಿಸುವುದು ಒಳ್ಳೆಯದು. ನನ್ನ ವಿವೇಕ ವಚನಗಳನ್ನೇಕೆ ತಿರಸ್ಕರಿಸುತ್ತಿರುವೆ? ನನ್ನ ಹಸ್ತದಿಂದ ನೀನು ಪಂಚತ್ವವನ್ನೈದಬೇಕೆಂಬುದು ದೈವ ಸಂಕಲ್ಪವಾಗಿರಬಹುದು" ಎಂದು ವಿನಯದಿಂದ ನುಡಿದನು.

ರುಸ್ತುಂ ರಕ್ಷನ ಬೆನ್ನಮೇಲಿಂದಿಳಿದನು. ಅವನು ಕುದುರೆಯನ್ನು ಒಂದು ಕಡೆ ಕಟ್ಟಿಹಾಕಿದನು. ವೀರರೀರ್ವರೂ ಬಾಹುಗಳನ್ನು ಅಪ್ಪಳಿಸಿದರು; ತೋಳುಗಳನ್ನು ಬಾಗಿಸಿ, ಅವುಗಳ ಶಕ್ತಿಯನ್ನು ಪರೀಕ್ಷಿಸಿದರು; ಕಣ್ಣುಗಳಿಂದ ಕೆಂಡಗಳನ್ನು ಕಾರಿದರು. ಇನ್ನೊಂದು ಕ್ಷಣದಲ್ಲಿಯೇ ಅವರು ಒಬ್ಬರನ್ನೊಬ್ಬರು ಬಿಗಿಯಪ್ಪಿದರು. ಅವರ ತೋಳುಗಳ ರಕ್ತನಾಳಗಳು ಉಬ್ಬಿದುವು. ಮಾಂಸಖಂಡಗಳು ಉಕ್ಕಿನ ತುಂಡುಗಳಾದುವು. ಅವರು ಮುಷ್ಟಿಗಳನ್ನು ಬಿಗಿಹಿಡಿದು ಪರಸ್ಪರ ಗುದ್ದಿದರು; ಒಬ್ಬರನ್ನೊಬ್ಬರು ಮೇಲೆತ್ತಿ ನೆಲದ ಮೇಲೆ ಒಗೆಯಲು ಹವಣಿಸಿದರು. ಆದರೆ ಇಬ್ಬರೂ ಬೀಳರು. ಬೆಳಗಿನಿಂದ ಮಧ್ಯಾಹ್ನದ ವರೆಗೆ, ಮಧ್ಯಾಹ್ನದಿಂದ ಸಂಜೆಯ ತನಕ ಭೀಷಣ ಮಲ್ಲಯುದ್ಧ ಸಾಗಿತು. ಬೆವರು ಮತ್ತು ನೆತ್ತರುಗಳ ಹೊನಲಿಂದ ನೆಲವು ತೊಯ್ದಿತು. ಅವರು ಅರೆಚಣವಾದರೂ ನೆಣಸನ್ನು ನಿಲ್ಲಿಸಲಿಲ್ಲ. ಕೊನೆಗೆ ಸೊಹ್ರಾಬನು ತನ್ನ ಬಾಹುಗಳನ್ನು ಅಪ್ಪಳಿಸಿ, ಹಸಿದ ಸಿಂಹವು ಆನೆಯ ಮೇಲೆ ಬೀಳುವಂತೆ, ಸೊಕ್ಕಿದಾನೆ ಕದಳೀ ವನವನ್ನು ನುಗ್ಗುವಂತೆ ರುಸ್ತುಮನ ಮೇಲೆ ಬಿದ್ದನು. ಅವನು ರುಸ್ತುಮನ ನೊಂಟವನ್ನು ತನ್ನ ತೋಳುಗಳಿಂದ ಸುತ್ತಿ ಸರ್ವಶಕ್ತಿಯನ್ನುಪಯೋಗಿಸಿ ಅವನನ್ನು ನೆಲದಿಂದ ಮೇಲೆತ್ತಿದನು.

ವೃದ್ಧವೀರನ ನರಗಳು ಶಿಥಿಲವಾದುವು ಅವನು ಸೊಹ್ರಾಬನ ಹಿಡಿತದಿಂದ ತಪ್ಪಿಸಿಕೊಳ್ಳಲು ಶಕ್ತನಾಗಲಿಲ್ಲ. ಇನ್ನೊಂದು ಕ್ಷಣದಲ್ಲಿಯೇ

ಸೊಹ್ರಾಬನು ತಂದೆಯನ್ನು ನೆಲದಮೇಲೆ ಒಗೆದನು. ರುಸ್ತುಮನ ಮೊಗ ಧೂಳಿನಿಂದ ವಿಲೇಪಿತವಾಯಿತು. ಬಾಯಿಯಲ್ಲಿ ಧೂಳು ತುಂಬಿತು. ಹಿಂದೆಂದೂ ಲೋಕೈಕವೀರ ರುಸ್ತುಮನನ್ನು ಹುಡಿಯಲ್ಲಿ ಹೊರಳಿಸಿದ ಕಲಿಗಳಿರಲಿಲ್ಲ. ಆದರೆ ಈ ತರುಣ ವೀರ ಅಸದಳವೆನಿಸಿದುದನ್ನು ಸಾಧ್ಯವೆನಿಸಿದನು. ಕಾಡುಗತ್ತೆಯ ಮೇಲೆ ಸಿಂಹ ಬೀಳುವಂತೆ ಸೊಹ್ರಾಬನು ನೆಲದಲ್ಲಿ ಹೊರಳುತ್ತಿರುವ ತಂದೆಯ ಮೇಲೆ ಬಿದ್ದನು. ಅವನು ರುಸ್ತುಮನ ಎದೆಯಮೇಲೆ ಕುಳಿತು ಹಗೆಯ ಮಸ್ತಕವನ್ನು ತುಂಡರಿಸಲೆಂದು ಕೃಪಾಣವನ್ನು ಒರೆಯಿಂದ ತೆಗೆದನು. ಲೋಕೈಕ ವೀರನು ಈಗ ತನ್ನ ಜೀವ ಉಳಿಸಿಕೊಳ್ಳಲು ಯುಕ್ತಿಯೊಂದನ್ನು ಹುಡುಕಬೇಕಾಯಿತು. "ಒಂದು ನಿಮಿಷ ತಡೆ; ನಿನ್ನ ತಾರ್ತರ ರಾಜ್ಯದಲ್ಲಿ ಯುದ್ಧ ಧರ್ಮಗಳೇನನ್ನೂ ಅನುಸರಿಸುವುದಿಲ್ಲವೇ? ಮಲ್ಲಯುದ್ಧದಲ್ಲಿ ಮೊದಲಸಲ ಬಿದ್ದ ವೀರನ ಶಿರಚ್ಛೇದನ ಮಾಡಕೂಡದು. ಎರಡನೆಯ ಸಲವೂ ಅವನು ಸೋತು ಬಿದ್ದನೆಂದರೆ ಅವನ ರುಂಡವನ್ನು ತುಂಡರಿಸಬಹುದು" ಎಂದು ರುಸ್ತುಂ ಹೇಳಿದನು.

ರುಸ್ತುಮನ ಮಾತುಗಳನ್ನು ಸೊಹ್ರಾಬನು ನಂಬಿದನು. ಅವನು ತನ್ನ ಕರವಾಳವನ್ನು ಒರೆಯಲ್ಲಿ ಸೇರಿಸಿ ತಂದೆಯ ಎದೆಯ ಮೇಲಿನಿಂದ ಎದ್ದನು. ರುಸ್ತುಂ ಹೀಗೆ ಹಗೆಯ ಹಿಡಿತದಿಂದ ಪಾರಾಗಿ ಸ್ವತಂತ್ರನಾದನು. ಭೀಷಣ ಕಾಳಗವನ್ನು ಮುಂದುವರಿಸುವ ಯೋಚನೆಯನ್ನು ಮಾಡದೆ ಸೊಹ್ರಾಬನು ತನ್ನ ಪಾಳೆಯವನ್ನು ಸೇರಿದನು.

ಅಫ್ರಸಿಯಾಬನ ಮಂತ್ರಿಗಳಲ್ಲಿ ಓರ್ವನು ತನ್ನ ಹಿಡಿತದಲ್ಲಿ ಸಿಕ್ಕಿದ ಹಗೆಯನ್ನು ಸೊಹ್ರಾಬನು ವಧಿಸದೆ ಬಿಟ್ಟುದನ್ನು ಕಂಡು ವಿಸ್ಮಯಾಕುಲನಾದನು. ರುಸ್ತುಂ ಇನ್ನೂ ಜೀವಂತನಾಗಿ ಉಳಿದಿರುವುದನ್ನು ಕಂಡು ಅವನಿಗೆ ಸಿಟ್ಟು ಬಂತು. ಅವನು ಸೊಹ್ರಾಬನನ್ನು ಕರೆದು "ಸೋತುಬಿದ್ದ ವೀರನನ್ನು ಕೊಲ್ಲದೆ ಜೀವದಿಂದೇಕೆ ಉಳಿಸಿದೆ"? ಎಂದು ಪ್ರಶ್ನಿಸಿದನು.

"ಮಲ್ಲಯುದ್ಧದಲ್ಲಿ ಒಮ್ಮೆ ಸೋತು ಪತನ ಹೊಂದಿದ ವೀರನನ್ನು ಕೊಲ್ಲುವುದು ಕ್ಷಾತ್ರಧರ್ಮವಲ್ಲ."

"ನಿನಗೆ ಜೀವನದಲ್ಲಿ ಬೇಸರ ಬಂದಿರಬೇಕು." ಅಫ್ರಸಿಯಾಬನ ಮಂತ್ರಿ ಉಸುರಿದನು. "ಬೋನಿನಲ್ಲಿ ಹಿಡಿದ ಸಿಂಹವನ್ನು ಹೊರಬಿಟ್ಟೆಯಲ್ಲ! ನಾಳೆಯ ದಿನದ ಯುದ್ಧದಲ್ಲಿ ನೀನು ಅವನನ್ನು ವಧಿಸಲೇಬೇಕು. 'ಹಗೆಯ ಬಲ

ಹೀನತೆಯನ್ನು ಕಂಡು ಅವನನ್ನು ಕೊಲ್ಲಲು ನಿಮಿಷಗಳನ್ನು ಎಣಿಸಬೇಡ' ಎಂಬ ಒಬ್ಬ ಪ್ರಸಿದ್ಧ ವೀರನ ಮಾತುಗಳನ್ನು ನೀನು ಕೇಳಲಿಲ್ಲವೇ? ಈ ಹಗೆ ಬಲಹೀನನೇನೂ ಅಲ್ಲ."

ಈ ನುಡಿಗಳನ್ನು ಕೇಳಿ ಸೊಹ್ರಾಬನಿಗೆ ದುಃಖವಾಯಿತು. ಆದರೂ ಆತನು ಕೆಚ್ಚಿನಿಂದ, "ನಾಳೆಯೂ ನಾವು ಹೋರಾಡುವೆವು. ಈ ಎರಡು ದಿನಗಳಲ್ಲಿ ನನ್ನದೇ ಮೇಲುಗೈಯಾಗಿದೆ. ನಾಳೆಯೂ ಆತ ನನ್ನ ಬಲಿಷ್ಠ ತೋಳುಗಳಿಗೆ ಸೆರೆ ಸಿಕ್ಕುವನು" ಎಂದು ಮಾರ್ನುಡಿದನು.

ಅಫ್ರಸಿಯಾಬನ ಮಂತ್ರಿ ಹೇಳಿದ ಮಾತುಗಳು ಪ್ರಪಂಚದ ಸರ್ವಯೋಧರೂ ಸ್ಮೃತಿಯಲ್ಲಿಡಬೇಕಾದ ಹೊನ್ನುಡಿಗಳಾಗಿದ್ದುವು. ಈ ನುಡಿಗಳನ್ನು ಮೊದಲು ತಂದೆ ಜಾಲನು ಮಗ ರುಸ್ತುಮನಿಗೆ ಯುದ್ಧವಿದ್ಯೆಗಳನ್ನು ಕಲಿಸುತ್ತಿದ್ದಾಗ ಹೇಳಿದ್ದನು. ಆದರೆ ಈಗ ಜಾಲನ ಮೊಮ್ಮಗ ಈ ಪ್ರಸಿದ್ಧ ಬುದ್ಧಿವಾದವನ್ನು ಅಪರಿಚಿತ ಯೋಧನೊಬ್ಬನಿಂದ ಕಲಿಯಬೇಕಾಗಿ ಬಂತು.

ಸೊಹ್ರಾಬನು ತನ್ನ ಹಿಡಿತದಿಂದ ರುಸ್ತುಮನನ್ನು ಬಿಟ್ಟಮೇಲೆ ಅವನು ಬಿರುಗಾಳಿಯಂತೆ ತನ್ನ ಶಿಬಿರಕ್ಕೆ ತೆರಳುವುದನ್ನು ರುಸ್ತುಂ ನಿಟ್ಟಿಸಿದನು. ಅನಂತರ ಅವನು ಮೆಲ್ಲನೆ ಪಕ್ಕದಲ್ಲಿ ಹರಿಯುತ್ತಿದ್ದ ಓಕ್ಸಸ್ ನದಿಗೆ ತೆರಳಿ, ಮೈಕೈಗಳನ್ನು ತೊಳೆದು ನದಿಯ ಶೀತಲಸ್ವಾದು ಜಲವನ್ನು ಕುಡಿದು ತೃಷೆಯನ್ನಡಗಿಸಿದನು. ಅವನು ತನ್ನ ಬಿಡಾರಕ್ಕೆ ಬಂದು ಮರುದಿನದ ಯುದ್ಧದಲ್ಲಿ ತನ್ನನ್ನು ಜೀತಾರನನ್ನಾಗಿ ಮಾಡಬೇಕೆಂದು ದೇವರನ್ನು ಪ್ರಾರ್ಥಿಸಿದನು.

ಆದರೆ ತನ್ನ ಪ್ರಾರ್ಥನೆಯ ತಾತ್ಪರ್ಯವೇನೆಂಬುದು ರುಸ್ತುಮನಿಗೇ ತಿಳಿಯದು. ಅವನ ಎಳವೆಗೆ ಸಂಬಂಧಿಸಿದ ಕತೆಯೊಂದು ಪ್ರಚಲಿತವಾಗಿದ್ದಿತು. ತಾರುಣ್ಯದಲ್ಲಿ ಅವನು ಅಮಿತ ಬಲವುಳ್ಳವನಾಗಿದ್ದನು. ಅವನು ಬಂಡೆಗಲ್ಲುಗಳ ಮೇಲೆ ಪಾದಗಳನ್ನಿರಿಸಿದಾಗ ಅವನ ದೇಹದ ಭಾರವನ್ನು ತಾಳಲಾರದೆ ಆ ಮಹಾಶಿಲೆಗಳು ಒಡೆದು ಚೂರಾಗಿ ಹೋಗುತ್ತಿದ್ದುವು. ಈ ಅಮಿತ ಶಕ್ತಿಯಿಂದ ಅವನ ಸಂಚಾರಕ್ಕೆ ತೊಡಕುಂಟಾಗುತ್ತಿದ್ದಿತು. ಆಗ ಅವನು "ನನ್ನಲ್ಲಿರುವ ಅಮಿತ ಶಕ್ತಿಯನ್ನು ಕುಗ್ಗಿಸು. ಮುಂದೆ ನನಗೆ ಅಗತ್ಯ ಬಿದ್ದಾಗ ಮಾತ್ರ ಅದನ್ನು ದಯಪಾಲಿಸು." ಎಂದು ದೇವರನ್ನು ಪ್ರಾರ್ಥಿಸಿದನು. ದೇವರು ಈ ಪ್ರಾರ್ಥನೆಗೆ ಕಿವಿಗೊಟ್ಟು ವೀರನಿಗೆ ಅನುಕೂಲ

ವಾಗುವಂತೆ ಅವನ ಹೆಚ್ಚಿನ ಬಲವನ್ನು ಕುಗ್ಗಿಸಿದನಂತೆ. ಆದರೆ ಈಗ ಲೋಕೈಕ ವೀರನಿಗೆ ಪ್ರಾಣಭಯ ಒದಗಿದ್ದಿತು. ಸೊಹ್ರಾಬನು ತನಗಿಂತಲೂ ಬಲಶಾಲಿಯೆಂದು ಅವನ ಮನಸ್ಸು ಅಂಜಿದ್ದಿತು. ಆದುದರಿಂದ ತನಗೆ ಶಕ್ತಿಯನ್ನು ದಯಪಾಲಿಸಬೇಕೆಂದು ಅವನು ದೇವರನ್ನು ಪ್ರಾರ್ಥಿಸಿದನು.

ದೇವರು ರುಸ್ತುಮನ ಪ್ರಾರ್ಥನೆಯನ್ನು ಕೇಳಿದನು. ಅವನ ಅಂಗಾಂಗಗಳಲ್ಲೆಲ್ಲ ನವಶಕ್ತಿ ಸಂಚರಿಸತೊಡಗಿತು. ಧವಳಾಸುರನು ಜೀವಂತನಾಗಿದ್ದಾಗ ಮತ್ತು ತಾನು ಏಳು ಸಾಹಸಗಳನ್ನು ಎಸಗಲು ಹೊರಟಾಗ ರುಸ್ತುಮನ ದೇಹದಲ್ಲಿದ್ದ ಮಹಾಶಕ್ತಿಯೇ ಈಗ ಮೈಯಲ್ಲಿ ತುಂಬಿ ತುಳುಕಿತು. ಆದರೆ ಅವನ ಮುಖ ಕಾಂತಿಪೂರ್ಣವಾಗಲಿಲ್ಲ. ಕ್ಷತಹೊಂದಿದ ಅವನ ಅಭಿಮಾನ ನೇರ್ಪಡಲಿಲ್ಲ.

ಮರುದಿನ ವೀರರೀರ್ವರೂ ರಣರಂಗದಲ್ಲಿ ಕಲೆತರು. ಅಧಿಕೋತ್ಸಾಹ ಸಂತೋಷಗಳಿಂದ ತನ್ನನ್ನು ಎದುರಿಸಲು ಬಂದ ವೃದ್ಧ ವೀರನನ್ನು ಕಂಡು ಸೊಹ್ರಾಬನಿಗೆ ಸೋಜಿಗವಾಯಿತು. "ಈ ದಿನವೂ ನನ್ನನ್ನು ಎದುರಿಸಲೆಂದು ನೀನು ಬಂದಿರುವೆಯಲ್ಲ!" ಎಂದು ದರ್ಪದ ಧ್ವನಿಯಲ್ಲಿ ಸೊಹ್ರಾಬನು ಹೇಳಿದನು. "ನಿನಗೆ ಕೊನೆಗಾಲ ಹತ್ತಿರ ಬಂದಿರುವುದು. ನನ್ನ ಕೈಯಿಂದ ಚಿರಶಾಂತಿಯನ್ನು ಪಡೆಯಬೇಕೆಂದು ಭಾವಿಸಿ ನೀನು ಬಂದಹಾಗಿದೆ. ಎಲೈ ಮುದುಕನೇ, ನೀನು ನನ್ನ ಹಿತವಚನಗಳಿಗೆ ಕಿವಿಗೊಡುವವನಲ್ಲ. ಈಗ ಜೀವವುಳಿಸಿಕೊಳ್ಳಲು ಯುಕ್ತಿಯೇನೆಂದು ನೀನು ಯೋಚಿಸುವ ಹಾಗಿದೆ. ಎರಡುಸಲ ನಾನು ನಿನ್ನ ನರೆಗೂದಲಿಗೆ ಗೌರವಕೊಟ್ಟೆ. ಎರಡುಸಲ ನಿನ್ನನ್ನು ಕಂಡು ನನ್ನ ಹೃದಯ ಆರ್ದ್ರವಾಯಿತು"

"ಎಲೈ ತರುಣನೇ, ನಿನ್ನಲ್ಲಿ ದುರಹಂಕಾರ ತುಂಬಿದೆ." ರುಸ್ತುಂ ಕೋಪದಿಂದ ಗರ್ಜಿಸಿದನು. "ಯಾವ ವೀರನೂ ನಿನ್ನಂತೆ ಆತ್ಮಸ್ತುತಿ ಮಾಡಿಕೊಳ್ಳಬಾರದು. ಅಫ್ರಸಿಯಾಬನ ನರ್ತಕಿಯರ ಗಡಣದಲ್ಲಿ ದಿನಗಳೆಯುತ್ತಿರುವ ನೀನು ಇದಕ್ಕಿಂತಲೂ ಹೆಚ್ಚು ಏನು ತಿಳಿಯಬಲ್ಲೆ? ವೃದ್ಧಾಪ್ಯದಿಂದ ಶಕ್ತಿಗುಂದಿದ ನನ್ನ ತೋಳುಗಳು ಈಗ ನಿನ್ನ ಸೊಕ್ಕನ್ನು ಮುರಿಯಲು ಶಕ್ತವಾಗಿರುವುವು."

ಈರ್ವರೂ ಕುದುರೆಗಳ ಮೇಲಿಂದಿಳಿದು ಕ್ರೋಧಾನಲ ಪರಿತಪ್ತ ನೇತ್ರಗಳಿಂದ ಪರಸ್ಪರ ನಿಟ್ಟಿಸಿದರು. ಎರಡು ಪರ್ವತಗಳು ಒಂದರ ಮೇಲೊಂದು

ಬೀಳುವಂತೆ ಒಬ್ಬರು ಇನ್ನೊಬ್ಬರ ಮೇಲೆ ಬಿದ್ದರು; ಭೀಷಣ ಸಂಗ್ರಾಮವನ್ನೆ ಸಗತೊಡಗಿದರು. ತಂದೆ ಮಗಂದಿರ ಕಾಳಗವನ್ನು ತಾನು ನೋಡಲಾರೆ ನೆಂಬಂತೆ ಉದಯರವಿ ಮುಗಿಲ ಜವನಿಕೆಯ ಹಿಂದೆ ಮರೆಯಾದನು. ಅವ ರೀರ್ವರೂ ಕಾದುತ್ತಿರುವ ಎಡೆಯನ್ನು ಕತ್ತಲೆ ಬಳಸಿತು. ಎರಡು ಶಿಬಿರಗಳ ಸೈನಿಕರಿಗೆ ವೀರರೀರ್ವರೂ ಕಾಣಿಸದಾದರು. ಅವರೀರ್ವರೂ ಪರಸ್ಪರ ಮಳೆಗರೆಯುತ್ತಿರುವ ಪ್ರಹಾರ ಧ್ವನಿಗಳು ಕಾಡನಡುವೆ ಮರಗಳನ್ನು ತರಿವ ಧ್ವನಿಗಳಂತೆ ಕೇಳಿಸುತ್ತಿದ್ದುವು. ಅವರ ಪಾದಾಹತಿಗಳಿಂದ ಮೇಲೆದ್ದ ಧೂಳು ಮೇಘಮಂಡಲವನ್ನು ಮುಟ್ಟಿತು. ಮುಂದೊದಗಲಿರುವ ದುರಂತವನ್ನು ಯೋಚಿಸಿ ಭಯದಿಂದ ಹೆಪ್ಪುಗಟ್ಟಿತೆಂಬಂತೆ ಓಕ್ಸಸ್ ನದಿ ಹರಿವುದನ್ನು ನಿಲ್ಲಿಸಿತು. ವೀರರು ಒಬ್ಬರು ಇನ್ನೊಬ್ಬರನ್ನು ಬಳಸಿದರು; ಸುತ್ತುಗಟ್ಟಿದರು; ತೋಳು ಕೊರಳುಗಳನ್ನು ಹಿಡಿದು ಬಾಗಿಸಲು ಹವಣಿಸಿದರು; ಕಾಲುಗಳನ್ನು ಹಿಡಿದೆತ್ತಿ ಕೆಡಹಲು ಪ್ರಯತ್ನಿಸಿದರು. ಆದರೆ ಯಾರ ಕೈಯೂ ಮೇಲಾ ಗದು. ಯಾರೂ ಗೆಲ್ಲರು. ಈರ್ವರೂ ಸಮದಂಡಿಯಲ್ಲಿ ಕಾದಿದರು.

ಹೋರಾಟ ಮುಂದುವರಿದಂತೆ ವೀರರಿಗೆ ರೋಷವಿಮ್ಮಡಿಸಿತು. ರುಸ್ತುಂ ತೀಕ್ಷ್ಣವೇಗದಲ್ಲಿ ಸೊಹ್ರಾಬನನ್ನು ಭಳಸಿ, ತರುಣನ ತಲೆಯನ್ನು ಹಿಂಭಾಗಕ್ಕೆ ಬಾಗಿಸಿ ನೆಲದ ಮೇಲೆ ಕೆಡಹಿದನು. ಸೊಹ್ರಾಬನು ಏಳುವನಿತರಲ್ಲಿ ರುಸ್ತುಂ ಮಿಂಚಿನಂತೆ ತನ್ನ ಕಠಾರಿಯನ್ನು ತೆಗೆದು 'ರುಸ್ತುಂ' ಎಂದು ಗರ್ಜಿಸಿದನು. ರುಸ್ತುಂ ಎಂಬ ಹೆಸರನ್ನು ಕೇಳಿ ಸೊಹ್ರಾಬನು ಸ್ತಂಭಿತನಾದನು. ಅವನು ಆತ್ಮರಕ್ಷಣೆಯ ಪ್ರಯತ್ನವನ್ನು ಕೈಗೊಳ್ಳಲಿಲ್ಲ.

ಇಷ್ಟರಲ್ಲಿ ರುಸ್ತುಂ ಕಠಾರಿಯಿಂದ ಸೊಹ್ರಾಬನ ವಕ್ಷಸ್ಥಳವನ್ನು ಭೇದಿಸಿ ಯಾಗಿತ್ತು. ಆಗ ರಕ್ಷ ಅಲೌಕಿಕ ರೀತಿಯಲ್ಲಿ ಭಯಂಕರವಾಗಿ ಕೆನೆಯಿತು. ಮರಣೋನ್ಮುಖನಾದ ತರುಣನನ್ನು ನೋಡುತ್ತಾ ರುಸ್ತುಂ ನಿಂತಿದ್ದನು. ಮೋಡಗಳು ಮರೆಯಾಗಲು ನೇಸರು ಬೆಳಕನ್ನು ಹರಹಿದನು. ಕಾಳಗ ಕೊನೆಗೊಂಡಿತೆಂದು ಎರಡು ಶಿಬಿರಗಳೂ ಅರಿತವು.

"ಸೊಹ್ರಾಬ್, ಇರಾನಿನ ವೀರಯೋಧನ ಕೀರ್ತಿಯನ್ನು ಮುರಿದು ನೀನು ಖ್ಯಾತಿಗಳಿಸಿ ಅಫ್ರಸಿಯಾಬನನ್ನು ಆಹ್ಲಾದಗೊಳಿಸಬೇಕೆಂದು ಯೋಚಿ ಸಿದ್ದಿಯಲ್ಲವೇ? ಒಂದು ವೇಳೆ ಲೋಕೈಕ ವೀರ ರಸ್ತುಮನೇ ದ್ವಂದ್ವ ಯುದ್ಧಕ್ಕೆ ಬರಬಹುದೆಂದೂ, ಹಾಗೆ ಅವನು ಬಂದರೆ ಸವಿಮಾತುಗಳಿಂದ

ಅವನನ್ನು ಮೋಸಗೊಳಿಸಿ ಆತನಿಂದ ಪಾರಿತೋಷಕಗಳನ್ನು ಪಡೆಯ ಬೇಕೆಂದೂ, ಓಕ್ಸಸ್ ನದಿಯ ತೀರದಲ್ಲಿ ತಾನು ಪ್ರದರ್ಶಿಸಿದ ಪರಾಕ್ರಮದ ಗುರುತುಗಳೆಂದು ಆ ಒಡವೆಗಳನ್ನು ತಾರ್ತರ ವೀರರಿಗೆಲ್ಲ ತೋರಿಸಿ ಆತ್ಮ ಶ್ಲಾಘನೆ ಗೈಯಬೇಕೆಂದೂ ಇದ್ದೆಯಲ್ಲವೇ? ಈಗ ನೀನು ಅಜ್ಞಾತನಾದ ಒಬ್ಬ ಸಾಮಾನ್ಯ ಯೋಧನಿಂದ ಹತನಾದೆ. ನಿನ್ನ ದೇಹ ಮರಳುಗಾಡಿನ ತೋಳಗಳಿಗೆ ಉಣಿಸಾಗುವುದು." ಎಂದು ಜೇತಾರ ರುಸ್ತುಂ ಮೃತ್ಯು ಮುಖದಲ್ಲಿದ್ದ ಸೊಹ್ರಾಬನನ್ನು ಅಣಕಿಸಿದನು.

"ನಿನ್ನ ಅಹಂಭಾವದ ಆತ್ಮಶ್ಲಾಘನೆಯನ್ನು ಸಾಕುಮಾಡು!" ನೋವಿನಿಂದ ನರಳುತ್ತಿದ್ದ ಸೊಹ್ರಾಬನ ಕಂಠದಿಂದ ಧೀರೋಕ್ತಿಗಳು ಹೊಮ್ಮಿದುವು. "ನನ್ನನ್ನು ಕೊಂದುದು ನೀನಲ್ಲ. ನಿನ್ನ ಕೊರಳಿಂದ ಹೊಮ್ಮಿದ 'ರುಸ್ತುಂ' ಎಂಬ ನುಡಿ ನನ್ನನ್ನು ಕೊಂದಿತು. ನೀನು ವಿಧಿಯ ಕೈಯಲ್ಲಿದ್ದ ನನ್ನನ್ನು ಕೊಲ್ಲಲು ಒಂದು ಉಪಕರಣವಾಗಿ ಪರಿಣಮಿಸಿದೆಯಲ್ಲದೆ ಬೇರೇನಿಲ್ಲ. ತಪ್ಪು ನನ್ನದೇ ಆಗಿದೆ. ಸಾಯುವ ಮುನ್ನ ತಂದೆಯ ಮೊಗವನ್ನೊಮ್ಮೆ ನೋಡಿದ್ದರೆ ಸಾಕಾಗುತ್ತಿದ್ದಿತು. ಅವನ ಪರಾಕ್ರಮದ ಕತೆಗಳು ಇನ್ನು ಮುಂದೆ ನನ್ನ ಜೀವನವನ್ನು ತಣಿಸವು. ಆತನನ್ನು ಗುರುತಿಸಬಲ್ಲ ಲಕ್ಷಣಗಳನ್ನು ತಾಯಿ ತಿಳಿಸಿದ್ದಳು. ಆದರೆ ಈ ಅನ್ವೇಷಣೆಯಲ್ಲಿ ಅದೃಷ್ಟ ಹೀನನಾಗಿ ಕೊನೆಯುಸಿರು ಎಳೆಯುವ ಗಳಿಗೆ ಬಂದಿದೆ. ಆದರೆ ನಿನ್ನ ಆತ್ಮಸ್ತುತಿ ಕ್ಷಣಿಕವಾದುದು. ನೀನು ಕಡಲನ್ನು ಸೇರಿ ಮೀನಾಗಿ ರೂಪಾಂತರ ಹೊಂದಿದರೂ, ಆಕಾಶದಲ್ಲಿ ಬೆಳಗುವ ತಾರೆಗಳನ್ನು ಸೇರಿ ಅಲ್ಲಿ ಅಡಗಿದರೂ ನನ್ನ ತಂದೆ ರುಸ್ತುಮನ ಭೀಷಣ ಪ್ರತೀಕಾರಜ್ವಾಲೆಯಿಂದ ನೀನು ತಪ್ಪಿಸಿ ಕೊಳ್ಳಲಾರೆ!"

## ಹ ದಿ ನಾ ಲ್ಕು

ಸೊಹ್ರಾಬನು ಹೇಳಿದ ಕೊನೆಯ ಮಾತನ್ನು ಕೇಳಿ ಮರಣ ಸದೃಶವಾದ ಭೀಕರ ಭಯವು ರುಸ್ತುಮನನ್ನು ಆವರಿಸಿತು. ಸ್ವಲ್ಪ ಸಮಯದ ವರೆಗೆ ಈ ಲೋಕವು ಅವನ ಪ್ರಜ್ಞೆಯಿಂದ ಮರೆಯಾಯಿತು. ಅವನು ಮರಳ ರಾಶಿಯ ಮೇಲೆ ನೈಮರೆತು ಬಿದ್ದನು. ಕೊನೆಗೆ ಅವನು ದುಃಖದ ಧ್ವನಿ

ಯಿಂದ "ನೀನು ರುಸ್ತುಮನ ವಿಚಾರವನ್ನು ತಿಳಿದಿರುವೆ. ನೀನು ರುಸ್ತುಮನ ರಕ್ತದವನೆಂದು ಹೇಳಲು ಯಾವ ಗುರುತುಗಳಿವೆ?" ಎಂದು ಕೂಗಾಡಿದನು.

"ನಾನು ರುಸ್ತುಮನ ಮಗ; ನನ್ನ ತಾಯಿ ತಾಹಮಿನೆ." ಅಳಲು ತುಂಬಿದರೂ ಅಭಿಮಾನದಿಂದ ಕೂಡಿದ ದನಿಯಲ್ಲಿ ಸೊಹ್ರಾಬನು ಘೂರ್ನಾಡಿ ದನು. "ಸುಮೆಂಗದ ಅರಮನೆಯಲ್ಲಿ ನಾನು ಮರಳಿ ಬರುವುದನ್ನು ಎದುರು ನೋಡುತ್ತಾ ಅವಳು ದಿನಗಳೆಯುತ್ತಿರುವಳು."

ಈಗ ರುಸ್ತುಮನ ಮನಸ್ಸನ್ನು ಬಾಧಿಸಿದ್ದ ಸಂದೇಹ ಜಗುಳಿತು. ಆ ವೀರನು ಶೋಕದ ವಜ್ರಪಾತದಿಂದ ಸ್ಮೃತಿತಪ್ಪಿ ನೆಲದಮೇಲೆ ಬಿದ್ದನು. ಅವನು ಮರಳಿ ಎಚ್ಚತ್ತು, "ನೀನು ರುಸ್ತುಮನ ಮಗನೆಂಬುದಕ್ಕೆ ಆಧಾರ ತೋರಿಸು. ಏಕೆಂದರೆ ನಾನೇ ರುಸ್ತುಮನಾಗಿರುವೆನು!" ಎಂದು ತೊದಲಿದನು.

"ನೀನು ರುಸ್ತುಮನಾದರೆ ಬಹುಕ್ರೂರ ಹೃದಯನೇ ಸರಿ!" ದಾರುಣ ವೇದನೆಯನ್ನು ಅನುಭವಿಸುತ್ತಿದ್ದ ಸೊಹ್ರಾಬನಿಗೆ ತನ್ನೊಡನೆ ಕಾದಿದವನು ರುಸ್ತುಮನೆಂದು ಅರಿವಾದಾಗ ವಿಸ್ಮಯವಾಯಿತು. "ನಿನ್ನೊಡನೆ ಕಾದು ವುದು ಬೇಡವೆಂದು ನನ್ನ ಅಂತರಂಗ ಹೇಳುತ್ತಿದ್ದುದರಿಂದ ನಾನು ಎಷ್ಟು ಸಲ ನಿನ್ನ ಸಂಗಡ ಶಾಂತಿಯ ಮಾತನ್ನೆತ್ತಿದೆ. ಆದರೆ ನೀನು ಒಪ್ಪಲಿಲ್ಲ. ಮಗನಲ್ಲಿ ಎಳ್ಳಷ್ಟೂ ಮಮತೆಯಿಲ್ಲದ ವಿಚಿತ್ರ ತಂದೆಯೆಂದರೆ ನೀನೇ ಸರಿ! ನನ್ನ ಲೋಹ ಕವಚವನ್ನು ಬಿಚ್ಚಿ ಅಂಗಿಯನ್ನು ಸೀಳಿ ನನ್ನ ತೋಳನ್ನು ನೋಡು. ಅಲ್ಲಿರುವ ಮುದ್ರಿಕೆ ನಿನ್ನ ಸಂದೇಹವನ್ನು ಪರಿಹರಿಸುವುದು. ಸುಮೆಂಗದಲ್ಲಿ ವಾದ್ಯ ಘೋಷಗಳು ಮೊಳಗುತ್ತಿದ್ದಾಗ, ನನ್ನ ತಾಯಿ ನನ್ನನ್ನು ಎದೆಗಪ್ಪಿಕೊಂಡು ಕಣ್ಣೀರ ಹನಿಗಳನ್ನು ನನಗೆ ಅಭಿಷೇಕ ಮಾಡುತ್ತಾ ನನ್ನ ತೋಳಿಗೆ ಮುದ್ರಿಕೆ ಯನ್ನು ತೊಡಿಸಿದಳು. ಅವಳು 'ಪರಾಕ್ರಮಶಾಲಿಯಾದ ನಿನ್ನ ತಂದೆ ಧರಿಸಿ ದಂತೆಯೇ ಈ ಮುದ್ರಿಕೆಯನ್ನು ಧರಿಸು. ಅದು ರುಸ್ತುಮನ ಪುತ್ರಲಾಂಛನ ವಾಗಿದೆ. ಕಾಲ ಒದಗಿದಾಗ ಅದು ನಿನಗೆ ಕೀರ್ತಿಯನ್ನೊದಗಿಸುವುದು' ಎಂದು ಹರಸಿದಳು."

ಸೊಹ್ರಾಬನ ತೋಳಮೇಲಿನ ಲೋಹಕವಚವನ್ನು ರುಸ್ತುಂ ಸೀಳಿ ಅವನ ಬಲದೋಳನ್ನು ನಿಟ್ಟಿಸಿದಲ್ಲಿ, ಅವನು ತಾಹಮಿನೆಗೆ ಕೊಟ್ಟಿದ್ದ ಮುದ್ರಿಕಾಭರಣ ಶೋಭಿಸುತ್ತಿದ್ದಿತು. ಅದರಲ್ಲಿ ಬಿಳಿಗೂದಲಿನ ಜಾಲನನ್ನು ಎಲ್‌ಬ್ರೂಜ ಪರ್ವತದಲ್ಲಿ ಸಲಹಿದ ಸಿಮುರಾಗ ಪಕ್ಷಿಯ ಚಿತ್ರವಿದ್ದಿತು.

ಈಗ ರುಸ್ತುಮನಲ್ಲಿ ಉಳಿದಿದ್ದ ಅಲ್ಪ ಸಂದೇಹದ ಮಂಜು ಸಹ ಕರಗಿ ನೀರಾ ಯಿತು. ಸೊಹ್ರಾಬನು ತನ್ನ ಮಗನೆಂಬುದು ಅವನಿಗೆ ಮನದಟ್ಟಾಯಿತು.

ರುಸ್ತುಮನನ್ನು ಶೋಕಾಗ್ನಿ ಬಾಧಿಸಿ ಅವನ ಹೃದಯವನ್ನು ದಹಿಸ ತೊಡಗಿತು. ಅವನು ಮತಿಗೆಟ್ಟು ತನ್ನ ತೊಡಿಗೆಗಳನ್ನು ಹರಿದುಕೊಂಡನು. ತಲೆಯ ಮೇಲೆ ಧೂಳನ್ನು ಸುರಿದುಕೊಂಡನು. "ಕಂದಾ! ಕಂದಾ! ನಾನು ಕೈಯಾರೆ ನಿನ್ನನ್ನು ಕೊಂದೆನಲ್ಲ!" ಎಂಬ ಶೋಕೋದ್ಗಾರ ಅವನ ಕೊರಳಿಂದ ಹೊಮ್ಮಿತು.

ಸೊಹ್ರಾಬನು ತಾನು ಇದ್ದಲ್ಲಿಂದ ಮೆಲ್ಲನೆ ತಂದೆಯಿದ್ದಲ್ಲಿಗೆ ಹರಿದು ಹೋದನು; ತನ್ನ ತೋಳುಗಳನ್ನು ಚಾಚಿ ತಂದೆಯ ಕೊರಳನ್ನು ಅಪ್ಪಿದನು. ತಂದೆಯ ಹಣೆಯನ್ನು ಚುಂಬಿಸಿದನು. ಅವನು ಮೂರ್ಛೆಗೊಂಡ ತಂದೆ ಯನ್ನು ಕರೆಯತೊಡಗಿದನು. ರುಸ್ತುಮನಿಗೆ ಪ್ರಜ್ಞೆ ಬಂತು. ಅವನು ತನ್ನ ತಲೆಗೂದಲನ್ನು ಮತ್ತು ಗಡ್ಡವನ್ನು ಕಿತ್ತುಕೊಂಡನು. ಅವನ ವಿಶಾಲ ವಕ್ಷ ಸ್ಥಲ ಸಹನಾತೀತ ವೇದನೆಗೊಳಗಾಯಿತು.

ರುಸ್ತುಂ ಕರಾಳವನ್ನೆತ್ತಿ, ತನ್ನ ಎದೆಯನ್ನು ತಿವಿದು ತನ್ನ ಬಾಳುವೆಯನ್ನು ಕೊನೆಗೊಳಿಸಲು ಆಲೋಚಿಸಿದನು. ತಂದೆ ಕತ್ತಿಯನ್ನು ತೆಗೆದುಕೊಂಡಾಗ ಅವನ ಮನಸಿನಲ್ಲಿರುವ ಆಲೋಚನೆ ಏನೆಂಬುದು ಮಗನಿಗೆ ತಿಳಿಯಿತು. "ಅಪ್ಪಾ, ತಡೆ; ನೀನಲ್ಲ ನನ್ನನ್ನು ಕೊಂದುದು! ನಾನು ನಿನ್ನ ಕೈಯಿಂದ ಸಾಯಬೇಕೆಂಬುದು ದೈವಸಂಕಲ್ಪ. ವಿಧಿಯ ಇಚ್ಛೆಯನ್ನು ಈಡೇರಿಸುವ ಭಯಂಕರ ಕರ್ತವ್ಯ ನಿನ್ನ ಪಾಲಿಗೆ ಬಂದಿತು ನಾನು ನನ್ನ ತಂದೆಯನ್ನ ರಸುವ ಕಾರ್ಯದಲ್ಲಿ ಕೃತಾರ್ಥನಾದೆ. ನಿನ್ನ ಸ್ಪರ್ಶಸುಖವನ್ನೊಮ್ಮೆ ಅನುಭ ವಿಸುವೆನು. ನಿನ್ನ ನಿಡುದೋಳುಗಳಲ್ಲಿ ನನ್ನನ್ನು ಎತ್ತಿಕೋ. ನಿನ್ನ ಕಣ್ಣು ಗಳಿಂದ ಒಸರುವ ಬಾಷ್ಪ ಪ್ರವಾಹ ನನ್ನ ಕೆನ್ನೆಗಳನ್ನು ತೊಳೆಯಲಿ. ನಾನು ಕಿವಿತುಂಬಾ ಕೇಳಲು ಬಯಸಿದ 'ಬಾ ನನ್ನ ಕಂದಾ' ಎಂಬೆರಡು ಮಾತು ಗಳಿಂದ ನನ್ನನ್ನು ಕರೆ. ನಾನು ನುಡಿಗಳಾಚೆಗಿನ ನಾಡಿಗೆ ತೆರಳುತ್ತಿರುವಾಗ ಅವೇ ನಾನು ಕೇಳಿದ ಕೊನೆಯ ಮಾತುಗಳಾಗಲಿ!" ಎಂಬ ಉದ್ಗಾರ ಸೊಹ್ರಾಬನ ಗಂಟಲಿಂದ ಹೊರಹೊಮ್ಮಿತು.

ಇತ್ತಂಡಗಳ ಪಡೆಯಾಳುಗಳು ದೂರನಿಂತು ಆ ಶೋಕಪೂರ್ಣ ದೃಶ್ಯ ವನ್ನು ನಿಟ್ಟಿಸುತ್ತಿದ್ದರು. ರುಸ್ತುಮನ ರಕ್ಷನು ಸುಮ್ಮನೆ ದೂರ ನಿಂತಿತ್ತು.

ರುಸ್ತುಂ ದುಃಖದ ಆವೇಗವನ್ನು ತಡೆಯಲಾರದೆ ಮರಣಹೊಂದಿದನೆಂದು ಇರಾನಿಯರು ಅಂಜಿದರು. ಭಯಭರಿತನಾದ ಕಾಯಕೋಸ ಚಕ್ರವರ್ತಿ ಯುದ್ಧದ ಕೊನೆಯೇನಾಯಿತೆಂದು ಅರಿಯಲು ದೂತರನ್ನು ಅಟ್ಟಿದನು. ಅವರು ಸೊಹ್ರಾಬನಿದ್ದೆಡೆಗೆ ಬಂದರು. ಅವರೊಡನೆ ರಕ್ಷನೂ ಬಂತು. ತಂದೆ ಮಗಂದಿರ ಅಳಲನ್ನು ಕಂಡು ತಾನೂ ದುಃಖದಿಂದ ಕಣ್ಣೀರು ಮಿಡಿಯಿತು. ಕುದುರೆಯ ಕಂಬನಿ ತಂದೆಮಗಂದಿರ ಕಣ್ಣೀರ ಹೊನಲಲ್ಲಿ ಮಿಲನವಾಯಿತು.

ತಾವಿರುವೆಡೆಗೆ ಬರುತ್ತಿದ್ದ ಸೈನಿಕರ ಹಜ್ಜೆಗಳ ಸದ್ದು ಸೊಹ್ರಾಬನಿಗೆ ಕೇಳಿಸಿತು. ಅವನು ತಂದೆಯ ಸಂಗಡ "ನನ್ನ ಪ್ರಾಣವನ್ನು ಆಹುತಿಯಾಗಿ ತೆಗೆದುಕೊಂಡ ಈ ಯುದ್ಧ ಇಲ್ಲಿಗೆ ಕೊನೆಗಾಣಲಿ. ಹೆಮ್ಮೆಯಿಂದ ನಿನ್ನನ್ನು ಅರಸಲು ಹೊರಟ ನನಗೆ ನೆರವಾಗಲು ತಾರ್ತರರು ಬಂದರು. ನಿನಗೆ ರಾಜ್ಯಭಾರದಲ್ಲಿ ನೆರವನ್ನೀಯುತ್ತಾ, ಇಳೆಯ ದುಷ್ಟಮನ್ನೆಯರನ್ನೆಲ್ಲಾ ಧ್ವಂಸ ಮಾಡಬೇಕೆಂದು ನಾನು ಬಯಸಿದ್ದೆ. ಆದರೆ ದೈವಲೀಲೆ ವಿಪರೀತವಾಗಿ ಪರಿಣಮಿಸಿತು. ನನ್ನ ರಕ್ತ ನಿನ್ನ ಹಸ್ತಗಳನ್ನು ಕಲಂಕಗೊಳಿಸಿತು." ಎಂದು ನಿಟ್ಟುಸಿರುಬಿಟ್ಟನು.

ಶಿಸ್ತಾನದಿಂದ ಬಂದ ಸೈನಿಕರು ರುಸ್ತುಂ ಜೀವಂತನಾಗಿರುವುದನ್ನು ಕಂಡು ಸಂತೋಷಗೊಂಡರು. ಲೋಕೈಕವೀರನ ಕಣ್ಣುಗಳಿಂದ ಕಂಬನಿ ಸುರಿವುದಕ್ಕೆ ಕಾರಣವನ್ನು ಅವರು ತಿಳಿಯದೆ, ಸಂಭ್ರಾಂತರಾಗಿ ಮರವಟ್ಟು ನಿಂತರು. ಅಂದಿನ ಕಾಳಗ ದುರಂತದಲ್ಲಿ ಕೊನೆಗೊಂಡಿತೆಂಬುದನ್ನು ಅರಿದು, ಅವರೂ ತಮ್ಮ ಸ್ವಾಮಿಯೊಡನೆ ಕಣ್ಣೀರು ಸುರಿಸಿದರು. ಅವರ ಕೊರಳುಗಳಿಂದ ಹೊರಟ ಶೋಕೋದ್ಗಾರಗಳು ಬಾನನ್ನು ಸೀಳಿದುವು

"ಈ ಕಾಳಗ ಕೊನೆಗೊಳ್ಳಲಿ!" ರುಸ್ತುಂ ಆಣತಿಗೈದನು. "ಇಡೀ ಪಡೆಯ ನೆತ್ತರಿಗಿಂತಲೂ ಅಮೂಲ್ಯವಾದ ನೆತ್ತರಿಂದು ಬಸಿದುಹೋಯಿತು."

ಅನಂತರ ರುಸ್ತುಂ ತನ್ನ ಸೋದರನ ಕಡೆಗೆ ದೃಷ್ಟಿಯನ್ನು ಹೊರಳಿಸಿ, "ಇಂದು ನನ್ನ ಉದರದಲ್ಲಿ ಜನಿಸಿದ ಮಗನನ್ನೇ ನಾನು ಕೊಂದೆ. ಸಂಧಿಯನ್ನು ಮಾಡಿಕೊಂಡು ತನ್ನ ರಾಜ್ಯಕ್ಕೆ ಹಿಂದಿರುಗಬೇಕೆಂದು ತಾರ್ತರ ನಾಯಕನಿಗೆ ತಿಳಿಸು." ಎಂದು ಆಜ್ಞೆಯನ್ನು ನೀಡಿದನು.

ಅಫ್ರಸಿಯಾಬನ ಮಂತ್ರಿ ಈ ದುಃಖಾಂತ ಕತೆಯನ್ನು ಕೇಳಿ, "ಹೆಜೀ

ಠನು ರುಸ್ತುಮನನ್ನು ಸೊಹ್ರಾಬನಿಗೆ ತೋರಿಸಬಹುದಿತ್ತು. ಆದರೆ ಅವನು ಹಾಗೆ ಮಾಡದೆ ಸೊಹ್ರಾಬನಿಗೆ ಸುಳ್ಳು ಹೇಳಿದನು." ಎಂದು ವ್ಯಸನ ನಟಿಸಿದನು.

ರುಸ್ತುಮನ ಸೋದರನು ಸೆರೆಯಾಳಾಗಿದ್ದ ಹೆಜೀರನನ್ನು ಕರೆದು ಕೊಂಡು ಬಂದನು. ಅವನ ಅಪರಾಧವನ್ನು ಮನ್ನಿಸಿ, ಅವನಿಗೆ ಜೀವದಾನ ಕರುಣಿಸಬೇಕೆಂದು ಸೊಹ್ರಾಬನು ತಂದೆಯನ್ನು ಬೇಡಿದನು. ರುಸ್ತುಂ ಹೆಜೀರನನ್ನು ಕ್ಷಮಿಸಿದನು.

ಮರಣ ಶಯ್ಯೆಯಲ್ಲಿ ಮಲಗಿರುವವರನ್ನು ಬದುಕಿಸಬಲ್ಲ ದಿವ್ಯ ಸಂಜೀವಿನಿ ಕಾಯಕೋಸನ ವಶದಲ್ಲಿದೆ ಎಂಬ ಸಂಗತಿ ರುಸ್ತುಮನ ಸ್ಮರಣೆಗೆ ಬಂದು, ಅವನು ಆಪ್ತನಾದ ಗುದರಾಜನನ್ನು ಕರೆದು "ನೀನು ಹೋಗಿ ಚಕ್ರವರ್ತಿಯಿಂದ ಆ ಸಂಜೀವಿನಿಯನ್ನು ತೆಗೆದುಕೊಂಡು ಬಾ. ಅದರಿಂದಲಾದರೂ ನನ್ನ ಮಗನ ಪ್ರಾಣ ಉಳಿಯಲಿ." ಎಂದು ಹೇಳಿ ಅವನನ್ನು ಚಕ್ರವರ್ತಿಯ ಸನ್ನಿಧಿಗೆ ಅಟ್ಟಿದನು.

ಆದರೆ ಕಾಳಸರ್ಪದಂತೆ ಕಾಯಕೋಸ ಚಕ್ರವರ್ತಿಯ ಹೃದಯ ನಂಜಿನಿಂದ ತುಂಬಿದುದು. ಹೇಡಿಯಾದ ಅವನ ಅಂತರಂಗ ಅಸೂಯೆ ಈರ್ಷೆಗಳ ನೆಲೆಯೂರಾಗಿದ್ದಿತು. "ಆ ದುರಹಂಕಾರಿಯಾದ ತರುಣ ನನ್ನ ಮೇಲೆ ಸುರಿಸಿದ ನಿಂದೋಕ್ತಿಗಳನ್ನು ಎಂದಿಗೂ ನಾನು ಮರೆಯಲಾರೆ." ಸಂಜೀವಿನಿಯನ್ನು ಕೊಡಲು ತಿರಸ್ಕರಿಸುತ್ತಾ ಕಾಯಕೋಸನು ನುಡಿದನು: "ರುಸ್ತುಮನಿಗೋಸ್ಕರ ನನ್ನ ಸಿಂಹಾಸನವನ್ನು ಸ್ವಾಧೀನಪಡಿಸಿಕೊಳ್ಳುವೆನೆಂದು ಅವನು ನನ್ನನ್ನು ಅಂಜಿಸಿದನು. ಹಗೆಯ ಪ್ರಾಣವನ್ನು ಉಳಿಸಲು ಬಯಸುವವನು ಮಹಾ ಮೂರ್ಖನೇ ಸರಿ." ಇದು ಕೃತಘ್ನ ಕಾಯಕೋಸನ ಮಾತು.

ರಾಜನ ಮಾರ್ನುಡಿಯನ್ನು ಗುದರಾಜನು ರುಸ್ತುಮನಿಗೆ ತಿಳಿಸಲು, ದಿವ್ಯಸಂಜೀವಿನಿಯನ್ನು ತಾನೇ ತರುವೆನೆಂದು ರುಸ್ತುಂ ಚಕ್ರವರ್ತಿಯ ಶಿಬಿರಕ್ಕೆ ಹೊರಟನು. ಆದರೆ ಅವನು ಚಕ್ರವರ್ತಿಯ ಶಿಬಿರವನ್ನು ಸೇರುವನಿತರಲ್ಲಿ ಸೊಹ್ರಾಬನು ತನ್ನ ಕೊನೆಯುಸಿರನ್ನು ಎಳೆದು ಓಕೊಡದ ನಾಡಿಗೆ ತೆರಳಿಯಾಗಿತ್ತು!

ಮಗನ ಮರಣದಿಂದ ದುಃಖಸಂತಪ್ತನಾದ ವೀರನು ತನ್ನ ಎದೆಯಮೇಲೆ

ತೋಳುಗಳನ್ನು ಅಪ್ಪಳಿಸಿಕೊಂಡನು! ತಲೆಯ ಮೇಲೆ ಬೂದಿಯನ್ನು ಸುರಿದು ಕೊಂಡನು! "ಓ ಕಂದಾ, ನಿನ್ನ ಎದೆಯನ್ನು ಇರಿವುದರ ಬದಲು ನನ್ನ ಕೈಗಳನ್ನು ನಾನೇ ಕತ್ತರಿಸಿಕೊಂಡಿದ್ದರೆ ಲೇಸಾಗುತ್ತಿದ್ದಿತು. ತಂದೆಯೇ ಮಗನನ್ನು ಕೈಯಾರೆ ಕೊಂದನೆಂಬ ದುಃಖವಾರ್ತೆಯನ್ನು ನಿನ್ನ ತಾಯಿ ತಾಹಮಿನೆ ಎಂತು ಸೈರಿಸಬಲ್ಲಳು?" ರುಸ್ತುಂ ಗೋಳಿಟ್ಟನು. ಮತ್ತೆ ಇರಾನಿನ ಸೈನಿಕರು ಸೊಹ್ರಾಬನ ಮೃತದೇಹವನ್ನು ಬಂಗಾರದ ಪೆಟ್ಟಿಗೆಯಲ್ಲಿರಿಸಿ ಯುದ್ಧರಂಗದಿಂದ ಜಾಬೂಲಿಗೆ ಒಯ್ದರು. ರುಸ್ತುಂ ತನ್ನ ಶಿಬಿರಕ್ಕೆ ಬಂದನು. ಶಿಬಿರದೊಳಗಿದ್ದ ಗದೆ, ಈಟಿ, ಮುದ್ಗರ ಮೊದಲಾದ ಆಯುಧಗಳನ್ನು ಹೊರ ಗೆಸೆದನು. ರತ್ನಸಿಂಹಾಸನವನ್ನು ಮುರಿದುಹಾಕಿದನು. ಕೊನೆಗೆ ಅವನು ತನ್ನ ಗುಡಾರವನ್ನು ಮುರಿದು ಎಲ್ಲವನ್ನೂ ಒಂದು ರಾಶಿಮಾಡಿ ಕಿಚ್ಚನ್ನಿಕ್ಕಿದನು. ಅಗ್ನಿ ಪ್ರಜ್ವಲಿಸಿ ಸರ್ವವನ್ನೂ ಭಸ್ಮಮಾಡಿತು!

ರುಸ್ತುಮನ ಪುತ್ರಶೋಕವನ್ನು ಸಾಂತ್ವನಗೊಳಿಸಲು ಚಕ್ರವರ್ತಿ ಕಾಯು ಕೋಸನೇ ಬಂದನಾದರೂ ಅವನ ಅನುತಾಪ ಕೃತ್ರಿಮವಾದುದು; ಸಂಕು ಚಿತ ಹೃದಯದ ಈ ಕಪಟಿಯ ಸುಡಿಯು ಮೊಸಳೆಯ ಕಣ್ಣೀರೆಂದು ರುಸ್ತುಂ ಅರಿತಿದ್ದುದರಿಂದ ಅವನು ಆ ಸಾಂತ್ವನ ವಚನಗಳನ್ನು ನಿರಾಕರಿಸಿದರು.

ಜಾಬೂಲಿನಲ್ಲಿ ಶೋಕಪೂರ್ಣ ಮೆರವಣಿಗೆ ನಡೆಯಿತು. ತಲೆತಗ್ಗಿಸಿದ ರುಸ್ತುಂ ಎಲ್ಲರಿಗಿಂತಲೂ ಮುಂದಿದ್ದನು. ಕಹಳೆಗಳ ದನಿಯಿಲ್ಲ; ಭೇರಿಗಳ ನಾದ ವಿಲ್ಲ. ನಿಶ್ಶಬ್ದತೆಯಿಂದ ಮೆರವಣಿಗೆ ಸಾಗಿತು. ಎಲ್ಲಾ ನಾಯಕರೂ ರಸ್ತುಮನ ಪಕ್ಕದಲ್ಲಿ ಪಾದಚಾರಿಗಳಾಗಿ ಬರುತ್ತಿದ್ದರು. ಜನರ ಹಜ್ಜೆಗಳ ದನಿ ಜಾಲನಿಗೆ ಕೇಳಿಸಿತು. ಜೈತ್ರ ಯಾತ್ರೆಯನ್ನು ಮುಗಿಸಿ ಸ್ವಗೃಹಕ್ಕೆ ಮರಳಿದ ಪುತ್ರನನ್ನು ಎದುರುಗೊಳ್ಳಲು ಅವನು ಬಂದನು. ಶವದ ಪೆಟ್ಟಿಗೆಯ ಸಮೀಪ ದಲ್ಲಿ ಜಾಲನೂ ರುಸ್ತುಮನೂ ನಿಂತರು. ರುಸ್ತುಂ ಶವದ ಪೆಟ್ಟಿಗೆಯನ್ನು ತೋರಿಸಿ, "ಖ್ಯಾತಿವೆತ್ತ ನಿನ್ನ ಪೌತ್ರನನ್ನು ಎತ್ತಿಕೋ!" ಎಂಬ ಶೋಕೋ ದ್ಗಾರವನ್ನೆತ್ತಿದನು.

ವಿಸ್ಮಯದಿಂದ ಜಾಲನು ಎರಡು ಹಜ್ಜೆ ಹಿಂದಿರಿಸಿದನು. ಮೊಮ್ಮಗನ ಮೃತಶರೀರವನ್ನು ಕಂಡು ಅವನು ಕಣ್ಣುಗಳಿಂದ ನೆತ್ತರ ಹನಿಗಳನ್ನು ಕರೆ ಯುತ್ತಾ ರೋದಿಸಿದನು.

ಮತ್ತೆ ಆ ಮೆರವಣಿಗೆ ನಿಧಾನವಾಗಿ ಅರಮನೆಯ ಹೆಬ್ಬಾಗಿಲನ್ನು ತಲು

ಪಿತು. ವೃದ್ಧೆ ರುಧಾಬೆಯ ಗೋಳಾಟಕ್ಕೆ ಪಾರವಿಲ್ಲ. ರುಸ್ತುಂ ಶವದ ಪೆಟ್ಟಿಗೆಯ ಮುಚ್ಚಳವನ್ನು ತೆರೆದನು. ಅದರೊಳಗೆ ಸುಂದರಾಂಗ ತರುಣನ ದೇಹವಿದ್ದಿತು. ಸೊಹ್ರಾಬ ಕಣ್ಣುಮುಚ್ಚಿ ನಿದ್ರಿಸಿದಂತೆ ತೋರುತ್ತಿದ್ದನು. ಆ ದೇಹವನ್ನು ನೋಡಿದ ವೃದ್ಧರು, "ಪೂರ್ವದಲ್ಲಿ ಸಾನನು ಇದೇ ರೀತಿಯಲ್ಲಿ ಕೊನೆಯ ನಿದ್ದೆ ಮಾಡಿದನು. ಈಗ ಸೊಹ್ರಾಬನೂ ಅದೇ ಭಂಗಿಯಲ್ಲಿ ಕೊನೆಯ ನಿದ್ದೆಯನ್ನು ಕೈಕೊಂಡಿದ್ದಾನೆ" ಎಂದು ಕಣ್ಣೀರು ಸುರಿಸಿದರು

ಸೊಹ್ರಾಬನ ಶರೀರಕ್ಕೆ ಹಳದಿ ವಸ್ತ್ರವನ್ನು ಸುತ್ತಿ ಅದನ್ನು ಶಿಸ್ತಾನದ ಮಣ್ಣಿನಲ್ಲಿ ಮರೆಗೊಳಿಸಿದರು. ಆ ಮಸಣದ ಮೇಲೆ ಎತ್ತರದ ಗೋಪುರವೊಂದನ್ನು ಸೊಹ್ರಾಬನ ಸ್ಮಾರಕವೆಂದು ನಿರ್ಮಿಸಿದರು. ಈ ಗೋಪುರವನ್ನು ದೂರದಿಂದಲೇ ಕಂಡ ಯಾತ್ರಿಕನು, "ತಂದೆ ಅರಿಯದೆ ಕೊಂದ ಸೊಹ್ರಾಬ— ರುಸ್ತುಮನ ಮಗ ಅಲ್ಲಿ ಚಿರನಿದ್ರೆಯಲ್ಲಿರುವನೆ"ಂಬ ಉದ್ಗಾರವನ್ನೆತ್ತುವನು.

ತಾರ್ತರರು ಸೊಹ್ರಾಬನ ಲೋಹಕವಚವನ್ನೂ ಅವನ ಆಯುಧಗಳನ್ನೂ ಅಶ್ವದ ಮೇಲಿರಿಸಿ, ಸಮೆಂಗಕ್ಕೆ ತೆರಳಿದರು. ಮಗನು ಮಡಿದ ದುರಂತ ಕತೆಯನ್ನು ಅರುಹಿದಾಗ ತಾಯಿಯ ಅಳಲಿಗೆ ಪಾರವಿಲ್ಲ. "ಯುದ್ಧದಲ್ಲಿ ಗೆಲವು ಪಡೆದು ನೆಗಳ್ತೆವೆತ್ತಬೇಕಾಗಿದ್ದ ನೀನು ಯುದ್ಧರಂಗದಲ್ಲಿ ಮಿತ್ರರಾರೂ ಸಮೀಪದಲ್ಲಿ ಇಲ್ಲದೆ ಪಂಚತ್ವವನ್ನೈದಿದೆ. ನಿನ್ನ ಪರಾಕ್ರಮಿಯಾದ ತಂದೆಯನ್ನು ತೋರಿಸಿಕೊಡಲೆಂದು ನಾನೇಕೆ ಯುದ್ಧರಂಗಕ್ಕೆ ಬರಲಿಲ್ಲ!" ಎಂದು ವೀರಮಾತೆ ಹಲುಬಿದಳು. ಮಗನನ್ನೇ ಅಪ್ಪಿಕೊಂಡು ಆಲಿಂಗನ ಸುಖವನ್ನನುಭವಿಸುತ್ತಿರುವಳೆಂಬಂತೆ ಅವಳು ಮಗನ ಲೋಹಕವಚವನ್ನು ಬಿಗಿಯಪ್ಪಿದಳು. ಕಡಿವಾಣ ಈಟಿಗಳನ್ನು ಮಗನ ದೇಹದ ಅಂಗಗಳಾಗಿವೆಯೆಂದು ಭಾವಿಸಿ ಅವಳು ಅವುಗಳನ್ನು ತಡವಿದಳು. ಅವಳು ಹಗಲಿರುಳು ಶೋಕಾಗ್ನಿಯಲ್ಲಿ ಬೆಂದಳು. ಅವಳ ಶೋಕವನ್ನು ಕಂಡು ವಿಧಿಯ ಕಲ್ಲೆದೆಯೂ ಕರಗಿತು. ಕೊನೆಗೊಂದು ದಿದ ಅವಳು ದೇಹವನ್ನು ತೊರೆದು ಸೊಹ್ರಾಬನನ್ನು ಸೇರಿದಳು.

## ಹದಿನೈದು

ಇರಾನಿಯರ ಕಡುಹಗೆ ಅಫ್ರಸಿಯಾಬನು ತಾನು ಸೋತುಹೋದನೆಂದು ಸುಮ್ಮಗೆ ಕುಳಿತಿರಲಿಲ್ಲ. ಅವನು ಇನ್ನೊಮ್ಮೆ ಇರಾನನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ದಂಡೆತ್ತಿ ಬಂದನು.

ಆಗ ಕಾಯಕೋಸ ಚಕ್ರವರ್ತಿಯ ಮಗನಿಗೆ ರುಸ್ತುಮನು ಶಸ್ತ್ರವಿದ್ಯಾಗುರುವಾಗಿದ್ದನು. ಅವನು ರುಸ್ತುಮನ ನೆರವು ಸಲಹೆಗಳನ್ನು ಪಡೆದು ಸಾಮ್ರಾಜ್ಯವನ್ನು ಸಂಧಿಮೂಲಕ ಕಾಪಾಡಲೆಂದು ಈ ಬಾರಿ ಕೊಳುಗುಳಕ್ಕೆ ತೆರಳಿದನು.

ಅದೇ ವೇಳೆಗೆ ಅಫ್ರಸಿಯಾಬನು ಒಂದು ಅಪೂರ್ವ ಸ್ವಪ್ನವನ್ನು ಕಂಡನು. ಜ್ಯೋತಿಷ್ಕರು ಸ್ವಪ್ನದ ಫಲ ಅಶುಭವಾದುದೆಂದು ಹೇಳಲು ಅವನು ದಂಡಯಾತ್ರೆಯನ್ನು ಮುಂದುವರಿಸದೆ, ಇರಾನಿನ ರಾಜಕುಮಾರನೊಡನೆ ಸಂಧಾನವನ್ನು ಮಾಡಿಕೊಂಡು ಹಿಂತೆರಳಿದನು. ಈ ಸಂಧಿ ಇರಾನಿಗೆ ಅನುಕೂಲವಾಗಿದ್ದಿತು.

ಆದರೆ ಈ ಸಂಧಾನ ಚಕ್ರವರ್ತಿ ಕಾಯಕೋಸನಿಗೆ ಅರೋಚಕವಾಗಿ ಕಂಡುಬಂತು. ಅವನು ಮಗನು ಮಾಡಿದ ಸಂಧಿಯನ್ನು ಮಾನಿಸಲಿಲ್ಲ. ತಾರ್ತರ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಲೆಂದು ತಸ್ಸನ ನಾಯಕತ್ವದಲ್ಲಿ ಒಂದು ದೊಡ್ಡ ದಂಡನ್ನು ಕಳುಹಿದನು. ತಾನು ಮಾಡಿಕೊಂಡ ಸಂಧಿಯನ್ನು ತಂದೆ ಮುರಿದನೆಂದು ತಿಳಿದು ರಾಜಕುಮಾರನು ಇರಾನನ್ನು ತ್ಯಜಿಸಿ ತಾರ್ತರ ರಾಜನ ಆಸ್ಥಾನವನ್ನು ಸೇರಿ, ಅಫ್ರಸಿಯಾಬನ ಗೆಳೆತನವನ್ನು ಮಾಡಿ ತಾರ್ತರ ರಾಜ್ಯದಲ್ಲಿಯೇ ವಾಸಿಸತೊಡಗಿದನು. ಚಕ್ರವರ್ತಿಯ ಮೂರ್ಖ ವರ್ತನೆಗಳನ್ನು ಕಂಡು ಬೇಸರಗೊಂಡಿದ್ದ ರುಸ್ತುಮನೂ ರಾಜಾಸ್ಥಾನವನ್ನು ಬಿಟ್ಟು, ಶಿಸ್ತಾನಕ್ಕೆ ಬಂದು ಅಲ್ಲಿ ಕಾಲಕಳೆಯತೊಡಗಿದನು.

ತಾರ್ತರ ರಾಜ್ಯವನ್ನು ಸೇರಿದ ಇರಾನಿನ ರಾಜಕುಮಾರನು ಅಫ್ರಸಿಯಾಬನ ಮಗಳನ್ನೇ ಮದುವೆಯಾಗಿ ತಾರ್ತರರ ಆಸ್ಥಾನದಲ್ಲಿ ಸುಖಸಂತೋಷಗಳಲ್ಲಿ ದಿನಕಳೆಯತೊಡಗಿದನು. ಹೀಗಿರುವಾಗ ರಾಜಕುಮಾರನನ್ನು ಕಂಡರಾಗದ ಒಬ್ಬ ಆಸ್ಥಾನಿಕನ ಚಾಡಿಯ ಮಾತುಗಳಿಂದ, ಈತ ತನ್ನ ತಂದೆಗೆ ನೆರವಾಗಿ, ತಾರ್ತರರಿಗೆ ಕೇಡು ಬಗೆಯುತ್ತಿರುವನೆಂಬ ಸಂದೇಹ ಅಫ್ರಸಿಯಾಬನ

ಮನಸ್ಸಿನಲ್ಲಿ ಉದಯಿಸಿತು. ಅಫ್ರಸಿಯಾಬನು ಹಿಂದೆಮುಂದೆ ನೋಡದೆ ರಾಜ ಕುಮಾರನಿಗೆ ಮರಣದಂಡನೆಯನ್ನು ವಿಧಿಸಿದನು. ಆಗಲೇ ಅವನ ಮಡದಿ, ಅಫ್ರಸಿಯಾಬನ ಪುತ್ರಿ ತನ್ನ ಒಬ್ಬನೇ ಮಗನೊಡನೆ ಇರಾನಿಗೆ ಪಲಾಯನ ಮಾಡಿದಳು. ಅಫ್ರಸಿಯಾಬನ ದುರ್ವರ್ತನೆ ರುಸ್ತುಮನನ್ನು ರೊಚ್ಚಿಗೆಬ್ಬಿ ಸಿತು. ಅವನು ಕೂಡಲೇ ತಾರ್ತರ ರಾಜ್ಯದ ಮೇಲೆ ಧಾಳಿ ನಡೆಸಿ ಅಫ್ರಸಿ ಯಾಬನ ಸೇನೆಯನ್ನು ಧ್ವಂಸಮಾಡಿದನು. ಅಳಿದುಳಿದ ತಾರ್ತರರ ಸೇನೆ ಯನ್ನು ಗಡಿ ದಾಟಿಸಿ ಚೀನಾದೇಶಕ್ಕೆ ಓಡಿಸಿದನು. ಅನಂತರ ತಾರ್ತರ ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ಆ ದೇಶವನ್ನು ಏಳು ವರ್ಷಗಳ ತನಕ ಆಳಿದನು. ಕೊನೆಗೆ ತಾರ್ತರರ ಭಂಡಾರಗಳನ್ನು ಬರಿದುಮಾಡಿ ವಿಪುಲ ಸಂಪತ್ತನ್ನು ಇರಾನಿಗೆ ಒಯ್ದನು.

ರಾಜಕುಮಾರನ ಪುತ್ರನ ಹೆಸರು ಕಾಯಖುಸ್ರು ಎಂದು. ಅವನು ಇರಾನಿನ ಆಸ್ಥಾನಕ್ಕೆ ಬಂದಾಗ ಚಕ್ರವರ್ತಿ ಸೊಸೆಗೂ ಮೊಮ್ಮಗನಿಗೂ ಆಶ್ರಯವಿತ್ತು ಸಲಹಿದನು. ಕಾಯಖುಸ್ರು ಅಜ್ಜನ ಆಸ್ಥಾನದಲ್ಲಿ ವೀರನಾಗಿ ಬಳೆದನು.

ಹೀಗಿರಲು ಒಮ್ಮೆ ಚಕ್ರವರ್ತಿ ಶತ್ರುಗಳಿಗೆ ಸೇರಿದ ಒಂದು ಕೋಟೆ ಯನ್ನು ಸ್ವಾಧೀನಪಡಿಸಿಕೊಂಡು ಬರಬೇಕೆಂದು ಮೊಮ್ಮಗನಿಗೆ ಆಜ್ಞಾಪಿಸಿದನು. ಕಾಯಖುಸ್ರು ಧೀರನಾದುದರಿಂದ ಅಜ್ಜನ ಆಜ್ಞೆಯಂತೆ ದಂಡೆತ್ತಿಹೋಗಿ ಆ ದುರ್ಗವನ್ನು ಬಹುಸುಲಭದಲ್ಲಿ ಸ್ವಾಧೀನಪಡಿಸಿಕೊಂಡನು. ವಿಜೇತನಾಗಿ ಆಸ್ಥಾನಕ್ಕೆ ಮರಳಿದ ಮೊಮ್ಮಗನನ್ನು ಕಂಡು ಚಕ್ರವರ್ತಿಗೆ ಸಂತೋಷವಾ ಯಿತು. ಚಕ್ರವರ್ತಿ ತನ್ನ ಅನಂತರ ಕಾಯಖುಸ್ರುವೇ ಸಿಂಹಾಸನಕ್ಕೆ ಹಕ್ಕು ದಾರನೆಂದು ಸಾರಿ ಆತನನ್ನು ಯುವರಾಜ ಪದವಿಗೇರಿಸಿದನು.

ಇರಾನಿಯರಿಂದ ಪೆಟ್ಟುತಿಂದು ಚೀನಾ ದೇಶಕ್ಕೆ ಓಡಿಹೋದ ಅಫ್ರಸಿ ಯಾಬನು ಸುಮ್ಮನಿರಲಿಲ್ಲ. ಏಳು ವರ್ಷಗಳ ಕಾಲ ತಾರ್ತರರ ದೇಶವನ್ನು ಆಳಿ ರುಸ್ತುಂ ಸ್ವದೇಶಕ್ಕೆ ಮರಳಿದಾಗ, ಅವನು ಮರಳಿಬಂದು ತಾರ್ತರ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನು. ಅವನು ಚೀನ ಮತ್ತು ಭಾರತ ದೇಶ ಗಳಿಂದ ನೆರವನ್ನು ಪಡೆದು ಇರಾನನ್ನು ಆಕ್ರಮಿಸಲು ಯುದ್ಧಸಿದ್ಧತೆಗಳನ್ನು ಮಾಡತೊಡಗಿದನು. ರುಸ್ತುಮನನ್ನು ಗೆದ್ದು ಸೆರೆಹಿಡಿದವರಿಗೆ ತನ್ನ ಮಗಳನ್ನು ಮತ್ತು ಅರ್ಧ ರಾಜ್ಯವನ್ನು ಕೊಡುವುದಾಗಿ ಡಂಗುರ ಸಾರಿದನು. ಅನೇಕ

ಮಂದಿ ವೀರರು ರಾಜ್ಯದಾಸೆ ಮತ್ತು ಹೆಣ್ಣಿನಾಸೆಗಳಿಂದ ರುಸ್ತುಮನನ್ನು ಸೋಲಿಸಲೆಂದು ಮುಂದೆ ಬಂದರು. ಆದರೆ ಅವರಾರೂ ರುಸ್ತುಮನೊಡನೆ ಹೋರಾಡಿ ವಿಜೇತರಾಗಿ ಮರಳಲಿಲ್ಲ. ಅವರು ತಮ್ಮ ಪ್ರಾಣಗಳನ್ನು ರಣ ಕ್ಷೇತ್ರದಲ್ಲಿ ಕಳೆದುಕೊಂಡರು.

ರಣರಂಗದಲ್ಲಿ ರುಸ್ತುಂ ಒಮ್ಮೆ ಇಬ್ಬರು ವೀರರನ್ನು ತರಿದ ಅನಂತರ ಉಳಿದ ತಾರ್ತರರನ್ನು ಕಾಲು ನಡಿಗೆಯಲ್ಲಿ ಬೆನ್ನಟ್ಟಿದನು. “ನೀನು ಯಾರು? ಖಡ್ಗ ಗುರಾಣಿಗಳು ಇಲ್ಲದೆ ನೀನು ಕಾಳಗಕ್ಕೆ ಬರುತ್ತಿರುವೆಯಲ್ಲ!” ಎಂದು ಯೋಧನೊಬ್ಬನು ಪ್ರಶ್ನಿಸಿದನು “ತಸ್ಸನು ಕಳುಹಿಸಿದ ಯೋಧನು ನಾನಾಗಿರುವೆನು. ಬಿಲ್ಲಂಬುಗಳೇ ನನ್ನ ಕೈದುಗಳು. ನಿನ್ನ ಕುದುರೆಯನ್ನು ಕಸಿದುಕೊಳ್ಳಲು ಬಂದಿದ್ದೇನೆ.” ರುಸ್ತುಂ ಮಾರ್ನುಡಿದು, ಬಾಣವನ್ನು ಹೆದೆಗೇರಿಸಿ ಹೊಡೆದನು. ತಾರ್ತರನ ಅಶ್ವ ಕೆಳಗುರುಳಿತು.

ಕೋಪಗೊಂಡ ತಾರ್ತರವೀರ ರುಸ್ತುಮನ ಮೇಲೆ ಬಾಣಗಳ ಮಳೆ ಗರೆದರೂ ರುಸ್ತುಂ ಅವನ್ನು ಲಕ್ಷ್ಯಕ್ಕೆ ತರಲಿಲ್ಲ. ಅವನು ಹೆದೆಗೆ ಶರವನ್ನೇರಿಸಿ ಆಕರ್ಣಾಂತ ಸೆಳೆದು ಹಗೆಯ ಮೇಲೆ ಪ್ರಯೋಗಿಸಿದನು. ಆ ಅಂಬು ಹೋಗಿ ಹಗೆಯ ಎದೆಯನ್ನು ಸೀಳಿತು. ರುಸ್ತುಂ ಸತ್ತುಬಿದ್ದ ತಾರ್ತರ ನನ್ನು ಹೊತ್ತು ತರಲು ಭಟರಿಗೆ ಆಜ್ಞಾಪಿಸಿದನು. ಅವರು ಆ ಶವವನ್ನು ಹೊತ್ತು ತಂದರು. ಅವನ ಎದೆಗೆ ನಾಟಿದ ಬಾಣವನ್ನು ಕಿತ್ತುತೆಗೆದಾಗ ಬಾಣವು ಹಿಡಿಯ ಗರಿಗಳನಕ ರಕ್ತದಲ್ಲಿ ಮುಳುಗಿಹೋಗಿದ್ದಿತು. ರುಸ್ತುಮನ ಅಸಾಧಾರಣ ಶಕ್ತಿಯನ್ನು ಕಂಡು ಭಟರೆಲ್ಲರೂ ಸೋಜಿಗಪಟ್ಟರು.

ಇನ್ನೊಂದು ಕಾಳಗದಲ್ಲಿ ಒಬ್ಬ ತಾರ್ತರ ವೀರನು ರುಸ್ತುಮನ ರಕ್ಷನ ಕೊರಳಿಗೆ ಪಾಶವನ್ನು ಎಸೆದನು. ಪಾಶದ ಉರುಳಲ್ಲಿ ಕುದುರೆಯ ಕೊರಳು ಸಿಕ್ಕಿಕೊಂಡಿತು. ತನ್ನ ನಚ್ಚಿನ ಕುದುರೆ ಈ ಪಾಶದ ಉರುಳಲ್ಲಿ ಸಿಕ್ಕಿ ವಧಿಸ ಲ್ಪಡುವುದೆಂದು ರುಸ್ತುಂ ಆಲೋಚಿಸಿ, ಕುದುರೆಯ ಕೊರಳಿಗೆ ಸಿಕ್ಕಿದ ಪಾಶ ವನ್ನು ಹಿಡಿದೆಳೆದನು. ಇನ್ನೊಂದು ತುದಿಯನ್ನು ಹಗೆ ಹಿಡಿದೆಳೆಯುತ್ತಿದ್ದನು. ಈ ಎಳೆತದ ಬಲವನ್ನು ತಡೆಯಲು ಪಾಶಕ್ಕೆ ಬಲವಿರಲಿಲ್ಲ. ಅದು ನಡುವೆ ತುಂಡಾಯಿತು. ಕುದರೆಯ ಮೇಲೆ ಕುಳಿತು ಪಾಶದ ಇನ್ನೊಂದು ತುದಿ ಯನ್ನು ಎಳೆಯುತ್ತಿದ್ದ ತಾರ್ತರ ಯೋಧನು ಕೆಳಗುರುಳಿದನು. ರುಸ್ತುಂ

ಅವನ ಮೇಲೆ ಪಾಶವನ್ನು ಬೀಸಿ ಸೆರೆಹಿಡಿದು ಕೊಂಡೊಯ್ದು ಚಕ್ರವರ್ತಿಗೆ ಕಾಣಿಕೆಯಾಗಿ ಒಪ್ಪಿಸಿದನು.

ಮತ್ತೆ ಅಫ್ರಸಿಯಾಬನ ಪ್ರಧಾನ ಮಂತ್ರಿ ಶಾಂತಿಯಾಚನೆ ಮಾಡಲೆಂದು ರುಸ್ತುಮನಿದ್ದಲ್ಲಿಗೆ ಆಗಮಿಸಿದನು. ಆದರೆ ರುಸ್ತುಂ ಅವನೊಡನೆ ಸಂಧಾನ ಮಾಡಿಕೊಳ್ಳಲು ಒಪ್ಪಲಿಲ್ಲ. ಕಾಯಖುಸ್ರು ಮತ್ತು ಅವನ ತಾಯಿಗೆ ದಯೆ ತೋರಿಸಿದ ಒಬ್ಬ ವೃದ್ಧ ತಾರ್ತರ ಯೋಧನನ್ನು ಸಂಧಾನದ ಮಾತುಕತೆಗಳನ್ನು ನಡೆಸಲು ಕಳುಹಬೇಕೆಂದು ಹೇಳಿದನು. ತಾರ್ತರರು ರಸ್ತುಮನ ಸಂಧಿಯ ನಿಯಮಗಳನ್ನು ಒಪ್ಪಲಿಲ್ಲ. ಸಂಧಾನಕ್ಕೆಂದು ಹೋದ ವೃದ್ಧ ವೀರನನ್ನು ಅವರು ನಿಂದಿಸಿ ತಿರಸ್ಕರಿಸಿದರು.

"ರುಸ್ತುಮನನ್ನು ಗೆಲ್ಲಲು ಉತ್ತಮ ಉಪಾಯವೆಂದರೆ, ಯೋಧರೆಲ್ಲ ಒಂದುಗೂಡಿ ಒಬ್ಬರ ಅನಂತರ ಇನ್ನೊಬ್ಬರು ಕಾದುವುದು. ಹೀಗೆ ಹತ್ತು ಮಂದಿ ಕಾದುವಾಗ ಅವನು ದಣಿಯದೆ ಇರನು. ಆಗ ಅವನನ್ನು ಸುಲಭದಲ್ಲಿ ಇರಿದು ಕೆಡಹಬಹುದು." ಎಂಬ ಒಂದು ನೂತನ ಉಪಾಯವನ್ನು ಒಬ್ಬ ತಾರ್ತರ ಯೋಧನು ತನ್ನ ಸಂಗಡಿಗರಿಗೆ ಸೂಚಿಸಿದನು. ಈ ಹಂಚಿಕೆಯನ್ನು ಅವರೆಲ್ಲರೂ ಒಪ್ಪಿದರು. ಅದರಂತೆಯೇ ಮೊದಲು ಮಾತಾಡಿದವನು ರುಸ್ತುಮನ ಮೇಲೆ ಬಿದ್ದನು. ರುಸ್ತುಂ ತನ್ನ ಈಟಿಯ ಒಂದೇ ಪೆಟ್ಟಿನಿಂದ ಹಗೆಯನ್ನು ಕುದುರೆಯಿಂದ ಕೆಳಗೆ ಉರುಳಿಸಿದನು. ಆಗ ಅವನ ಎದೆಯನ್ನು ಸೀಳಲೆಂದು ನೊಂಟದ ಪಟ್ಟಿಯಿಂದ ಕಠಾರಿಯನ್ನು ತೆಗೆಯುವನಿತರಲ್ಲಿ ಆ ಜಂಭಗಾರ ಬಿದ್ದಲ್ಲಿಂದ ಎದ್ದು ತಾರ್ತರ ಪಡೆಯಿರುವಲ್ಲಿಗೆ ಓಡಿಬಿಟ್ಟನು.

ಅನಂತರ ಭಯಂಕರ ಕಾಳಗ ನಡೆಯಿತು ರುಸ್ತುಂ ಹಗೆಗಳನ್ನು ತರಿದಟ್ಟುತ್ತಾ ಮುನ್ನುಗ್ಗಿದನು. ಅಫ್ರಸಿಯಾಬನಿಗೆ ನೆರವಾಗಲೆಂದು ಚೀನಾ ದೇಶದಿಂದ ಬಂದ ಒಬ್ಬ ಅರಸು ಆನೆಯ ಮೇಲೆ ಕುಳಿತಿದ್ದನು. ರುಸ್ತುಂ "ನೀನು ತಲೆಯಮೇಲಿನ ಕಿರೀಟವನ್ನು ನನಗೊಪ್ಪಿಸಬೇಕು. ಇಲ್ಲದಿದ್ದರೆ ನನ್ನೊಡನೆ ದ್ವಂದ್ವಯುದ್ಧಕ್ಕೆ ಸಿದ್ಧನಾಗಬೇಕು." ಎಂದು ಹೇಳಿದನು. ಅದಕ್ಕೆ ಅವನು ಒಪ್ಪಲಿಲ್ಲ.

ಆಗ ರುಸ್ತುಂ ಆನೆಯ ಮೇಲೆ ಕುಳಿತಿದ್ದ ಚೀನಾ ರಾಜನ ಮೇಲೆ ಪಾಶವನ್ನೆಸೆದು, ಅವನನ್ನು ಹಿಡಿದು, ಅವನ ಕಿರೀಟವನ್ನು ಕಳಚಿದನು.

ಅವನನ್ನು ಸೆರೆಯಾಳನ್ನಾಗಿ ಮಾಡಿ ಕಾಯುಖುಸ್ರುವಿನ ಸನ್ನಿಧಿಗೆ ಕಳುಹಿಸಿದನು.

ಈ ಯುದ್ಧಗಳಲ್ಲಿ ತಾರ್ತರರು ಸೋತರು. ಅವರು ಇರಾನಿನ ಗಡಿಯನ್ನು ಬಿಟ್ಟು ಓಡಿದರು. ಮುಂದೆ ಅವರು ಇರಾನನ್ನು ಆಕ್ರಮಿಸುವ ಗೋಜಿಗೆ ಹೋಗಲಿಲ್ಲ. ಅನೇಕ ವರ್ಷಗಳನಕ ರಾಜ್ಯದಲ್ಲಿ ಶಾಂತಿ ಸಂತೃಪ್ತಿಗಳು ನೆಲಸಿದುವು.

ವರ್ಷಗಳು ಸಾಗಿದುವು. ಅಫ್ರಸಿಯಾಬನ ಮನಸ್ಸಿನಲ್ಲಿ ರುಸ್ತುಮನ ವಿಷಯದಲ್ಲಿದ್ದ ದ್ವೇಷವನ್ನು ಅವನು ಅನುಭವಿಸಿದ ಸೋಲುಗಳು ನಂದಿಸದಾದುವು. ಈ ಪರಾಭವಗಳು ಈ ಕಿಚ್ಚು ಇನ್ನಷ್ಟು ತೀವ್ರವಾಗಿ ಉರಿವಂತೆ ಮಾಡಿದುವು. ಅವನು ರುಸ್ತುಮನನ್ನು ವಧಿಸಲಿರುವ ಹಂಚಿಕೆಗಳನ್ನು ನಿರಂತರ ಯೋಚಿಸುತ್ತಲೇ ಇದ್ದನು. ಅದಕ್ಕಾಗಿ ಒಬ್ಬ ವೀರನನ್ನು ಅರಸುತ್ತಿದ್ದನು. ಆಗ ಒಕ್ಕಲಿಗರ ಹುಡುಗನೊಬ್ಬನು ಅವನಿಗೆ ದೊರೆತನು. ಅವನು ಬಲವಾದ ಶರೀರ ಉಳ್ಳವನೂ ಶಕ್ತಿಶಾಲಿಯೂ ಆಗಿರುವುದನ್ನು ಕಂಡುಕೊಂಡನು. ಈ ಅಸಾಧಾರಣ ತರುಣನು ರುಸ್ತುಮನೊಡನೆ ಸಮದಂಡಿಯಾಗಿ ಹೋರಾಡಬಲ್ಲನೆಂದು ಅವನು ಸಂತೋಷಗೊಂಡನು. ರಾಜನು ದೂತರನ್ನು ಕಳುಹಿ, ಆ ತರುಣನನ್ನು ತನ್ನ ಆಸ್ಥಾನಕ್ಕೆ ಬರಮಾಡಿ, ಅವನು ಯಾರೆಂದು ವಿಚಾರಿಸಿದನು.

"ನಾನು ಹಳ್ಳಿಯಲ್ಲಿ ವಾಸಿಸುತ್ತೇನೆ. ನನ್ನ ತಾಯಿ ನನ್ನ ತಂದೆ ಯಾರೆಂದು ನನಗೆ ತಿಳಿಸಳು." ಎಂದು ಆ ತರುಣನು ಉತ್ತರಿಸಿದನು.

"ನನ್ನಿಂದ ಗೆಲ್ಲಲಾಗದ ಒಬ್ಬ ಹಗೆಯಿದ್ದಾನೆ. ಆದರೆ ನೀನು ಅವನಿಗೆ ಸಮದಂಡಿಯಾಗಿ ಹೋರಾಡ ಬಲ್ಲೆ ಎಂಬ ವಿಶ್ವಾಸ ನನಗಿದೆ."

"ಈ ಒಬ್ಬ ಹಗೆಯ ಚಿಂತೆಯನ್ನು ತಾವು ಹಚ್ಚಿಕೊಳ್ಳುವುದೇಕೆ?"

"ಏಕೆಂದರೆ ಆ ಹಗೆ ಮುನ್ನೂರು ಮಂದಿ ವೀರರಿಗಿಂತಲೂ ಹೆಚ್ಚು ಶಕ್ತಿಶಾಲಿಯಾಗಿದ್ದಾನೆ. ನೀನು ನನ್ನ ಹಗೆಯನ್ನು ಎದುರಿಸುವಿಯಾದರೆ, ನಿನಗೆ ಯುದ್ಧವಿದ್ಯೆಗಳನ್ನೆಲ್ಲಾ ಕಲಿಸಿ ಸೇನಾನಾಯಕನನ್ನಾಗಿ ಮಾಡುವೆನು."

ರಾಜನ ನುಡಿಗೆ ಈ ತರುಣನು ಸಮ್ಮತಿಸಿದನು. ಅವನ ಹೆಸರು ಬಸ್ರು. ಅಫ್ರಸಿಯಾಬನು ಅವನಿಗೆ ಉಚಿತ ಪಾರಿತೋಷಕಗಳನ್ನು ಮತ್ತು ಲೋಹ ಕವಚ ಆಯುಧ ಮುಂತಾದುವುಗಳನ್ನೂ ಇತ್ತು ಸನ್ಮಾನಿಸಿದನು.

ಅರಸನಿತ್ತ ಲೋಹಕವಚ ಮತ್ತು ಆಯುಧಗಳನ್ನು ತೆಗೆದುಕೊಂಡು ಬಸ್ರು ಮನೆಗೆ ಬಂದು, ರಾಜಾಸ್ಥಾನದಲ್ಲಿ ನಡೆದ ವೃತ್ತಾಂತವನ್ನು ತಾಯಿಗೆ ತಿಳಿಸಿ, ರಾಜನಿತ್ತ ಮೆಚ್ಚುಗೆಗಳನ್ನು ಅವಳಿಗೆ ತೋರಿಸಿದನು.

"ಮುದ್ದು ಕಂದಾ! ಈ ಮೆಚ್ಚುಗೆಗಳು ನಿನ್ನ ಪ್ರಾಣದ ಬೆಲೆಯಾಗಿವೆ. ಈ ಲೋಹಕವಚ ನನ್ನ ದೃಷ್ಟಿಯನ್ನು ಕುರುಡಾಗಿಸುವ ಉಕ್ಕಿನ ಮುಖವಾಡ ವಾಗಿದೆ!" ಎಂದು ತಾಯಿ ಕಣ್ಣೀರು ಹನಿಸಿದಳು.

ತಾಯಿ ತಡೆದರೂ ಬಸ್ರು ಅಫ್ರಸಿಯಾಬನ ಪಡೆಯಲ್ಲಿ ಸೇರಿ ಯುದ್ಧ ಶಿಕ್ಷಣವನ್ನು ಪಡೆದು ಒಬ್ಬ ವೀರಯೋಧನಾದನು. ಅಫ್ರಸಿಯಾಬನು ಬಸ್ರು ವನ್ನು ದಂಡಿನ ದಳಪತಿಯನ್ನಾಗಿ ನಿಯಮಿಸಿ ಇರಾನಿನ ಮೇಲೆ ದಂಡೆತ್ತಿ ಹೋಗಲು ಆಜ್ಞೆಗೈದನು.

ಈ ಬಸ್ರು ಪರಾಕ್ರಮಶಾಲಿಯಾದ ಧೀರ. ಅವನ ಅದಟನ್ನು ಇರಾನಿನ ಯೋಧರು ಎದುರಿಸದಾದರು. ಯುದ್ಧದಲ್ಲಿ ಇರಾನಿನ ದಂಡು ಪರಾಭವ ಹೊಂದಿ ಪಲಾಯನ ಮಾಡಿತು. ತಸ್ಸನೂ ಇನ್ನೊಬ್ಬ ದಳ ಪತಿಯೂ ಬಸ್ರುವಿನ ಸೆರೆಯಾಳಾದರು.

ಹೀಗೆ ಇರಾನಿನ ದಂಡು ರಣಕ್ಷೇತ್ರದಲ್ಲಿ ಪರಾಜಯ ಹೊಂದಿದಾಗ, ರುಸ್ತುಮನಿಗೆ ಚಕ್ರವರ್ತಿಯ ಕರೆ ಬಂತು. ರುಸ್ತುಂ ವೃದ್ಧನಾದರೂ ತಾಯ್ನಾಡ ರಕ್ಷಣೆಗೋಸುಗ ಮುಂದೆ ಬಂದನು. ಅವನು ಯಾರಿಗೂ ತಿಳಿಯದಂತೆ ವೇಷಪಲ್ಲಟಿಸಿ ತಾರ್ತರ ಪಾಳೆಯವನ್ನು ಪ್ರವೇಶಿಸಿದನು. ಅವನು ತಾರ್ತರ ದಳದ ಬಲಾಬಲಗಳನ್ನು ಪರೀಕ್ಷಿಸಿ ಅರಿತುಕೊಂಡು, ಸೆರೆಯಾಳು ಗಳಾಗಿದ್ದ ತಸ್ಸನನ್ನೂ ಅವನ ಸಂಗಡಿಗನನ್ನೂ ಬಂಧವಿಮೋಚನೆ ಮಾಡಿ ಇರಾನಿನ ಶಿಬಿರಕ್ಕೆ ಕರೆದುಕೊಂಡು ಬಂದನು.

ಸೆರೆಯಾಳುಗಳು ಬಂಧನದಿಂದ ಪಾರಾದರೆಂಬುದು ಅಫ್ರಸಿಯಾಬನಿಗೆ ತಿಳಿಯಿತು. ಅವರನ್ನು ವಿಮೋಚನೆಗೊಳಿಸಿದ ಅದಟನು ರುಸ್ತುಮನಾಗಿರುವ ನೆಂದು ಅವನು ಊಹಿಸಿದನು. ಮರುದಿನ ತಾರ್ತರ ದಳಪತಿ ಬಸ್ರು ರುಸ್ತು ಮನನ್ನು ದ್ವಂದ್ವಯುದ್ಧಕ್ಕೆ ಆಹ್ವಾನಿಸಲು ರುಸ್ತುಮನು ಈ ಯುದ್ಧಾಹ್ವಾನ ವನ್ನು ಸ್ವೀಕರಿಸಿದನು.

ವೀರರೀರ್ವರೂ ಮೊದಲು ಬಿಲ್ಲುಬಾಣಗಳನ್ನು ಹಿಡಿದು ಕದನವೆಸಗಿ ದರು. ಅನಂತರ ಗದಾಯುದ್ಧಕ್ಕೆ ಆರಂಭವಾಯಿತು. ಗದೆಗಳು ಹುಡಿಯಾ

ಗುವ ತನಕ ಅವರು ಹೋರಿದರು. ಅವರು ಬೆನ್ನು ತಲೆ ಮತ್ತು ಎದೆಗಳ ಮೇಲೆ ಪರಸ್ಪರ ಅಪ್ಪಳಿಸಿದರು. ಹೆಗಲುಗಳೊಡೆದು ರಕ್ತಧಾರೆ ಹರಿಯಿತು. ಆದರೆ ಒಬ್ಬರು ಇನ್ನೊಬ್ಬರನ್ನು ಸೋಲಿಸಲಾಗಲಿಲ್ಲ. ಕೊನೆಗೆ ಬಸ್ರು ಬಂದು ಹೊಸ ಗದೆಯನ್ನೆತ್ತಿಕೊಂಡು ರುಸ್ತುಮನ ಮಸ್ತಕದ ಮೇಲೆ ಅಪ್ಪಳಿಸಲು, ರುಸ್ತುಮನ ತಲೆಯಮೇಲೆ ಒಂದು ದೊಡ್ಡ ಬಂಡೆಗಲ್ಲು ಬಿದ್ದಂತಾಯಿತು. ಅವನ ಭುಜಕ್ಕೆ ವಿಪರೀತ ಪೆಟ್ಟಾಯಿತು. ಆದರೂ ಅವನು ತನಗಾದ ನೋವನ್ನು ತೋರ್ಪಡಿಸಲಿಲ್ಲ; ಅವನ ಕೆಚ್ಚು ಕುಂದಲಿಲ್ಲ.

ನನ್ನ ಪ್ರಹಾರ ಬೆಟ್ಟವನ್ನೇ ಜರಿಸುವಂತಹದು!" ಎಂದು ಅಳುಕದೆ ಯುದ್ಧಮಾಡುತ್ತಿರುವ ರುಸ್ತುಮನನ್ನು ಕಂಡು ಆಶ್ಚರ್ಯಪಟ್ಟ ಬಸ್ರು ಉದ್ಗಾರವೆತ್ತಿದನು. ಆ ದಿನ ಕಾಳಗದ ಪರಿಣಾಮವೇನೂ ತಿಳಿಯಲಿಲ್ಲ. ಕೊನೆಗೆ ಕಾಳಗವನ್ನು ಮರುದಿನ ಮುಂದುವರಿಸುವುದೆಂದು ನಿಶ್ಚಯಿಸಿ ವೀರ ರೀರ್ವರೂ ತಮ್ಮ ತಮ್ಮ ಶಿಬಿರಗಳಿಗೆ ಹಿಂದಿರುಗಿದರು. ರುಸ್ತುಮನಿಗೆ ಆ ದಿನದ ವೇದನೆಯನ್ನು ಸಹಿಸುವುದು ಅಸದಳವಾಗಿದ್ದಿತು. ಆದುದರಿಂದ ಅವನು ಚಿಕಿತ್ಸೆಯನ್ನು ಪಡೆಯಲು ಶಿಸ್ತಾನಕ್ಕೆ ತೆರಳುವುದು ಮೇಲೆಂದು ನಿಶ್ಚಯಿಸಿದನು.

ಮರುದಿನ ಬೆಳಗ್ಗೆ ರುಸ್ತುಮನ ಮಿತ್ರನೊಬ್ಬನು ಅವನ ಪಾಳಯಕ್ಕೆ ಬಂದು ರುಸ್ತುಮನ ಬದಲು ತಾನು ಬಸ್ರುವಿನೊಡನೆ ಕಾದಲು ಹೋಗು ವುದಾಗಿ ಹೇಳಿದನು. ರಾತ್ರಿಯ ನಿದ್ದೆಯಿಂದ ಬಳಲಿಕೆಯನ್ನು ಪರಿಹರಿಸಿ ಕೊಂಡಿದ್ದ ರುಸ್ತುಂ, ಹಗೆಯೊಡನೆ ಯಾವ ಪರಿ ಹೋರಬೇಕೆಂದು ಸೂಚನೆ ಗಳನ್ನು ಕೊಟ್ಟನು. ಅಂತೆಯೇ ಈ ನೂತನ ಯೋಧನು ರಣಕ್ಷೇತ್ರದಲ್ಲಿ ಬಸ್ರುವನ್ನು ಎದುರಿಸಿದನು. ಅವನು ಬಸ್ರುವಿನ ಮೇಲೆ ಬಿದ್ದು ತನ್ನ ರಣ ಗೊಡಲಿಯಿಂದ ಬಸ್ರುವನ್ನು ಹೊಡೆದು ತನ್ನ ಪಾಶದಿಂದ ಬಂಧಿಸಿದನು.

ಈ ಸೆರೆಯಾಳಿನೊಡನೆ ಇರಾನಿನ ಯೋಧರು ಕಾಯಖುಸ್ರುವಿನ ಆಸ್ಥಾನವನ್ನು ಸೇರಿದರು. ರುಸ್ತುಂ ಬಸ್ರುವಿಗೆ ಪ್ರಾಣದಾನ ಮಾಡಬೇಕೆಂದು ಚಕ್ರವರ್ತಿಯನ್ನು ಯಾಚಿಸಿದನು. ಚಕ್ರವರ್ತಿ ರುಸ್ತುಮನ ಬೇಡಿಕೆಯನ್ನು ಮನ್ನಿಸಿದನು. ರುಸ್ತುಂ ಲೋಕೈಕವೀರ ಬಸ್ರುವನ್ನು ಸೆರೆಯಾಳಾಗಿ ಕರೆದು ಕೊಂಡು ಶಿಸ್ತಾನಕ್ಕೆ ತೆರಳಿದನು. ಈಗ ಬಸ್ರುವಿನ ತಾಯಿ ಸುಮ್ಮಗೆ ಕುಳಿತಿ ರಲಿಲ್ಲ. ಆಕೆ ಸೆರೆಯಾಳಾದ ಮಗನನ್ನು ಹಿಂಬಾಲಿಸಿದಳು. ರುಸ್ತುಮನ

ಗಾಯಕಿಯರಲ್ಲಿ ಒಬ್ಬಳು ಬಸ್ರುವಿನ ತಾಯಿಯ ಗೆಳತಿಯಾಗಿದ್ದಳು. ಅವಳು ಬಸ್ರುವಿಗೆ ಅಗತ್ಯವೆನಿಸಿದ ಆಹಾರ ಪಾನೀಯಗಳನ್ನು ಒದಗಿಸುತ್ತಿದ್ದಳು. ಕೆಲವೇ ದಿನಗಳಲ್ಲಿ ಬಸ್ರು ರುಸ್ತುಮನ ಸೆರೆಯಿಂದ ತಪ್ಪಿಸಿಕೊಂಡು ಪಲಾಯನ ಮಾಡಿದನು. ಅವನ ತಾಯಿ ಮತ್ತು ಅವಳ ಗೆಳತಿ ಇವರಿಬ್ಬರೂ ಅವನನ್ನೇ ಹಿಂಬಾಲಿಸಿದರು

ಆ ವೇಳೆಯಲ್ಲಿ ರುಸ್ತುಂ ಬೇಟೆಯಾಡಲು ಕಾಡಿಗೆ ತೆರಳಿದ್ದನು. ಅವನು ಬೇಟೆಯಿಂದ ಮರಳುತ್ತಿದ್ದಾಗ ನೆರೆಯಿಂದ ತಪ್ಪಿಸಿ ಓಡಿಹೋಗುವ ಬಸ್ರು ಮತ್ತು ಅವನ ತಾಯಿ, ಅವಳ ಗೆಳತಿ- ತನ್ನ ನರ್ತಕಿ ಇವರನ್ನು ಎದುರಿಸಿದನು. ಆಗ ಬಸ್ರು ರುಸ್ತುಮನೊಡನೆ ಹೋರಾಡಲು ಸಿದ್ಧನಾದನು. ಈರ್ವರಿಗೂ ಭೀಷಣ ಸಮರ ನಡೆಯಿತು. ಯೋಧರಂತೆಯೇ ಅವರ ಅಶ್ವಗಳು ಸಹ ಪರಸ್ಪರ ಪ್ರಾಣ ಹೀರಬೇಕೆಂದು ಉಗ್ರವಾಗಿ ಹೊಣರಿದುವು. ರಕ್ಷ ಬಸ್ರುವಿನ ಕುದುರೆಯನ್ನು ಬಹು ಭಯಂಕರವಾಗಿ ಕಡಿದು ಒದೆಯಿತು. ಆಗ ಬಸ್ರುವಿನ ಅಶ್ವ ತನ್ನ ಬೆನ್ನಮೇಲಿರುವ ಸ್ವಾಮಿಯೊಡನೆ ಅಲ್ಲಿಂದ ಓಡಿಹೋಗಲು ಹವಣಿಸಿತು. ಆಗಲೇ ರುಸ್ತುಂ ಖಡ್ಗವನ್ನೆತ್ತಿ ಬಸ್ರುವಿನ ಶಿರವನ್ನು ಛೇದಿಸಲು ಅನುವಾದನು.

"ರುಸ್ತುಂ, ಈ ಹಗೆ ನಿನ್ನ ಬಂಧುವೇ ಆಗಿದ್ದಾನೆ." ದೂರದಲ್ಲಿ ನಿಂತು ವೀರರೀರ್ವರ ದ್ವಂದ್ವ ಯುದ್ಧವನ್ನು ನೋಡುತ್ತಿದ್ದ ಬಸ್ರುವಿನ ತಾಯಿ ಕೂಗಿ ಹೇಳಿದಳು. "ಏಕೆಂದರೆ ಈ ಬಸ್ರುವಿನ ತಂದೆ ಸೊಹ್ರಾಬನಾಗಿದ್ದಾನೆ! ನೀನು ಅವನ ಅಜ್ಜನಾಗಿದ್ದೀಯೇ!

ಈ ನುಡಿಗೇಳಿದ ರುಸ್ತುಂ ಕೈಯಲ್ಲಿದ್ದ ಖಡ್ಗವನ್ನು ದೂರಕ್ಕೆ ಎಸೆದನು. ಬಸ್ರುವಿನ ತೋಳಲ್ಲಿದ್ದ ಮುದ್ರಿಕಾಭರಣದಲ್ಲಿ ಸೊಹ್ರಾಬನ ಮುದ್ರೆಯಿದ್ದಿತು. ಆಗ ಹಗೆ ತನ್ನ ಮೊಮ್ಮಗನಿರುವನೆಂದು ರುಸ್ತುಮನಿಗೆ ಖಚಿತವಾಯಿತು. ಅವನು ಬಸ್ರುವನ್ನು ಎದೆಗಪ್ಪಿಕೊಂಡು ಕಣ್ಣೀರು ಸುರಿಸಿದನು.

ರುಸ್ತುಂ ವಿಚಾರಿಸಿದಾಗ ಬಸ್ರುವಿನ ತಾಯಿ ಸುಮಂಗದಲ್ಲಿ ಸೊಹ್ರಾಬನು ಯಾರಿಗೂ ತಿಳಿಯದಂತೆ ತನ್ನನ್ನು ವಿವಾಹವಾದನೆಂದು ಅವನಿಗೆ ಅರುಹಿದಳು. ಆಗ ರುಸ್ತುಮನಿಗಾದ ಆನಂದಕ್ಕೆ ಪಾರವಿಲ್ಲ. ಅವನು ಬಸ್ರುವನ್ನೂ ಅವನ ತಾಯಿಯನ್ನೂ ಕರೆದುಕೊಂಡು ಜಾಬೂಲಿಗೆ ತೆರಳಿದನು. ಬಸ್ರು ಸೊಹ್ರಾಬನ ಮಗನೆಂದು ತಿಳಿದಾಗ ವೃದ್ಧ ಜಾಲ ತನ್ನ ಅರಮನೆಗೆ ಮರಿಮಗನನ್ನು ಪ್ರೀತ್ಯಾದರಗಳಿಂದ ಸ್ವಾಗತಿಸಿದನು.

---

# ಹದಿನಾರು

ಕಡೆಯ ಸಲ ಜಾಲ, ರುಸ್ತುಂ ಮತ್ತು ಬಸ್ರು ಎಂಬ ಈ ಮೂವರು ಮಹಾ ವೀರರು ಹೆಗಲಿಗೆ ಹೆಗಲುಕೊಟ್ಟು ತಾರ್ತರರೊಡನೆ ಯುದ್ಧಮಾಡಿದರು. ಅವರ ಪರಾಕ್ರಮಾಗ್ನಿಯಲ್ಲಿ ತಾರ್ತರರ ಪಡೆ ಸುಟ್ಟು ಬೂದಿಯಾಯಿತು ಮುಂದೆ ಅವರು ಇರಾನಿನ ಮೇಲೆ ದಂಡೆತ್ತಿ ಹೋಗುವ ಸಾಹಸವನ್ನು ಮಾಡಲಿಲ್ಲ. ಅನಂತರ ರುಸ್ತುಂ ಯುದ್ಧಕಾರ್ಯಗಳಿಂದ ವಿರಮಿಸಿ ತಂದೆಯೊಡನೆ ಶಾಂತಿಸಮಾಧಾನಗಳಲ್ಲಿ ದಿನಕಳೆಯತೊಡಗಿದನು. ಬಸ್ರು ತನ್ನ ಕುಲದ ಪರಂಪರೆಯಂತೆ ಸಾಹಸ ಕಾರ್ಯಗಳಲ್ಲಿ ನಿರತನಾಗಿ ನೆಗಳ್ತೆ ಗಳಿಸಿದನು. ಚಕ್ರವರ್ತಿ ರುಸ್ತುಮನನ್ನು ಮೂರು ಪ್ರಾಂತಗಳ ಪಾಲಕನನ್ನಾಗಿ ನಿಯಮಿಸಿದನು. ಕಾಯಖುಸ್ರು ಚಕ್ರವರ್ತಿ ಪಟ್ಟವನ್ನು ಮಗನಿಗೆ ಕೊಟ್ಟು ದೈವಧ್ಯಾನ ಆರಾಧನೆಗಳಲ್ಲಿ ದಿನಕಳೆಯತೊಡಗಿದನು. ಅಫ್ರಸಿಯಾಬನು ಇರಾನಿನ ಕಡೆ ತಲೆಹಾಕಲು ಸಹ ಧೈರ್ಯಪಡದೆ ತನ್ನ ರಾಜ್ಯದಿಂದಲೇ ತೃಪ್ತನಾದನು.

ಇರಾನಿನ ಹೊಸ ಚಕ್ರವರ್ತಿಗೆ ಮಹಾಧೀರನೂ, ಅದ್ಭುತ ಸಾಹಸಗಳನ್ನು ಎಸಗಿದವನೂ ಆದ ಒಬ್ಬ ಪುತ್ರನಿದ್ದನು. ಆತನ ಹೆಸರು ಇಸಫಿಯಾಂದರನೆಂದು. ಅವನು ಒಂದು ಸಿಮುರಾಗ ಪಕ್ಷಿಯನ್ನು ವಧಿಸಿದುದರಿಂದ ತಾನು ಅದ್ವಿತೀಯ ಪರಾಕ್ರಮಿಯೆಂದು ಮಹಾ ಗರ್ವತಾಳಿದ್ದನು. ಒಂದು ದಿನ ತಂದೆಯ ಬದಲು ತಾನೇ ಇರಾನಿನ ಸಿಂಹಾಸನವನ್ನೇರಬೇಕೆಂದು ಅವನು ತಂದೆಯೊಡನೆ ಹೇಳಿದನು.

“ನನ್ನ ಇನ್ನೊಬ್ಬ ಹಗೆ ಇನ್ನೂ ಜೀವಂತನಾಗಿ ಉಳಿದಿದ್ದಾನೆ. ಅವನೇ ಜಾಲನ ಮಗ ರುಸ್ತುಂ. ಅವನು ಸಿಂಹಾಸನಕ್ಕೆ ವಿಧೇಯನಾಗಿ ಚಕ್ರವರ್ತಿಯ ಆಜ್ಞೆಗಳನ್ನು ಪರಿಪಾಲಿಸುತ್ತಿದ್ದನು. ಆದರೆ ಈಗ ರುಸ್ತುಂ ದುರಹಂಕಾರ ಗರ್ವಗಳಿಂದ ಕೂಡಿದ್ದಾನೆ. ಅವನು ಈಗ ನಮಗೆ ಯಾವ ನೆರವನ್ನಾಗಲೀ ಪೊಗದಿಯನ್ನಾಗಲೀ ಕೊಡುವುದಿಲ್ಲ. ನೀನು ಅವನನ್ನು ಸೋಲಿಸಿ, ಬಂಧಿಸಿ ಕರೆದು ತಾ. ಆಗ ನಾನು ನನ್ನ ಸ್ವಹಸ್ತಗಳಿಂದಲೇ ಈ ಮಕುಟವನ್ನು ನಿನ್ನ ಮಸ್ತಕದ ಮೇಲಿರಿಸುವೆನು.” ಎಂದು ತಂದೆ ಮಗನನ್ನು ಸಮಧಾನಪಡಿಸಿದನು.

ತಂದೆಯ ಆಣತಿಯನ್ನು ಕೇಳಿ ಇಸಫಿಯಾಂದರನಿಗೆ ಅತ್ಯಾಶ್ಚರ್ಯವಾಯಿತು. "ಚೀನಾ ದೇಶವನ್ನು ಸ್ವಾಧೀನಪಡಿಸಿಕೊಳ್ಳಲೋ ಅಥವಾ ಬೇರಾವ ರಾಜನೊಡನೆ ಯುದ್ಧಮಾಡಲೋ ನಾನು ತೆರಳುವೆನು. ಇರ್ರಾನಿನ ರಕ್ಷಕನೆಂದು ಪ್ರಸಿದ್ಧನಾದ ರುಸ್ತುಮನ ಸಂಗಡ ಕಾಳಗವೆಸಗಿ ಆತನನ್ನು ಬಂಧಿಸಲು ನಾನು ಇಷ್ಟಪಡುವುದಿಲ್ಲ. ನಮ್ಮ ಯೋಧರಿಗೆಲ್ಲ ರಣವಿದ್ಯೆಯನ್ನು ಕಲಿಸಿದ ಆಚಾರ್ಯನೆಂದರೆ ರುಸ್ತುಮನೇ ಸರಿ. ನೀನೇ ರುಸ್ತುಮನ ಅತಿಥಿಯಾಗಿ ಎರಡು ವರ್ಷಗಳನ್ನು ಅವನ ಮನೆಯಲ್ಲಿ ಕಳೆದೆ. ನಾವು ರುಸ್ತುಮನಿಗೆ ಚಿರಋಣಿಗಳಾಗಿರುವೆವು. ಅಂತಹನ ಮೇಲೆ ಕೈಮಾಡುವುದು ಹೇಗೆ?" ಎಂದು ದೃಢವಾಗಿ ನುಡಿದನು. "ನೀನು ನಿನ್ನ ಪಾಶದಿಂದ ಅವನನ್ನು ಬಂಧಿಸಿ ತಾ!" ಚಕ್ರವರ್ತಿ ತನ್ನ ಆಜ್ಞೆಯನ್ನು ಪುನರಾವರ್ತನೆ ಮಾಡಿದನು. ಇಸಫಿಯಾಂದರನಿಗೆ ತನ್ನ ತಂದೆಯ ಮಾತನ್ನು ಮೀರಲು ಸಾಧ್ಯವಿರಲಿಲ್ಲ.

ಇಸಫಿಯಾಂದರನು ತನ್ನ ಮಂದಿರಕ್ಕೆ ಬಂದು ತಂದೆಯ ಆಣತಿಯನ್ನು ಮೆಲುಕು ಹಾಕತೊಡಗಿದನು. ಅವನ ಮಾತೆ ರಾಜಾಜ್ಞೆಯನ್ನು ತಿಳಿದಾಗ "ನೀನು ರುಸ್ತುಮನ ಮೇಲೆ ಕೈಮಾಡಿ ಕೃತಘ್ನರಿಗೊದಗುವ ಪಾಪವನ್ನು ಗಳಿಸಬೇಡ." ಎಂದು ಉಪದೇಶಿಸಿದಳು. ಆದರೆ ತಾನು ರುಸ್ತುಮನನ್ನು ಸೆರೆ ಹಿಡಿದು ತರುವೆನೆಂದು ತಂದೆಗೆ ಮಾತುಕೊಟ್ಟುದರಿಂದ ಅವನು ಮರುದಿನ ದಂಡಿನೊಡನೆ ರುಸ್ತುಮನನ್ನು ಸೆರೆಹಿಡಿಯಲೆಂದು ಶಿಸ್ತಾನಿಗೆ ಯಾತ್ರೆಯನ್ನು ಕೈಗೊಂಡನು.

ಈ ಪ್ರಯಾಣದ ಮಧ್ಯದಲ್ಲಿ ದಂಡಿನ ಒಂಟೆಯೊಂದು ದಾರಿ ನಡೆಯದೆ ಮಲಗಿಕೊಂಡಿತು. ಅದನ್ನು ಎಷ್ಟು ಹೊಡೆದರೂ ಅದು ಒಂದು ಹಜ್ಜೆ ಮುಂದೆ ಇರಿಸಲಿಲ್ಲ. ಈ ಒಂಟೆಯನ್ನು ಕೊಂದುಬಿಡಿರೆಂದು ಇಸಫಿಯಾಂದರನು ಭಟರಿಗೆ ಆಜ್ಞಾಪಿಸಿದನು. ಆದರೆ ಪಡೆಯಾಳುಗಳು ಇದೊಂದು ಅಪಶಕುನವೆಂದು ತಲೆಯನ್ನು ಅಲುಗಿಸಿದರು.

ಶಿಸ್ತಾನವನ್ನು ಸಮೀಪಿಸಲು ಇಸಫಿಯಾಂದರನು ತನ್ನ ಹಿರಿಯ ಮಗನನ್ನು ಕಾಣಿಕೆಗಳೊಡನೆ ಮುಂದಾಗಿ ರುಸ್ತುಮನ ಸನ್ನಿಧಿಗೆ ಕಳುಹಿದನು. ಆದರೆ ರುಸ್ತುಂ ಇಸಫಿಯಾಂದರನನ್ನು ಸ್ವಾಗತಿಸಲು ಮತ್ತು ಕಾಣಿಕೆಗಳನ್ನು ಸ್ವೀಕರಿಸಲು ಒಪ್ಪದಾದನು.

"ನಾವು ಈ ರಾಜವಂಶದಲ್ಲಿ ನಿಷ್ಠೆಯುಳ್ಳವರಾಗಿದ್ದೇವೆ. ನಾವು ಇಸಫಿ

ಯಾಂದರನನ್ನು ಅವಜ್ಞಿಗೈವುದು ಉಚಿತವಲ್ಲ. ನಾವೆಲ್ಲರೂ ಹೋಗಿ ಅವನನ್ನು ಎದುರುಗೊಂಡು ರಾಜೋಚಿತ ಸನ್ಮಾನಗಳನ್ನು ಮಾಡೋಣ." ಎಂದು ವೃದ್ಧ ಜಾಲನು ರುಸ್ತುಮನೊಡನೆ ನುಡಿದನು.

ತಂದೆಯ ಹಿತೋಕ್ತಿಯನ್ನು ರುಸ್ತುಂ ಒಪ್ಪಿದನು. ಈರ್ವರೂ ಕುದುರೆಗಳನ್ನೇರಿ ಮಿತ ಪರಿವಾರದೊಡನೆ ರಾಜಕುಮಾರನನ್ನು ಎದುರುಗೊಳ್ಳಲು ಹೋದರು. ಇಸಫಿಯಾಂದರನು ಕುದುರೆಯಿಂದಿಳಿದು ರುಸ್ತುಮನನ್ನು ಎದುರುಗೊಳ್ಳಲು ಪಾದಚಾರಿಯಾಗಿ ಮುಂದೆ ಹೋದನು. ಪೂರ್ವದಲ್ಲಿ ಚಕ್ರವರ್ತಿಗೈದಂತೆ ಇಸಫಿಯಾಂದರನೂ ತನ್ನ ಆತಿಥ್ಯವನ್ನು ಸ್ವೀಕರಿಸಿ ತನ್ನ ಗೃಹ ಪಾವನ ಮಾಡಬೇಕೆಂದು ರುಸ್ತುಂ ರಾಜಕುಮಾರನನ್ನು ಪ್ರಾರ್ಥಿಸಿದನು.

"ನಿನ್ನ ಅತಿಥಿಯಾಗಕೂಡದೆಂದು ರಾಜಾಜ್ಞೆಯಾಗಿದೆ. ನೀನು ಸಂಕಲೆಗಳಿಂದ ಬಂಧಿತನಾದುದನ್ನು ನೋಡಬೇಕೆಂಬ ಹುಚ್ಚು ನನ್ನ ತಂದೆಗೆ ಹಿಡಿದಿದೆ. ಆದುದರಿಂದ ನಿನ್ನನ್ನು ಸಂಕಲೆಗಳಲ್ಲಿ ಬಂಧಿಸಲು ನೀನು ಅನುಮತಿಸು."

"ನನ್ನ ಅರಮನೆಯೊಳಗೆ ರಾಜಕುಮಾರನು ಅಡಿಗಳನ್ನು ಇಡಲು ತಿರಸ್ಕರಿಸುವುದು ನನಗೊಂದು ದೊಡ್ಡ ಅವಮಾನವೇ ಸರಿ. ಮೊದಲು ನನ್ನ ಆತಿಥ್ಯವನ್ನು ಸ್ವೀಕರಿಸು. ಅನಂತರ ನಾನು ಸೆರೆಯಾಳಾಗಬೇಕೋ ಬೇಡವೋ ಎಂಬ ಸಂಗತಿಯನ್ನು ಪರ್ಯಾಲೋಚಿಸುವೆನು".

"ನನ್ನ ತಂದೆ ನಿನ್ನ ಅತಿಥಿಯಾಗಿದ್ದಾಗ ಇದ್ದ ಉದ್ದೇಶಕ್ಕಿಂತ ನನ್ನ ಉದ್ದೇಶ ವಿಪರೀತವಾದುದಾಗಿದೆ. ನಿನ್ನ ಉಪ್ಪು ರೊಟ್ಟಿಗಳನ್ನು ತಿಂದ ಅನಂತರ ನೀನು ಬಂಧಿತನಾಗಲು ಒಪ್ಪದಿದ್ದರೆ ನಾನು ಶಕ್ತಿಯನ್ನು ಉಪಯೋಗಿಸಬೇಕಾಗುವುದು. ಉಪ್ಪಿಕ್ಕಿದ ಮನೆಗೆ ಕಿಚ್ಚನ್ನಿಕ್ಕುವುದು ನನಗೆ ಗೌರವವನ್ನು ತರಲಾರದು. ನೀನು ನನ್ನ ಶಿಬಿರಕ್ಕೆ ಬಾ. ನಾವು ಸಡಗರದ ಔತಣ ನಡೆಸೋಣ."

"ನಾನೂ ನಿನ್ನ ಉಪ್ಪು ಕೂಳುಗಳನ್ನು ಸ್ವೀಕರಿಸಲಾರೆ!"

"ಹಾಗಾದರೆ ನಾವಿಬ್ಬರೂ ದ್ರಾಕ್ಷಾರಸವನ್ನು ಕುಡಿಯೋಣ.

"ಆಗಲಿ ಸಂತೋಷ." ಎಂದು ರುಸ್ತುಂ ಒಪ್ಪಿದನು.

ಈರ್ವರೂ ತಮ್ಮ ತಮ್ಮ ಪಾತ್ರೆಗಳಲ್ಲಿ ತಾವು ತಂದಿದ್ದ ದ್ರಾಕ್ಷಾರಸವನ್ನು ಸುರಿದು ಕುಡಿದರು. ರುಸ್ತುಂ ತಂದೆ ಜಾಲನಿದ್ದಲ್ಲಿಗೆ ಬಂದು ನಡೆದ ಸಂಗತಿಗಳನ್ನು ತಿಳಿಸಿದನು.

ರುಸ್ತುಂ ತನ್ನ ಅರಮನೆಯಲ್ಲಿ ಒಂದು ವಿಶೇಷವಾದ ಔತಣಕ್ಕೆ ಸಿದ್ಧತೆಗಳನ್ನು ಮಾಡಿ, ಇಸಫಿಯಾಂದರನನ್ನು ಕರೆತರಲು ಒಬ್ಬ ದೂತನನ್ನು ಕಳುಹಿಸಿದನು. ದೂತನ ಆಗಮನವನ್ನು ಎದುರುನೋಡುತ್ತಾ ಕುಳಿತನು. ಆದರೆ ದೂತನು ಹಿಂದಿರುಗಲಿಲ್ಲ ಕೊನೆಗೆ ರುಸ್ತುಮನೆ ಇಸಫಿಯಾಂದರನ ಶಿಬಿರಕ್ಕೆ ತೆರಳಿ, ಇಸಫಿಯಾಂದರನನ್ನು ಕಂಡು ಅವನ ವರ್ತನೆಯನ್ನು ನಿಂದಿಸಿದನು.

"ನಿನ್ನ ಅರಮನೆ ನನ್ನ ಶಿಬಿರದಿಂದ ಬಹು ದೂರದಲ್ಲಿದೆ. ಈ ಕಡು ಬಿಸಿಲಲ್ಲಿ ನಡೆದು ದಣಿವುದೇತಕೆಂದು ನಾನು ಬರಲಿಲ್ಲ. ಈಗ ನೀನೇ ಬಂದಿರುವೆ. ಬಾ; ಕುಳಿತುಕೋ. ಒಂದು ಬಟ್ಟಲು ದ್ರಾಕ್ಷಾ ರಸವನ್ನು ಕುಡಿಯುವಿಯಂತೆ."

"ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ತಂದೆ ಜಾಲನು ಅರಿಕೆ ಮಾಡಿದ್ದಾನೆ."

"ಆದರೆ ಔತಣಾನಂತರ ನೀನು ಸಂಕಲೆಗಳಲ್ಲಿ ಬಂಧಿತನಾಗಿ ರಾಜಾಸ್ಥಾನಕ್ಕೆ ಬರಬೇಕು"

ರುಸ್ತುಂ ರಾಜಕುಮಾರನ ನುಡಿಗೆ ಪ್ರತ್ಯುತ್ತರ ಕೊಡಲಿಲ್ಲ. ಹಿಂದೆ ಇರಾನಿನ ಚಕ್ರವರ್ತಿಗಳಿಗೊದಗಿದ ಕಂಟಕಗಳನ್ನು ಪರಿಹರಿಸಲು ತಾನು ಕೈಗೊಂಡ ಮಹಾ ಸಾಹಸಗಳನ್ನು ಬಣ್ಣಿಸುವ ಗೀತೆಗಳನ್ನು ಅವನು ಹಾಡಿದನು. ಈ ಗೀತೆಗಳನ್ನು ಕೇಳಿದ ಇಸಫಿಯಾಂದರನಲ್ಲಿ ಮುನಿಸು ಉದಯಿಸಿತು. ಅವನು ರುಸ್ತುಮನಿಗೆ ತನ್ನ ಬಲಪಾರ್ಶ್ವದಲ್ಲಿ ಎಡೆಗೊಡದೆ ಎಡಪಾರ್ಶ್ವದಲ್ಲಿ ಕುಳಿತುಕೊಳ್ಳಲು ಹೇಳಿದನು.

ಆಗ "ಹಿಂದೆ ನಾನು ಯಾವ ಚಕ್ರವರ್ತಿಯ ಎಡಪಾರ್ಶ್ವದಲ್ಲಿಯೂ ಕುಳಿತವನಲ್ಲ." ಎಂದು ಹೇಳಿ ರುಸ್ತುಂ ರಾಜಕುಮಾರನ ಬಲಪಾರ್ಶ್ವದಲ್ಲಿ ಮಂಡಿಸಿದನು.

ರುಸ್ತುಮನ ವರ್ತನೆಯಿಂದ ಇಸಫಿಯಾಂದರನ ಅಭಿಮಾನ ಕ್ಷತವಾಯಿತು. ಅವನು, "ರುಸ್ತುಂ, ನಿನ್ನ ತಂದೆ ರಕ್ಕಸರ ಕೂಸೆಂಬ ಕತೆಯನ್ನು ನಾನು ಕೇಳಿರುವೆನು. ಸಾಮನು ಮಗುವಿನ ವಿರೂಪವನ್ನು ಕಂಡು ಮಗುವನ್ನು ಬೆಟ್ಟದ ಮೇಲೆ ತೊರೆದನಂತೆ. ಮಗುವಿನ ಕುರೂಪಕ್ಕೆ ಬೆಚ್ಚಿದ ಸಿಮುರಾಗ ಪಕ್ಷಿಯು ಸಹ ಆ ಶಿಶುವನ್ನು ನುಂಗಲಿಲ್ಲವಂತೆ. ಸಿಮುರಾಗ ಪಕ್ಷಿಗಳ ಎಂಜಲು ಗುಟುಕುಗಳಿಂದ ನಿನ್ನ ತಂದೆ ಹೊಟ್ಟೆ ಹೊರೆದುಕೊಳ್ಳುತ್ತಿದ್ದನಂತೆ.

ಕೊನೆಗೆ ಸ್ಸಾನನು ಹಕ್ಕಿಯ ಗೂಡಿನಲ್ಲಿದ್ದ ಮಗನನ್ನು ಅರಸಿ ತಂದು ಅವನನ್ನು ಮನುಷ್ಯನನ್ನಾಗಿ ಮಾಡಿದನಂತೆ." ಎಂದು ಜಾಲನನ್ನು ಅಪಹಾಸ್ಯಗೈದನು.

ಇದು ರುಸ್ತುಮನಿಗೆ, ತಾನು ಜೀರ್ಣಿಸಿಕೊಳ್ಳಲಾಗದ ಒಂದು ಮಹಾ ಅವಮಾನವೆಂದು ತೋರಿತು. ಅವನು ತನ್ನ ಹಿರಿಯರ ಸಾಹಸ ಕಾರ್ಯಗಳನ್ನು ಬಣ್ಣಿಸುತ್ತಾ ಅವರ ಅದಟಿನ ಹಾಡುಗಳನ್ನು ಹಾಡಿದನು. ತನ್ನ ಅದ್ಭುತ ಪರಾಕ್ರಮಗಳನ್ನು ಬಣ್ಣಿಸಿ, ಮತ್ತು ತಾನು ಬಯಸಿದ್ದರೆ ಇರಾನಿನ ಚಕ್ರವರ್ತಿಯಾಗುತ್ತಿದ್ದೆನೆಂಬುದನ್ನು ಗೀತೆಗಳ ಮೂಲಕ ರಾಜಕುಮಾರನಿಗೆ ತಿಳಿಸಿದನು. ಅವನು ತನ್ನಿಂದ ಹತರಾದ ಕಿರೀಟಪತಿಗಳ ಹೆಸರನ್ನು ಹೇಳಿ, ತನ್ನ ಮುಂದೆ ಇಸಫಿಯಾಂದರನು ಓರ್ವ ಸಾಮಾನ್ಯ ವೀರನೆಂಬುದನ್ನು ವಿದಿತಗೊಳಿಸಿದನು.

"ನಿನ್ನ ಸಾಹಸಗಳ ಬಣ್ಣನೆಯು ಸಾಕು. ಈಗ ಔತಣ ನಡೆಸೋಣ. ನಾಳೆ ನಾನು ನಿನ್ನನ್ನು ಸಂಕಲೆಗಳಿಂದ ಬಂಧಿಸುವೆನು." ಬೇಸರದಿಂದ ಇಸಫಿಯಾಂದರನು ಉತ್ತರಿಸಿದನು.

ಔತಣ ಸಿದ್ಧವಾಗಿದೆಯೆಂದರಿತು ರುಸ್ತುಮನಿಗೆ ಸಂತೋಷವಾಯಿತು. ಅವನ ಹಸಿವನ್ನು ಕಂಡು ಇತರ ಯೋಧರಿಗೆಲ್ಲಾ ಆಶ್ಚರ್ಯವಾಯಿತು. ಇಪ್ಪತ್ತು ಮಂದಿಗೆ ಬೇಕಾದ ಆಹಾರವನ್ನು ಅವನೊಬ್ಬನೇ ಭಕ್ಷಿಸಿದನು. ಮತ್ತು ಒಂದು ಪೀಪಾಯಿ ದ್ರಾಕ್ಷಾರಸವನ್ನು ಕುಡಿದನು.

"ನಿನ್ನ ತಂದೆಯೊಡನೆ ಈ ಕಾರ್ಯವನ್ನು ಪರ್ಯಾಲೋಚಿಸು." ರುಸ್ತುಂ ತನ್ನ ಅರಮನೆಗೆ ಹೊರಟಾಗ ಇಸಫಿಯಾಂದರ ನುಡಿದನು. "ನೀನು ಸಂಕಲೆಗಳಿಂದ ಬಂಧಿಸಲ್ಪಡಲು ಒಪ್ಪುವಿಯಾದರೆ ಬಹಳ ಚೆನ್ನು!"

"ಈ ಇರುಳು ನೀನು ನಮ್ಮ ಅತಿಥಿಯಾಗಿ ನಮ್ಮ ಅರಮನೆಯೊಳಗೆ ಪ್ರವೇಶಿಸುವ ಸಂಗತಿಯನ್ನು ನೀನೂ ಪರ್ಯಾಲೋಚಿಸು. ನೀನು ನನ್ನ ಆತಿಥ್ಯವನ್ನು ಸ್ವೀಕರಿಸದಿದ್ದರೆ, ನಾಳೆ ಬೆಳಗಿನಲ್ಲಿ ನಾನು ನಿನ್ನನ್ನು ರಣಕ್ಷೇತ್ರದಲ್ಲಿ ಸಂಧಿಸುವೆನು!" ರುಸ್ತುಮನು ಮಾರ್ನುಡಿದನು.

ಅರಮನೆಗೆ ಮರಳಿ ಬಂದ ರುಸ್ತುಂ ಇಸಫಿಯಾಂದರನ ಶಿಬಿರದಲ್ಲಿ ನಡೆದ ಸಂಭವಗಳನ್ನು ತಂದೆಗೆ ತಿಳಿಸಿದನು. ಚಕ್ರವರ್ತಿಗೆ ವಿರುದ್ಧ ಕೈದು ಹಿಡಿವುದು ಬೇಡವೆಂದು ಜಾಲನು ಮಗನಿಗೆ ಉಪದೇಶಿಸಿದನು.

"ಆ ದುಷ್ಟ ನಿನ್ನನ್ನು ಅವಹೇಳನೆಮಾಡಿದ; ನನಗೆ ಅವಮಾನ ಮಾಡಿದ ಯುದ್ಧವಲ್ಲದೆ ಬೇರಾವುದೂ ಈ ಅವಮಾನವನ್ನು ತೊಳೆಯಲಾರದು. ಅವ ನನ್ನು ಜೀವಂತ ಸೆರೆಹಿಡಿಯಲು ನಾನು ಬಯಸುವೆನು." ರುಸ್ತುಂ ತಂದೆ ಯನ್ನು ಸಮಾಧಾನಪಡಿಸಿದನು.

ಈ ವಿಚಿತ್ರ ಕಲಹವು ರಕ್ತದ ಪ್ರವಾಹ ಹರಿಯದೆ ಪರ್ಯವಸಾನ ಹೊಂದದೆಂಬುದು ಜಾಲನಿಗೆ ತಿಳಿಯಿತು. ಅವನು ಕಣ್ಣೀರು ಹರಿಸಿದನು. ಕೊನೆಗೆ ಉಪಾಯ ಕಾಣದೆ ಕೈದುಗಳನ್ನು ಮತ್ತು ಲೋಹಕವಚವನ್ನು ಅಣಿಗೊಳಿಸಿದನು.

ಮರುದಿನ ಪ್ರಭಾತದಲ್ಲಿ ಇತ್ತಂಡದ ಸೈನಿಕರು ರಣಕ್ಷೇತ್ರದಲ್ಲಿ ಎದುರು ಗೊಂಡರು. "ನಮ್ಮಿರ್ವರ ಸೇನೆಗಳು ಕಾದಲಿ." ಎಂದು ರುಸ್ತುಂ ಹೇಳಿದನು.

"ಈ ಕಲಹ ನಮ್ಮಿರ್ವರದಾಗಿದೆ. ಅನಾವಶ್ಯಕ ಸೈನಿಕರ ನೆತ್ತರನ್ನೇಕೆ ಸುರಿಸಬೇಕು?" ಎಂದು ಇಸಫಿಯಾಂದರನು ರುಸ್ತುಮನ ಸೂಚನೆಯನ್ನು ಅಲ್ಲಗಳೆದನು.

ಈರ್ವರೂ ಈಟಿಗಳನ್ನು ಹಿರಿದು ಯುದ್ಧವನ್ನು ಆರಂಭಿಸಿದರು. ಈಟಿ ಗಳು ತುಂಡಾಗಲು ಅವರು ಕೃಪಾಣಗಳನ್ನು ಹಿಡಿದು ಕಾದಿದರು. ಕೃಪಾಣ ಗಳು ಗುರಾಣಿಗಳನ್ನು ಘರ್ಷಿಸಿ ಮೊಂಡಾಗಲು ಅವರು ಅವುಗಳನ್ನೆಸೆದು, ಗದೆ ಗಳನ್ನು ಎತ್ತಿಕೊಂಡರು. ಆಘಾತಗಳ ತೀವ್ರತೆಯಿಂದ ಗದೆಗಳು ಮುರಿ ದುವು. ಕೊನೆಗೆ ಅವರು ಪಾಶಾಯುಧಗಳನ್ನು ತೆಗೆದುಕೊಂಡರು. ಅವರು ಪಾಶಗಳನ್ನು ಬೀಸಿ ಉರುಳಲ್ಲಿ ಒಬ್ಬನನ್ನೊಬ್ಬರು ಬಿಗಿದರು. ಆದರೆ ಪಾಶ ವನ್ನು ಎಳೆದು ವೈರಿಯನ್ನು ಕುದುರೆಯ ಮೇಲಿಂದ ಬೀಳಿಸಲು ಈರ್ವರೂ ಶಕ್ತರಾಗಲಿಲ್ಲ.

ಇತ್ತಂಡದ ಸೈನಿಕರು ದೂರದಲ್ಲಿ ನಿಂತು ಈ ದ್ವಂದ್ವ ಯುದ್ಧವನ್ನು ನೋಡುತ್ತಿದ್ದರು. ಅವರ ತಾಳ್ಮೆ ಹದಗೆಟ್ಟಿತು. ತಮ್ಮ ನಾಯಕರಿಗೆ ನೆರ ವಾಗಬೇಕೆಂದು ಅವರು ಉತ್ಸಾಹ ತಾಳಿದರು. ಅವರೂ ಕೈದುಗಳನ್ನು ಜಳಪಿಸಿ ಕಾದತೊಡಗಿದರು. ಈ ಯುದ್ಧದಲ್ಲಿ ಇಸಫಿಯಾಂದರನ ಈರ್ವರು ಪುತ್ರರು ಹತರಾದರು. ದೂತನೊಬ್ಬನು ಬಂದು ಈ ದುಃಖವಾರ್ತೆಯನ್ನು ತಂದೆಗೆ ಅರುಹಿದನು. "ನೀನು ಕೊಟ್ಟ ನುಡಿಯನ್ನು ಈ ರೀತಿ ಪಾಲಿಸುವುದೇ?

ನಿನ್ನ ಸೈನಿಕರಿಂದ ನನ್ನ ಪುತ್ರರು ಹತರಾದರು." ಪುತ್ರಶೋಕ ಭರಿತನಾದ ಇಸಫಿಯಾಂದರನು ರುಸ್ತುಮನನ್ನು ಹಳಿದನು.

"ಆಗಸದಲ್ಲಿ ಬೆಳಗುವ ಸೂರ್ಯದೇವನಾಣೆಯಾಗಿಯೂ ನನ್ನ ಸೈನಿಕರಿಗೆ ಕಾದಾಡಲು ನಾನು ಅನುಜ್ಞೆಗೊಡಲಿಲ್ಲ. ಈ ದುಷ್ಕಾರ್ಯವನ್ನು ಮಾಡಿದವನು ನನ್ನ ಒಡಹುಟ್ಟಿದ ಸಹೋದರನಾಗಿದ್ದರೂ ಚಿಂತೆಯಿಲ್ಲ. ಅವನನ್ನು ಹೆಡೆಮುರಿಗಟ್ಟಿ ನಿನಗೊಪ್ಪಿಸುವೆನು."

"ಅದು ನಿಷ್ಪ್ರಯೋಜನದ ಕೆಲಸ. ಆ ಕಾರ್ಯದಿಂದ ನನ್ನ ಸತ್ತ ಮಗಂದಿರು ಜೀವ ಪಡೆಯಲಾರರು ಅವರ ನೆತ್ತರ ಮುಯ್ಯಿ ತೀರಿಸಲು ನಿನ್ನನ್ನೇ ಕೊಲ್ಲುವೆನು."

ಹೀಗೆ ನುಡಿದ ಇಸಫಿಯಾಂದರನು ಬಿಲ್ಲನ್ನೂ ಬಾಣಗಳನ್ನೂ ತೆಗೆದುಕೊಂಡು, ರುಸ್ತುಮನ ಮೇಲೆ ಶರವರ್ಷವನ್ನು ಕರೆದನು. ಮಿಂಚಿನಂತೆ ಬಾಣಗಳು ಬಂದು ರುಸ್ತುಮನ ದೇಹವನ್ನು ಭೇದಿಸತೊಡಗಿದುವು. ಇಸಫಿಯಾಂದರನು ಪ್ರಯೋಗಿಸಿದ ಅರುವತ್ತು ಅಂಬುಗಳು ರುಸ್ತುಮನ ದೇಹದಲ್ಲಿ ನಾಟಿದುವು. ಆದರೆ ರುಸ್ತುಂ ಹೊಡೆದ ಬಾಣಗಳಲ್ಲಿ ಒಂದಾದರೂ ಇಸಫಿಯಾಂದರನ ದೇಹವನ್ನು ಸ್ಪರ್ಶಿಸಲಿಲ್ಲ!

ರಕ್ಷನ ಕಾಲುಗಳಿಗೆ ಬಾಣಗಳು ನಾಟಿದುವು. ಆ ಉತ್ತಮಾಶ್ವ ನೋವಿನಿಂದ ಕುಂಟತೊಡಗಿತು. ಆದರೂ ಅದು ಸ್ವಾಮಿಯನ್ನು ಹೊತ್ತು ಕೊಂಡು ಯುದ್ಧರಂಗದಿಂದ ಓಡಲು ಹವಣಿಸಲಿಲ್ಲ. ಕುದುರೆ ಕುಂಟುವುದನ್ನು ಕಂಡು ರುಸ್ತುಂ, "ಇಂದಿಗೆ ಕಾಳಗವನ್ನು ನಿಲ್ಲಿಸೋಣ. ಈಗ ರಣಕ್ಷೇತ್ರವನ್ನು ಕತ್ತಲೆ ಮುಸುಕಿದೆ. ನಾಳೆಯದಿನ ನಾವು ಸಂಧಿಸೋಣ." ಎಂದು ಇಸಫಿಯಾಂದರನಿಗೆ ನುಡಿದನು.

"ನೀನು ಕುತಂತ್ರಗಾರನೆಂಬುದನ್ನು ನಾನು ಬಲ್ಲೆ. ಆದರೆ ನಿನಗೆ ಒಂದಿರುಳ ಅವಧಿಯನ್ನು ಕೊಟ್ಟಿರುವೆನು" ಇಸಫಿಯಾಂದರನು ಉತ್ತರಿಸಿದನು.

ಇಸಫಿಯಾಂದರನು ಶಿಬಿರಕ್ಕೆ ತೆರಳಿ ತನ್ನ ಮಡಿದ ಮಗಂದಿರ ರುಂಡಗಳನ್ನೊಮ್ಮೆ ನಿಟ್ಟಿಸಿ ನೋಡಿದನು. ಪುತ್ರಶೋಕವನ್ನು ಸಹಿಸಲಾಗದೆ ಅವನ ನೇತ್ರಗಳಿಂದ ಅಶ್ರುಪ್ರವಾಹ ಹೊಮ್ಮಿತು. ಆ ರುಂಡಗಳನ್ನು ಅವನು ಎದೆಗಪ್ಪಿಕೊಂಡನು. ಚಿನ್ನದ ಪೆಟ್ಟಿಗೆಗಳಲ್ಲಿ ಶವಗಳನ್ನಿರಿಸಿ, ಅವನ್ನು ತನ್ನ ತಂದೆಯ ಬಳಿಗೆ ಕಳುಹಿ, ಒಂದು ಪತ್ರವನ್ನೂ ತಂದೆಗೆ ಕಳುಹಿಸಿದನು.

ಆ ಪತ್ರದ ಒಕ್ಕಣೆ ಇಂತಿತ್ತು, "ತಮ್ಮ ರಾಜಾಜ್ಞೆಯನ್ನು ನಿಷ್ಠೆಯಿಂದ ಆಚರಿಸಿದುದರ ಫಲಿತಾಂಶವನ್ನು ಕಳುಹಲು ತಮ್ಮ ಪುತ್ರ ಇಸಫಿಯಾಂದರನು ಇನ್ನೂ ಜೀವಂತವಾಗಿ ಉಳಿದಿದ್ದಾನೆ. ನಾಳೆಯ ಬಸಿರಲ್ಲಿ ಏನಿದೆಯೆಂಬುದನ್ನು ಆ ದೈವವೊಂದೇ ಬಲ್ಲುದು."

ತನ್ನ ಮಗ ರುಸ್ತುಮನ ದೇಹದಲ್ಲಾದ ಬಾಣದ ಗಾಯುಗಳನ್ನು ಕಂಡು ವೃದ್ಧ ಜಾಲನು ದುಃಖದಿಂದ ಕೊರಗಿದನು. "ಕಂದಾ, ನನ್ನೀ ಮುಪ್ಪಿನ ದಿನಗಳಲ್ಲಿ ನೀನೀರೀತಿ ಅಪಾಯಕ್ಕೊಳಗಾದುದನ್ನು ಈ ಕಣ್ಣುಗಳಿಂದ ನೋಡಬೇಕಾಯಿತಲ್ಲ!" ಆ ಮುದುಕನ ಕೊರಳಿಂದ ಶೋಕೋದ್ಗಾರಗಳು ಹೊಮ್ಮಿದುವು. "ನಮ್ಮನ್ನು ಕಬಳಿಸಲು ಯಾವ ಬಗೆಯ ದುರದೃಷ್ಟ ಕಾದಿದೆಯೋ!" ಮತ್ತೆ ಜಾಲನು ಮಗನ ಗಾಯುಗಳಲ್ಲಿ ನಾಟಿದ ಬಾಣಗಳ ಮೊನೆಗಳನ್ನು ಕಿತ್ತು ತೆಗೆದನು. ಅವನು ಒಬ್ಬ ನುರಿತ ವೈದ್ಯನಂತೆ ಗಾಯ ಗಳಿಗೆಲ್ಲಾ ವಸ್ತ್ರವನ್ನು ಸುತ್ತಿದನು.

"ಇಸಫಿಯಾಂದರನಂತಹ ವೀರನನ್ನು ನಾನು ಹಿಂದೆಂದೂ ಕಾಣಲಿಲ್ಲ. ಅವನ ದೇಹ ಉಕ್ಕಿನಿಂದ ನಿರ್ಮಿತವಾಗಿರಬೇಕು. ನಾನು ಬಿಟ್ಟ ಬಾಣ ಒಂದೂ ಅವನ ದೇಹದಲ್ಲಿ ನಾಟಲಿಲ್ಲ. ದೇವರ ದಯೆಯಿಂದ ಬೇಗನೆ ಇರು ಳಾಯಿತು. ಇಲ್ಲದಿದ್ದರೆ ಅಜೇಯ ರುಸ್ತುಂ ಅವನಿಂದ ಪರಾಜಿತನಾಗು ತ್ತಿದ್ದನು. ಆ ಮನುಷ್ಯನ ದೃಷ್ಟಿಯಿಂದ ಪಾರಾದರೆ ನಾಕೆಂದು ನನಗನಿಸುತ್ತದೆ" ರುಸ್ತುಂ ತಂದೆಗೆ ಹೇಳಿದನು.

"ಈಗ ನೀನು ಯುದ್ಧವನ್ನು ನಿಲ್ಲಿಸಿದರೆ ನಾವೆಲ್ಲರೂ ಆತನ ದಾಸರಾಗ ಬೇಕಾಗುವುದು. ಆದರೂ ಒಂದು ಆಶಾಕಿರಣ ಗೋಚರಿಸುತ್ತದೆ. ನಾನು ಆಪತ್ತಿಗೊಳಗಾದಾಗ ಸಹಾಯ ಮಾಡುವೆನೆಂದು ಸಿಮುರಾಗ ಪಕ್ಷಿ ವಾಗ್ದಾನ ಮಾಡಿದೆ. ಪಕ್ಷಿಯ ಸಹಾಯ ಅಗತ್ಯವೆನಿಸಿದ ಮಹದ್ವಿಪತ್ತು ಇದಲ್ಲದೆ ಬೇರಿನ್ನಾವುದಿದೆ?" ಎಂದು ಹೇಳಿದ ಜಾಲನು ಮೂವರು ಮಂತ್ರವಾದಿಗಳ ಸಂಗಡ ಹಣತೆಯನ್ನು ಕೈಯಲ್ಲಿ ಹಿಡಿದುಕೊಂಡು ಒಂದು ಎತ್ತರದ ಬಂಡೆಗಲ್ಲ ನ್ನೇರಿದನು. ಅವನು ಹಣತೆಯನ್ನು ಉರಿಸಿದನು. ತಾನು ರತ್ನಕರಂಡಕದಲ್ಲಿ ಭದ್ರವಾಗಿರಿಸಿದ್ದ ಸಿಮುರಾಗ ಪಕ್ಷಿಯ ಗರಿಯನ್ನು ಹೊರತೆಗೆದು ಅದನ್ನು ದೀಪದ ಉರಿಗೆ ಹಿಡಿದು ಉರಿಸಿದನು. ಕೆಲವೇ ನಿಮಿಷಗಳಲ್ಲಿ ಸಿಮುರಾಗ

ಪಕ್ಷಿಯೊಂದು ಅಲ್ಲಿ ಪ್ರತ್ಯಕ್ಷವಾಯಿತು. ಆಗ ಆ ನಾಲ್ವರೂ ಭಕ್ತಿಯಿಂದ ಪಕ್ಷಿಗೆ ಪ್ರಣಾಮ ಮಾಡಿದರು.

"ರಾಜಕುಮಾರ! ನೀನೇಕೆ ನನಗೆ ಮೊರೆಯಿಟ್ಟೆ?" ಪಕ್ಷಿ ಜಾಲನನ್ನು ಪ್ರಶ್ನಿಸಿತು.

"ಪಕ್ಷಿರಾಜ, ನಾನೊಂದು ಮಹಾ ಸಂಕಟಕ್ಕೆ ಗುರಿಯಾಗಿದ್ದೇನೆ. ನನ್ನ ಮಗ ರುಸ್ತುಂ ಶತ್ರುವಿನ ಬಾಣಗಳಿಗೆ ತುತ್ತಾಗಿ ಮರಣ ಶಯ್ಯೆಯಲ್ಲಿ ದ್ದಾನೆ. ಅವನ ಕುದುರೆಯೂ ಬಾಣಗಳ ಆಘಾತದಿಂದ ಸಾವಿನ ಮುಖ ದಲ್ಲಿದೆ." ಎಂದು ಜಾಲನು ಕೈಮುಗಿದು ಅರಿಕೆ ಮಾಡಿದನು.

"ಆ ವೀರನನ್ನೂ ಕುದುರೆಯನ್ನೂ ಕರೆದುಕೊಂಡು ಬಾ." ಎಂದು ಪಕ್ಷಿ ಆಜ್ಞಾಪಿಸಿತು.

ರುಸ್ತುಂ ತಿವ್ರ ವೇದನೆಯಿಂದ ಬಳಲುತ್ತಿದ್ದರೂ ಪಕ್ಷಿಯ ಆಜ್ಞೆಯಂತೆ ರಕ್ಷನೊಡನೆ ಕೋಡುಗಲ್ಲಿನ ತುದಿಗೆ ಬಂದಾಗ "ನೀವು ಭಯಪಡಬೇಕಾದು ದೇನೂ ಇಲ್ಲ." ಎಂದು ಪಕ್ಷಿ ಜಾಲ ಮತ್ತು ರುಸ್ತುಮರಿಗೆ ಧೈರ್ಯ ನೀಡಿತು.

ಅದು ತನ್ನ ಕೊಕ್ಕಿನ ತುದಿಯಿಂದ ಕುದುರೆಯ ಗಾಯಗಳಿಗೆ ನಾಟಿದ ಬಾಣಗಳ ಮೊನೆಗಳನ್ನು ಕಿತ್ತು ತೆಗೆಯಿತು. ಅದು ತನ್ನ ಗರಿಗಳಿಂದ ಗಾಯ ಗಳನ್ನು ಮೆದುವಾಗಿ ಸವರಿತು. ಆಗ ರಕ್ಷನ ನೋವು ಕಡಿಮೆಯಾಗಿ ಅದು ಕೆನೆಯಿತು. ಅನಂತರ ಪಕ್ಷಿಯು ರುಸ್ತುಮನ ದೇಹದಲ್ಲಿ ಜಾಲನ ಕಣ್ಣು ಗಳಿಗೆ ಬೀಳದೆ ಉಳಿದಿದ್ದ ಬಾಣಗಳ ಮೊನೆಗಳನ್ನು ಹೆಕ್ಕಿ ತೆಗೆಯಿತು. ಅದು ಕೊಕ್ಕಿನಿಂದ ಗಾಯಗಳೊಳಗಿದ್ದ ಮಳಲ ಕಣಗಳನ್ನು ಮತ್ತು ವಿಷ ರಕ್ತ ವನ್ನು ಹೀರಿ ತೆಗೆಯಿತು.

"ಈ ಗಾಯಗಳಿಗೆ ಮದ್ದು ಲೇಪಿಸಿ ವಸ್ತ್ರಗಳನ್ನು ಸುತ್ತು. ಈ ಗರಿ ಯನ್ನು ಹಾಲಿನಲ್ಲಿ ಅದ್ದಿ ಗಾಯಗಳಿಗೆ ಲೇಪಿಸು. ಒಂದು ವಾರದ ವರೆಗೆ ಕೇಡಿನಿಂದ ದೂರವಾಗಿರು. ಗಾಯಗಳೆಲ್ಲವೂ ಮಾಯವಾಗುವುವು." ಎಂದು ನುಡಿಯಿತು.

ಪಕ್ಷಿಯ ದಿವ್ಯ ಶಕ್ತಿಯಿಂದ ರುಸ್ತುಮನ ನೋವು ಕಡಿಮೆಯಾಯಿತು. ಅವನು "ಪಕ್ಷಿರಾಜ, ಇಸಫಿಯಾಂದರನನ್ನು ಗೆಲ್ಲುವ ಮಾರ್ಗವನ್ನು ತೋರಿಸಿ ಕೊಡು." ಎಂದು ಪಕ್ಷಿಯನ್ನು ಪ್ರಾರ್ಥಿಸಿದನು.

"ನೀನು ಅವನೊಡನೆ ಕಲಹಿಸಲು ಕಾರಣವೇನು?" ಎಂದು ಪಕ್ಷಿ

ಕೇಳಿದಾಗ ಅವನು, ಇಸಫಿಯಾಂದರನು ತನ್ನನ್ನು ಸಂಕಲೆಗಳಿಂದ ಬಂಧಿಸಿ ರಾಜಾಸ್ಥಾನಕ್ಕೆ ಒಯ್ಯುವ ಅಪಮಾನದ ಕತೆಯನ್ನು ಅರಿಕೆಮಾಡಿದನು.

"ನೀನು ಅವನೊಡನೆ ಸಂಧಾನ ಮಾಡಿಕೊಳ್ಳುವುದು ಒಳ್ಳೆಯದು. ಅವನಷ್ಟು ಪೂರ್ಣ ಗುಣಗಳಿಂದ ಪರಿಶೋಭಿತನಾದ ಯೋಧನು ಇಳೆಯಲ್ಲಿ ಬೇರೊಬ್ಬನಿಲ್ಲ. ಅವನು ಉಪಾಯದಿಂದ ಒಂದು ಸಿಮುರಾಗ ಪಕ್ಷಿಯನ್ನೇ ಕೊಂದಿದ್ದಾನೆ. ನಿನ್ನ ಸಂಧಿಯ ಮಾತುಗಳಿಗೆ ಆತ ಒಪ್ಪದಿದ್ದರೆ ನಾನು ನಿನಗೆ ನೆರವಾಗುವೆನು. ನೀನು ರಕ್ಷನ ಬೆನ್ನೇರಿ ನನ್ನನ್ನು ಹಿಂಬಾಲಿಸು." ಎಂದು ಸಿಮುರಾಗ ಪಕ್ಷಿಯು ನುಡಿಯಿತು.

ಪಕ್ಷಿ ರುಸ್ತುಮನನ್ನು ಒಂದು ಮಹಾನದಿಯ ಆಚೆ ದಡದಲ್ಲಿ ಇರುವ ಒಂದು ತೋಟಕ್ಕೆ ಕರೆದುಕೊಂಡು ಹೋಯಿತು. ಆ ತೋಟದಲ್ಲಿ ತಮರಿಕ್ಷವೆಂಬ ಒಂದು ಮರವಿತ್ತು. ಪಕ್ಷಿ ರುಸ್ತುಮನ ಕಣ್ಣುಗಳಿಗೆ ತನ್ನ ಗರಿಗಳನ್ನು ಸವರಿ, "ನೀನು ಈ ಗಿಡದಿಂದ ಅತ್ಯುತ್ತಮವಾದ ಕೊಂಬೆಯೊಂದನ್ನು ಕಡಿದುಕೋ. ಅದನ್ನು ಕಿಚ್ಚಿನಲ್ಲಿ ಕಾಯಿಸಿ ನೆಟ್ಟಗೆ ಮಾಡು. ಅದನ್ನು ಹದಗೊಳಿಸಿ ಅದರ ತುದಿಗೆ ಉಕ್ಕಿನ ಅಲಗನ್ನು ಜೋಡಿಸು. ತಮರಿಕ್ಷದ ಬಾಣ ಎಂದಿಗೂ ಗುರಿತಪ್ಪದು. ಆದರೆ ನೀನು ಇಸಫಿಯಾಂದರನ ಕಣ್ಣುಗಳಿಗೆ ಗುರಿಯಿಟ್ಟು ಬಾಣವನ್ನು ಹೊಡೆಯಬೇಕು. ಇಸಫಿಯಾಂದರನ ನೆತ್ತರನ್ನು ನೆಲದಲ್ಲಿ ಚೆಲ್ಲಿದವನ ಮನಸ್ಸಿಗೆ ಶಾಂತಿ ದೊರೆಯಲಾರದು." ಎಂದು ರುಸ್ತುಮನಿಗೆ ಉಪದೇಶಿಸಿತು. ರುಸ್ತುಂ ಪಕ್ಷಿಯ ಉಪದೇಶದಂತೆ ತಮರಿಕ್ಷದ ಕೊಂಬೆಯನ್ನು ಕಡಿದು ತೆಗೆದುಕೊಂಡು, ಕೈಮುಗಿದು ಪಕ್ಷಿಗೆ ತನ್ನ ಕೃತಜ್ಞತೆಯನ್ನು ನಿವೇದಿಸಿ ಹಿಂದಿರುಗಿದನು.

ಮರುದಿನ ಇಸಫಿಯಾಂದರನು ಹಾಸಿಗೆಬಿಟ್ಟು ಏಳುವ ಮುನ್ನ ರುಸ್ತುಂ ರಣಕ್ಷೇತ್ರದಲ್ಲಿ ಕಾಳಗಕ್ಕೆ ಸಿದ್ಧನಾಗಿ ನಿಂತಿದ್ದನು. ಹಿಂದಿನ ದಿನದ ಬಾಣಾಘಾತಗಳಿಂದ ಜರ್ಜರಿತನಾದ ರುಸ್ತುಂ ಹಾಸಿಗೆಯನ್ನು ಬಿಟ್ಟು ಕದಲಲಾರನೆಂದು ಇಸಫಿಯಾಂದರನು ಭಾವಿಸಿದ್ದನು. ಆದರೆ ರುಸ್ತುಂ ಆರೋಗ್ಯ ಮತ್ತು ಉತ್ಸಾಹಭರಿತನಾಗಿ ಯುದ್ಧಕೊಡಲು ಬಂದಿದ್ದನು. ಈ ನೋಟವನ್ನು ಕಂಡು ಇಸಫಿಯಾಂದರನು ಸೋಜಿಗದಿಂದ ತನ್ನ ಕಣ್ಣುಗಳನ್ನು ತಾನೇ ನಂಬದಾದನು.

ರುಸ್ತುಂ ಪಕ್ಷಿಯ ಸೂಚನೆಯನ್ನು ಸ್ಮರಿಸಿದನು. ಅವನು "ನೀನು

ಜಾಲನ ಆತಿಥ್ಯವನ್ನು ಸ್ವೀಕರಿಸುವುದಾದರೆ ಮತ್ತು ನನ್ನ ಕೈಕಾಲುಗಳನ್ನು ಸಂಕಲೆಗಳಿಂದ ಬಂಧಿಸದೆ ಇರುವುದಾದರೆ, ನಾನು ಸೆರೆಯಾಳಾಗಿ ರಾಜಾಸ್ಥಾನಕ್ಕೆ ಬರುವೆನು." ಎಂದು ಇಸಫಿಯಾಂದರನಿಗೆ ಹೇಳಿದನು.

"ಒಲ್ಲೆ. ನೀನು ಸಂಕಲೆಗಳಿಂದ ಬಂಧಿತನಾಗಿಯೇ ರಾಜಾಸ್ಥಾನಕ್ಕೆ ಬರಬೇಕು. ಜಾಲನ ಆತಿಥ್ಯವನ್ನು ನಾನು ಸ್ವೀಕರಿಸಲಾರೆ." ಎಂದು ಇಸಫಿಯಾಂದರನು ಹಟಹಿಡಿದನು.

ಇಸಫಿಯಾಂದರನೇ ಮೊದಲು ಗುರಿಯಿಟ್ಟು ರುಸ್ತುಮನ ಮೇಲೆ ಬಾಣಪ್ರಯೋಗ ಮಾಡಿದನು. ಆದರೆ ರುಸ್ತುಂ ಉಪಾಯದಿಂದ ಹಗೆಯ ಅಂಬನ್ನು ತಪ್ಪಿಸಿಕೊಂಡನು. ಮತ್ತೆ ತಾನು ನಿರಪರಾಧಿಯೆಂದು ಆಣೆಯಿಟ್ಟು ದೇವರನ್ನು ಧ್ಯಾನಮಾಡಿದನು. ಅನಂತರ ಅವನು ತಮರಿಕ್ಷ ಬಾಣವನ್ನು ಹೆದೆಗೇರಿಸಿ ಇಸಫಿಯಾಂದರನ ಕಣ್ಣಿಗೆ ಲಕ್ಷ್ಯವಿರಿಸಿದನು. ತಮರಿಕ್ಷಶರ ಮಾಂತ್ರಿಕ ಶಕ್ತಿಯಿಂದ ಕೂಡಿದುದು. ರುಸ್ತುಂ ಆ ಬಾಣವನ್ನು ತೊಡಲು ಇಸಫಿಯಾಂದರನ ಕಣ್ಣುಗಳಿಗೆ ಕತ್ತಲೆ ಕವಿಯಿತು. ಅವನು ಯುದ್ಧರಂಗದಲ್ಲಿ ನಿಂತ ಹಗೆಯನ್ನೂ ಅವನು ತೊಟ್ಟ ಬಾಣವನ್ನೂ ಕಾಣದಾದನು.

ರುಸ್ತುಮನ ಅಪ್ರತಿಮ ಶಕ್ತಿ ಅವನಿಗೊಂದು ಶಾಪವಾಗಿ ಪರಿಣಮಿಸಿತು. ಅವನು ಪ್ರಯೋಗಿಸಿದ ಬಾಣ ಇಸಫಿಯಾಂದರನ ಕಣ್ಣಿಗೆ ನಾಟಿದುದು ಮಾತ್ರವಲ್ಲ, ಅವನ ತಲೆಯನ್ನು ಸೀಳಿ ನೆಲದ ಮೇಲೆ ಬಿದ್ದಿತು. ಗಾಯದಿಂದ ನೆತ್ತರು ನೆಲದ ಮೇಲೆ ಚೆಲ್ಲಿತು.

ನೆಲದ ಮೇಲೆ ಬಿದ್ದ ರಾಜಕುಮಾರನನ್ನು ಸೇವಕರು ಶಿಬಿರದೊಳಗೆ ಹೊತ್ತುತಂದರು. ಜಾಲನು ಇಸಫಿಯಾಂದರನ ನಾಯಕರೊಡನೆ ಗುಡಾರದೊಳಗೆ ಪ್ರವೇಶಿಸಿದನು. ಅವನು "ಇಸಫಿಯಾಂದರನ ನೆತ್ತರು ಚೆಲ್ಲಿದವನು ಮನಶ್ಶಾಂತಿಯನ್ನು ಕಳೆದುಕೊಳ್ಳುವನೆಂದು ಪ್ರಾಜ್ಞರ ಅಭಿಪ್ರಾಯವಾಗಿದೆ." ಎಂದು ನುಡಿದನು.

"ನಾನು ರುಸ್ತುಮನಿಂದಾಗಲಿ ಸಿಮುರಾಗ ಪಕ್ಷಿಯಿಂದಾಗಲಿ ಕೊಲ್ಲಲ್ಪಡಲಿಲ್ಲ. ನನ್ನ ತಂದೆಯೇ ನನ್ನನ್ನು ಕೊಂದನು. ರುಸ್ತುಂ, ನೀನು ನನ್ನ ಮಗನ ಪಾಲನೆಯ ಹೊಣೆಯನ್ನು ಹೊರಬೇಕು. ಅವನನ್ನು ರಾಜಯೋಗ್ಯವಾದ ರೀತಿಯಲ್ಲಿ ಸಲಹಿ ಅವನಿಗೆ ಯುದ್ಧಶಿಕ್ಷಣವನ್ನೊದಗಿಸಬೇಕು." ಇದು ಇಸಫಿಯಾಂದರನ ಕೊನೆಯ ವಚನ.

"ಆಗಲಿ. ನಿನ್ನ ಕುಮಾರನನ್ನು ನಾನು ಪಾಲಿಸುವೆನು." ಎಂದು ರುಸ್ತುಂ ಇಸಫಿಯಾಂದರನಿಗೆ ವಾಗ್ದಾನ ಮಾಡಿದನು. ಆಗ ಇಸಫಿಯಾಂದರನ ಮನಸ್ಸು ಶಾಂತಿಯನ್ನೈದಿತು. ಅವನ ಪ್ರಾಣ ದೇಹವನ್ನು ತೊರೆದು ಬಯಲಿನಲ್ಲಿ ಬೆರೆಯಿತು.

## ಹದಿನೇಳು

ವೃದ್ಧಾಪ್ಯದಲ್ಲಿ ಜಾಲನಿಗೆ ಒಬ್ಬ ಮಗನು ಹುಟ್ಟಿದನು. ಆಸ್ಥಾನದ ಜ್ಯೋತಿಷ್ಕರು ಅವನ ಜಾತಕವನ್ನು ತಯಾರಿಸಿ, ಈ ಬಾಲಕನು ವಂಶದ್ರೋಹವನ್ನು ಬಗೆವನೆಂಬ ಜಾತಕಫಲವನ್ನು ಕಂಡುಹಿಡಿದರು. "ಗ್ರಹ ನಕ್ಷತ್ರಗಳ ರಹಸ್ಯವನ್ನು ನಾವು ಭೇದಿಸಿದ್ದೇವೆ. ಆದರೆ ಅವು ದುಷ್ಫಲಗಳನ್ನು ಅರುಹುತ್ತವೆ. ಈ ಬಾಲಕನು ಸುಂದರನಾಗಿದ್ದರೂ ನಿನ್ನ ಕುಲದ ಅವನತಿಗೆ ಕಾರಣನಾಗುವನು. ಅವನ ಬಾಳುವೆಯಾದರೂ ಬಹುಕಾಲ ಸುಖಮಯವಾಗಿ ಸಾಗದು." ಎಂದು ಅಂಜುತ್ತ ಅಂಜುತ್ತ ಅರಿಕೆಮಾಡಿದರು.

ಜ್ಯೋತಿಷಿಗಳ ಭವಿಷ್ಯವಾಣಿ ಶಿಸ್ತಾನದಲ್ಲೆಲ್ಲಾ ಭಯವನ್ನು ಹುಟ್ಟಿಸಿತು. ಮುಂದೊದಗುವ ಕೇಡನ್ನು ನಿವಾರಿಸೆಂದು ಜಾಲನು ಅನನ್ಯ ಭಕ್ತಿಯಿಂದ ದೇವರನ್ನು ಪ್ರಾರ್ಥಿಸಿದನು.

ಅತ್ಯಂತ ಶ್ರದ್ಧೆಯಿಂದ ಬಾಲಕನ ಲಾಲನೆ ಪಾಲನೆಗಳು ನಡೆದುವು. ಅವನು ಸುಂದರಾಂಗನಾಗಿ ಬಳೆದನು. ತಂದೆ ಅವನಿಗೆ ಶುಗದನೆಂದು ನಾಮಕರಣ ಮಾಡಿದನು. ಅವನು ತರುಣ ವಯಸ್ಕನಾದಾಗ ಜಾಲನು ಅವನನ್ನು ಕಾಬೂಲಿಗೆ ಕಳುಹಿದನು. ಕಾಬೂಲಿನ ಅರಸನು ತನ್ನ ಸೋದರ ಅಳಿಯನು ಸುಂದರನೂ ಉನ್ನತ ದೇಹಿಯೂ ಆಗಿರುವುದನ್ನು ನೋಡಿ ಅವನನ್ನು ವಿಶೇಷ ಪ್ರೀತಿಯಿಂದ ಉಪಚರಿಸಿದನು. ಕೆಲಕಾಲದ ಅನಂತರ ಶುಗದನು ಕಾಬೂಲಿನ ರಾಜಕುಮಾರಿಯನ್ನು—ಸೋದರ ಮಾವನ ಮಗಳನ್ನು ವಿವಾಹವಾಗಿ ಮಾವನ ಆಸ್ಥಾನದಲ್ಲಿಯೇ ನೆಲಸಿದನು.

ಕಾಬೂಲು ರುಸ್ತುಮನ ಅಧೀನದಲ್ಲಿದ್ದ ಒಂದು ಸಂಸ್ಥಾನವಾಗಿದ್ದುದರಿಂದ ಅದು ವರ್ಷಂಪ್ರತಿ ರುಸ್ತುಮನಿಗೆ ಪೊಗದಿ ಕೊಡಬೇಕಾಗಿದ್ದಿತು.

ಪ್ರತಿವರ್ಷ ಕಾಬೂಲಿನ ಅರಸು ರುಸ್ತುಮನಿಗೆ ಎತ್ತುಗಳ ತೊಗಲುಗಳನ್ನು ಪೊಗದಿಯೆಂದು ಶಿಸ್ತಾನಕ್ಕೆ ಕಳುಹಿಸಿಕೊಡುತಿದ್ದನು. ಶುಗದನ ವಿವಾಹದ ನಂತರ, ತಾನು ರಸ್ತುಮನ ಬಂಧುವಾದುದರಿಂದ ತನ್ನಿಂದ ರುಸ್ತುಂ ಪೊಗದಿ ಯನ್ನು ತೆಗೆದುಕೊಳ್ಳನೆಂದು ಕಾಬೂಲಿನ ರಾಜನು ಭಾವಿಸಿದನು. ಆದರೆ ಅವನ ಭಾವನೆ ಸುಳ್ಳಾಯಿತು. ರುಸ್ತುಂ ಎಂದಿನಂತೆ ಪೊಗದಿ ವಸೂಲು ಮಾಡಲು ಕಾಬೂಲಿಗೆ ದೂತರನ್ನು ಕಳುಹಿದನು.

ರುಸ್ತುಮನ ವರ್ತನೆಯನ್ನು ಕಂಡು ಕಾಬೂಲಿನ ರಾಜನಿಗೆ ವಿಪರೀತ ಸಿಟ್ಟು ಬಂತು. ಶ ಗದನು ಅಣ್ಣನ ವರ್ತನೆಯನ್ನು ಕಂಡು ವಿಶೇಷ ಅತೃಪ್ತಿ ಗೊಂಡನು. ಅವನು "ರುಸ್ತುಂ ನನ್ನ ಅಣ್ಣನೆಂಬುದು ನಿಜ. ಆದರೆ ಆತನು ನನ್ನನ್ನು ಒಬ್ಬ ದಾಸನೆಂದು ಪರಿಗಣಿಸಿದ್ದಾನೆ. ಅವನ ದುರಂಹಕಾರದ ವರ್ತನೆಗೆ ನಾನು ಮರಣದಂಡನೆಯನ್ನೇ ವಿಧಿಸುವೆನು." ಎಂದು ಹೇಳಿದನು.

ಅಳಿಯನ ನುಡಿಗಳು ರಾಜನನ್ನು ವಿಶೇಷ ಸಂತೋಷಗೊಳಿಸಿದುವು. ಅವನು, "ರುಸ್ತುಂ ಮಹಾಬಲಶಾಲಿ; ನೀನು ಅವನನ್ನು ವಧಿಸುವುದಾದರೂ ಹೇಗೆ ?" ಎಂದು ಪ್ರಶ್ನಿಸಿದನು.

"ನೋಡು ಮಾವ, ನೀನು ಒಂದು ದೊಡ್ಡ ಔತಣವನ್ನು ಏರ್ಪಡಿಸಿ, ಪೌರ ಪ್ರಧಾನಿಗಳನ್ನೆಲ್ಲಾ ಆಮಂತ್ರಿಸು. ಆ ಔತಣದಲ್ಲಿ ನೀನು ಜಾಲ ಮತ್ತು ರುಸ್ತುಮರನ್ನು ಅವಹೇಳನೆಮಾಡಿ ನನ್ನನ್ನು ನಿಂದಿಸು. ನಾನು ಕೋಪ ಗೊಂಡವನಂತೆ ನಟಿಸಿ, ಔತಣವನ್ನು ಬಿಟ್ಟೆದ್ದು ಶಿಸ್ತಾನಕ್ಕೆ ತೆರಳುವೆನು. ನೀನು ಮಾಡಿದ ಅವಹೇಳನೆಯನ್ನು ನೂರ್ಮಡಿ ಬಣ್ಣಿಸಿ ಅಣ್ಣ ರುಸ್ತುಮನಿಗೆ ತಿಳಿಸು ವೆನು: ಆಗ ಅವನು ಕೋಪಗೊಂಡು ಪ್ರತೀಕಾರ ಮಾಡಲೆಂದು ಇಲ್ಲಿಗೆ ಬರುವುದರಲ್ಲಿ ಸಂದೇಹವೇ ಇಲ್ಲ ನಾನು ಶಿಸ್ತಾನಕ್ಕೆ ತೆರಳಿದಾಗ, ಬೇಟೆ ಗಾಡಿನಲ್ಲಿ ರುಸ್ತುಂ ಮತ್ತು ಅವನ ರಕ್ಷನನ್ನು ನುಂಗುವಷ್ಟು ಆಳವಾದ ಕರ್ಪ ಗಳನ್ನು ತೋಡಿಸಿ ಅವುಗಳೊಳಗೆ ಮೇಲ್ಮೊಗವಾಗಿ ಬರ್ಚಿ ಮತ್ತು ಖಡ್ಗ ಗಳನ್ನು ನೆಡಿಸು. ಅನಂತರ ಕರ್ಪಗಳ ಬಾಯಿಯನ್ನು ಮರದ ಕೊಂಬೆ ಗಳಿಂದ ಮುಚ್ಚಿ ಮೇಲೆ ಹಸಿರು ಹುಲ್ಲನ್ನು ನೆಡಿಸು. ಹೊಸದಾಗಿ ಅಗೆದ ಮಣ್ಣು ಅವನ ಕಣ್ಣಿಗೆ ಬೀಳದಂತೆ ದೂರ ಸಾಗಿಸು. ಯುದ್ಧಕ್ಕೆಂದು ರುಸ್ತುಂ ನನ್ನೊಡನೆ ಕಾಬೂಲಿಗೆ ಬಂದಾಗ, ನೀನು ಗೈದ ಅಪರಾಧವನ್ನು ಮನ್ನಿಸ

ಬೇಕೆಂದು ಕ್ಷಮಾಯಾಚನೆಮಾಡಿ ಸಂಧಾನಮಾಡಿಕೋ. ಅನಂತರ ಬೇಟೆ ಯಾಡಲು ಅವನನ್ನು ಆಮಂತ್ರಿಸು. ಬೇಟೆಯೆಂದರೆ ರುಸ್ತುಮನಿಗೆ ತುಂಬಾ ಪ್ರೀತಿ. ಅವನು ಬೇಟೆಯಾಡಲು ಬಂದೇ ಬರುವನು. ಆ ಕರ್ಪಗಳ ಹಾದಿಯಲ್ಲಿ ಅವನನ್ನು ಕರೆದೊಯ್ದರಾಯಿತು. ಆ ಕರ್ಪಗಳೇ ರುಸ್ತುಮನ ಮಸಣವಾಗುವುವು." ಎಂದು ಶುಗದನು ರುಸ್ತುಮನ ವಿನಾಶದ ಹಂಚಿಕೆ ಯನ್ನು ಮಾವನಿಗೆ ಅರುಹಿದನು.

ಶುಗದನ ಹಂಚಿಕೆ ಕಾಬೂಲಿನ ಅರಸನಿಗೆ ಒಪ್ಪಿಗೆಯಾಯಿತು. ಅಳಿ ಯನ ಸೂಚನೆಯಂತೆ ಅವನು ಒಂದು ದೊಡ್ಡ ಔತಣವನ್ನೇರ್ಪಡಿಸಿದನು. ಔತಣದ ಅಂತ್ಯದಲ್ಲಿ ಎಲ್ಲರೂ ದ್ರಾಕ್ಷಾರಸವನ್ನು ಕುಡಿಯುತ್ತಿದ್ದಾಗ ಶುಗದನು ತನ್ನ ಹಿರಿಯರ ಸಾಹಸ ಕಾರ್ಯಗಳನ್ನು ಸ್ತುತಿಸುತ್ತಾ ಗೀತೆಗಳನ್ನು ಹಾಡ ತೊಡಗಿದನು.

"ನೀನು ನರಿಮಾನ ಮತ್ತು ಸಾನರ ಕುಲದವನೆಂದು ನಾವು ಒಪ್ಪುವು ದಾದರೂ ಹೇಗೆ? ನೀನು ಆ ಕುಲದವನಾಗಿದ್ದರೆ ಜಾಲ ಮತ್ತು ರುಸ್ತುಂ ನಿನಗೆ ಸ್ವಲ್ಪವಾದರೂ ಗೌರವ ಕೊಡುತ್ತಿದ್ದರು. ಆ ಕುಟುಂಬ ನಿನ್ನನ್ನೊಬ್ಬ ಗುಲಾಮನೆಂದು ತಿಳಿದುಕೊಂಡಿದೆ." ಎಂದು ಶುಗದನನ್ನು ಹಳಿದು ಹಂಗಿಸಿ ದನು. ಈ ಅವಹೇಳನೆಯನ್ನು ಕೇಳಿ ಪೂರ್ವ ಯೋಚಿತ ಯೋಜನೆಯಂತೆ ಶುಗದನು ಕೋಪಗೊಂಡು ಔತಣವನ್ನು ಬಿಟ್ಟೆದ್ದು ಶಿಸ್ತಾನಕ್ಕೆ ತೆರಳಿದನು.

ಬಹುದಿನಗಳಿಂದ ಅಗಲಿದ ತಮ್ಮನನ್ನು ರುಸ್ತುಂ ಬಹು ಅಕ್ಕರೆಯಿಂದ ಬರಮಾಡಿಕೊಂಡು "ಕಾಬೂಲಿನ ಸ್ಥಿತಿಗತಿಗಳು ಹೇಗಿವೆ?" ಎಂದು ವಿಚಾ ರಿಸಿದನು.

"ಕಾಬೂಲಿನ ನೆನಹು ನನ್ನ ರಕ್ತವನ್ನು ಬಿಸಿಯೇರಿಸುವುದು. ಅಲ್ಲಿನ ರಾಜನು ನನ್ನ ನೆತ್ತಿಯ ಮೇಲೆ ನಿಂದೆಗಳ ಸರಿಯನ್ನು ಸುರಿಸಿದನು. ಒಂದು ಔತಣದಲ್ಲಿ ನಾನು ಜಾಲನ ಮಗನೇ ಅಲ್ಲವೆಂದೂ, ಒಂದು ವೇಳೆ ಜಾಲನ ಮಗನಾಗಿದ್ದರೂ ಹೆಮ್ಮೆಪಟ್ಟುಕೊಳ್ಳಬೇಕಾದುದಿಲ್ಲವೆಂದೂ ನನ್ನನ್ನು ಎಲ್ಲರ ಮುಂದೆ ಜರೆದನು. ಈ ಅವಮಾನವನ್ನು ತಾಳಲಾರದೆ ನಾನು ಔತಣವನ್ನು ಬಿಟ್ಟು ಇಲ್ಲಿಗೆ ಓಡಿಬಂದೆನು." ಎಂದು ಚಾಡಿ ಹೇಳಿದನು.

ನಿಷ್ಕಪಟಿಯಾದ ರುಸ್ತುಂ ಕಪಟಿಯಾದ ಸೋದರನ ಮಾತುಗಳನ್ನು ಪೂರ್ಣವಾಗಿ ನಂಬಿ, ತಮ್ಮನನ್ನು ಸಮಾಧಾನಪಡಿಸುತ್ತಾ, "ನಿನ್ನೊಡನೆ

ನಾನೀಗ ಕಾಬೂಲಿಗೆ ತೆರಳಿ ಆ ಮಹಾ ದುರಹಂಕಾರಿಯ ಗರ್ವವನ್ನು ಮುರಿಯುವೆನು. ಅವನ ಕಿರೀಟವನ್ನು ನಿನ್ನ ನೆತ್ತಿಯ ಮೇಲಿರಿಸಿ ರಾಜ್ಯಾಭಿಷೇಕವನ್ನು ಮಾಡುವೆನು." ಎಂದು ಪ್ರತಿಜ್ಞೆ ಮಾಡಿ ತಮ್ಮನನ್ನು ಸಮಾಧಾನಪಡಿಸಿದನು.

ರುಸ್ತುಂ ಕೂಡಲೇ ಕಾಬೂಲಿನ ಮೇಲೆ ದಂಡೆತ್ತಿ ಹೋಗಲು ಅಣಿಯಾಗುವಂತೆ ಸೇನೆಗೆ ಆಜ್ಞಾಪಿಸಿದನು. ಆದರೆ ನರಿಯಂತೆ ಕುತಂತ್ರಗಾರನಾದ ಶುಗದನು "ಅಣ್ಣಾ, ಇನಿತೊಂದು ಸೇನೆಯೇಕೆ? ಕೆಲವು ಮಂದಿ ಕುದುರೆ ಸವಾರರಿದ್ದರೆ ಸಾಕು. ಲೋಕೈಕ ವೀರನಾದ ನಿನ್ನ ಹೆಸರನ್ನು ಕೇಳಿದ ಮಾತ್ರದಿಂದಲೇ ಕಾಬೂಲಿನ ರಾಜನು ಭಯಪೀಡಿತನಾಗಿ ನಿನ್ನ ಚರಣತಲದಲ್ಲಿ ಬೀಳುವನು." ಎಂದು ತಂತ್ರಹೂಡಿದನು. ತಮ್ಮನ ಸಲಹೆಯಂತೆ ರುಸ್ತುಂ ಅಲ್ಪ ಸೇನೆಯುನ್ನು ತೆಗೆದುಕೊಂಡು ತಮ್ಮ ಶುಗದನೊಡನೆ ಕಾಬೂಲಿಗೆ ಹೊರಟನು.

ಇಷ್ಟರಲ್ಲಿ ಕಾಬೂಲಿನ ಅರಸು ಅಳಿಯನ ಸಲಹೆಯಂತೆ ತನ್ನ ಬೇಟೆಗಾಡಿನ ಹಾದಿಯಲ್ಲಿ ಕರ್ಪಗಳನ್ನು ತೋಡಿಸಿ, ಅವುಗಳೊಳಗೆ ಭಲ್ಲೆ, ಖಡ್ಗ, ಈಟಿ ಮೊದಲಾದ ಆಯುಧಗಳನ್ನು ಮೇಲ್ಮೊಗವಾಗಿ ನೆಡಿಸಿದನು. ಕರ್ಪಗಳ ಮೇಲೆ ಕಿರುಗೊಂಬೆಗಳನ್ನು ಮುಚ್ಚಿ ಮಣ್ಣು ಹಾಸಿ ಹಸಿರು ಹುಲ್ಲನ್ನು ನೆಡಿಸಿದನು. ಅವನು ರಸ್ತುಮನಿಗೆ ಸಂಶಯತೋರದಂತೆ ಅವೆಲ್ಲವನ್ನು ಏರ್ಪಡಿಸಿದನು.

ರುಸ್ತುಮನ ಪರಿವಾರ ಕಾಬೂಲನ್ನು ಸಮೀಪಿಸಿತು. ಶುಗದನು ರುಸ್ತುಮನಿಗೆ ತಿಳಿಯದಂತೆ ಒಬ್ಬ ದೂತನನ್ನು ರಾಜ ಸನ್ನಿಧಿಗೆ ಕಳುಹಿದನು. ಶುಗದನ ಸೂಚನೆಯಂತೆ ಕಪಟಿಯಾದ ರಾಜನು ರುಸ್ತುಮನನ್ನು ಎದುರುಗೊಳ್ಳಲು ಬಂದು ರುಸ್ತುಮನನ್ನು ಕಂಡೊಡನೆಯೇ ಕುದುರೆಯ ಮೇಲಿಂದಿಳಿದು ಅವನ ಪಾದಗಳಿಗೆ ಮಣಿದನು. ಅವನು "ನಾನು ತಿಳಿಯದೆ ತಪ್ಪು ಮಾಡಿದೆ. ನನ್ನ ಅಪರಾಧವನ್ನು ಮನ್ನಿಸಿ ಅಭಯದಾನ ಮಾಡಬೇಕೆ"ಂದು ರುಸ್ತುಮನನ್ನು ಪ್ರಾರ್ಥಿಸಿಕೊಂಡನು. ರುಸ್ತುಂ ಈ ನುಡಿಗಳನ್ನು ನಂಬಿ ರಾಜನನ್ನು ಮನ್ನಿಸಿದನು. ಅವನು, ರಾಜನ ನಾಲಗೆಯಿಂದ ಮಧುರ ವಚನಗಳು ಬರುತ್ತಿದ್ದರೂ ಅವನ ಹೃದಯದಲ್ಲಿ ಹಾಲಾಹಲ ನೆಲಸಿದೆ ಎಂಬುದನ್ನು ಊಹಿಸದಾದನು.

ಆ ಮೇಲೆ ರಾಜನು ರುಸ್ತುಮನನ್ನು ಉದ್ಯಾನಕ್ಕೆ ಕರೆದುಕೊಂಡು ಹೋದನು. ಅವನು ರುಸ್ತುಮನನ್ನು ಸತ್ಕರಿಸಲೆಂದು ಅಲ್ಲಿ ಒಂದು ಭಾರಿ ಔತಣವನ್ನೇರ್ಪಡಿಸಿದನು. ಎಲ್ಲರೂ ತಿಂದು ಕುಡಿದು ನಲಿದರು. ಕೊನೆಗೆ ರಾಜನು "ಇಲ್ಲಿನ ಪರ್ವತಗಳಲ್ಲಿ ಸಿಂಹಗಳು ನೆಲಸಿವೆ. ಅರಣ್ಯವು ಜಿಂಕೆ ಮತ್ತು ಕಾಡುಗತ್ತೆಗಳಿಂದ ತುಂಬಿದೆ. ನಾವು ಮೃಗ ಬೇಟೆಯನ್ನಾಡಿ ವಿನೋದಿಸೋಣ." ಎಂದು ಅತಿಥಿಯನ್ನು ಬೇಟೆಯಾಟಕ್ಕೆ ಆಮಂತ್ರಿಸಿದನು.

ಬೇಟೆಯೆಂದರೆ ರುಸ್ತುಮನಿಗೆ ಬಹು ಮೆಚ್ಚಿನ ವಿನೋದ. ಕಾಬೂಲಿನ ರಾಜನೂ ತನ್ನ ಸೋದರನೂ ತನ್ನ ಸುತ್ತಲೂ ಹೆಣೆದ ಮೋಸದ ಬಲೆ ಅವನಿಗೆ ತಿಳಿಯದು. ಅವನು ಸಂತೋಷದಿಂದ ರಾಜನ ಸೂಚನೆಯನ್ನು ಒಪ್ಪಿದನು. ಅವನ ಪರಿವಾರದವರು ರಕ್ಷನಿಗೆ ಜೀನು ಕಡಿವಾಣಗಳನ್ನು ಹಾಕಿದರು; ಬಿಲ್ಲು ದೊಣ್ಣೆಗಳನ್ನು ಅಣಿಗೊಳಿಸಿದರು. ರುಸ್ತುಂ ರಕ್ಷನ ಬೆನ್ನ ಮೇಲೇರಿ ಬೇಟೆಗೆ ಹೊರಟನು.

ಅವರು ಕಾಡನ್ನು ಪ್ರವೇಶಿಸಿದರು. ಜಿಂಕೆಗಳನ್ನು ಅಟ್ಟುತ್ತಾ ಕಾಬೂಲಿನ ರಾಜ ಮತ್ತು ಅನುಯಾಯಿಗಳು ಹಿಂದುಳಿದರು. ಸ್ವಲ್ಪ ದೂರದಲ್ಲಿ ಶುಗದನು ಮಾತ್ರ ಅಣ್ಣನನ್ನು ಹಿಂಬಾಲಿಸುತ್ತಿದ್ದನು. ಮುಂದೆ ಸಾವು ತನ್ನನ್ನು ಕಾದಿದೆಯೆಂಬುದನ್ನು ತಿಳಿಯದೆ ರಸ್ತುಂ ಧೈರ್ಯದಿಂದ ಮುಂದುವರಿಯುತ್ತಿದ್ದನು. ಮುಂದೆ ಸಾಲಾಗಿದ್ದ ಕರ್ಪಗಳ ಕಡೆ ಅವನು ಕುದುರೆಯನ್ನು ಓಡಿಸಿದನು. ಹೊಸದಾಗಿ ಅಗೆದ ಮಣ್ಣಿನ ವಾಸನೆ ರಕ್ಷನ ಮೂಗಿನ ಸೊಳ್ಳೆಗಳಿಗೆ ಬಡಿಯಿತು. ತನ್ನ ಸ್ವಾಮಿಯನ್ನು ಹೊಂಚುಹಾಕುತ್ತಿರುವ ಮೃತ್ಯುವನ್ನು ನಿಟ್ಟಿಸುತ್ತಿದೆಯೋ ಎಂಬಂತೆ ಕುದುರೆ ತೆರೆದ ಕಣ್ಣುಗಳಿಂದ ಕರ್ಪಗಳ ಸಾಲನ್ನು ನಿಟ್ಟಿಸಿತು.

ಕುದುರೆ ನಿಂತುದನ್ನು ಕಂಡು ರುಸ್ತುಮನಿಗೆ ಸಿಟ್ಟು ಬಂತು. ಅವನು ಕುದುರೆಯನ್ನು ಮುಂದೆ ದೂಡಿದನು. ಆದರೂ ಅದು ಕದಲಲಿಲ್ಲ. ರುಸ್ತುಂ ಚಾಟಿಯನ್ನು ಮೇಲೆತ್ತಿ ಮೆಲ್ಲನೆ ಹೊಡೆದಾಗ ಚಾಟಿಯ ಪೆಟ್ಟು ರಕ್ಷನನ್ನು ಮುಂದೆ ನೆಗೆವಂತೆ ಮಾಡಿತು. ಅದರ ಮುಂಗಾಲುಗಳೆರಡು ಕರ್ಪದೊಳಗೆ ಬಿದ್ದುವು. ಒಳಗಿದ್ದ ಭಲ್ಲೆ ಖಡ್ಗಗಳು ಕುದುರೆಯ ದೇಹವನ್ನು ಸೀಳಿದುವು. ರುಸ್ತುಮನ ಎದೆಗೂ ಗಾಯವಾಯಿತು. ರಕ್ಷ ತಾನು ಬಿದ್ದ ಹಳ್ಳದಿಂದ ಬೆನ್ನ ಮೇಲೆ ಸ್ವಾಮಿಯನ್ನು ಹೊತ್ತು ಕೆಡಹದೆ ಮುಂದಕ್ಕೆ ನೆಗೆಯಿತು. ಆದರೇನು?

ಈ ಸಲ ಅದು ಎರಡನೆಯ ಕರ್ಪದೊಳಗೆ ಬಿದ್ದಿತು! ಭಲ್ಲೆ ಮತ್ತು ಖಡ್ಗಗಳು ಮರಳಿ ಅದರ ದೇಹವನ್ನು ಸೀಳಿದುವು! ಆದರೂ ಕುದುರೆ ಧೈರ್ಯಗೆಡದೆ ಮತ್ತೊಮ್ಮೆ ಮುಂದೆ ನೆಗೆಯಿತು! ಹೀಗೆ ಅದು ಏಳುತ್ತಾ ಬೀಳುತ್ತಾ ಏಳು ಕರ್ಪಗಳನ್ನು ದಾಟಿತು. ಖಡ್ಗ ಮತ್ತು ಭಲ್ಲೆಗಳ ಗಾಯಗಳಿಂದ ಅದರ ಮೈಯೆಲ್ಲಾ ಛಿದ್ರವಾಗಿ ಹೋಯಿತು. ರುಸ್ತುಮನ ಮೈಯಲ್ಲೆಲ್ಲಾ ಗಾಯಗಳಾದುವು!

ಮುಂದೆ ರಕ್ಷ ಶಕ್ತಿ ಕ್ಷಯಹೊಂದಿ ಕರ್ಪದ ದಂಡೆಯಲ್ಲಿ ನೆಲದ ಮೇಲೆ ಹೊರಳಿತು. ರಸ್ತುಮನೂ ನೆಲದ ಮೇಲೆ ಹೊರಳಿದನು. ಮೈ ಮೇಲಿನ ಗಾಯಗಳಿಂದ ರಕ್ತ ಪ್ರವಾಹ ಹೊಮ್ಮಿತು. ಅವನು ತನ್ನ ಸೋದರನೇ ದ್ರೋಹ ಬಗೆದನೆಂಬುದನ್ನು ತಿಳಿದನು. ತನಗೆ ಕೊನೆಗಾಲ ಒದಗಿತೆಂಬುದು ಅವನಿಗೆ ಅರಿವಾಯಿತು. ಅವನು ಕಪಟಿಯಾದ ಸೋದರನು ತನ್ನನ್ನು ದೂರದಿಂದ ನಿಟ್ಟಿಸುತ್ತಿರುವುದನ್ನು ಕಂಡು "ದ್ರೋಹಿಯೇ, ಅಣ್ಣನನ್ನು ಕೊಲ್ಲಬೇಕೆಂದು ನೀನು ಈ ಸಂಚು ನಡೆಸಿದೆಯಲ್ಲ!" ಎಂಬ ಉದ್ಗಾರವೆತ್ತಿದನು.

"ನಿನ್ನ ಕೊನೆಗಾಲ ಬಂತು. ನೀನು ವೀರರ ರಕ್ತವನ್ನು ಬಸಿದುದಕ್ಕೆ ಪ್ರತಿಯಾಗಿ ನೀನು ಕಾಡುಗತ್ತೆಗಳನ್ನು ಹಿಡಿಯಲು ತೋಡಿದ ಕರ್ಪಗಳಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳಬೇಕೆಂದು ದೈವ ನಿರ್ಧರಿಸಿತು. ದೈವೇಚ್ಛೆಯನ್ನು ಮೀರಲು ಯಾರಿಂದ ಶಕ್ಯವಿದೆ?" ಎಂದು ಶುಗದನು ವ್ಯಸನವನ್ನು ನಟಿಸಿದನು. ಆಗಲೇ ಕಾಬೂಲಿನ ರಾಜನೂ ಅಲ್ಲಿಗೆ ಬಂದು ರುಸ್ತುಮನಿಗೊದಗಿದ ವಿಪತ್ತನ್ನು ಕಂಡು ತಾನು ಭೀತನಾದವನಂತೆ ನಟಿಸಿ, ದುಃಖೋದ್ಗಾರಗಳನ್ನೆತ್ತಿದನು. "ನನ್ನ ಕಾಡಿನಲ್ಲಿ ಕಾಡುಗತ್ತೆಗಳನ್ನು ಹಿಡಿಯಲೆಂದು ತೋಡಿದ ಕರ್ಪದಲ್ಲಿ ಬಿದ್ದು ರುಸ್ತುಂ ವಿಪತ್ತಿಗೀಡಾಗಬೇಕಾಯಿತೇ? ಈ ದುರ್ಘಟನೆ ಹೇಗೆ ನಡೆಯಿತು? ಗಾಯಗಳಿಗೆ ಮುಲಾಮು ಲೇಪಿಸಲು ವೈದ್ಯರನ್ನು ಕರೆದು ತನ್ನಿ!" ಎಂದು ಅವನು ಕಪಟದ ಕಣ್ಣೀರನ್ನು ಸುರಿಸಿದನು. ಆದರೆ ಈಗ ಈ ರೀತಿ ಮರುಗುವವರ ನುಡಿಗಳನ್ನು ರುಸ್ತುಂ ನಂಬಲಿಲ್ಲ. ಇವರೆಲ್ಲರೂ ತನ್ನನ್ನು ಮೋಸದಿಂದ ಕೊಲ್ಲಲು ಉಜ್ಜುಗಿಸಿದ ಸಂಚುಗಾರರೆಂದು ಅವನು ತಿಳಿದುಕೊಂಡನು.

"ಯಾವ ವೈದ್ಯನು ತಾನೇ ಈ ಗಾಯಗಳನ್ನು ಕಟ್ಟಿ ಬಸಿಯುತ್ತಿರುವ

ನೇತ್ರತನ್ನು ತಡೆದುನಿಲ್ಲಿಸಬಲ್ಲ! ನನ್ನ ಸಾಹಸಮಯ ಜೀವನವು ಅನೇಕ ಚಕ್ರವರ್ತಿಗಳ ರಾಜ್ಯಭಾರವನ್ನು ದಾಟಿ ಒಂದು ಮಹಾ ಪ್ರವಾಹದಂತೆ ಮುಂದುವರಿಯಿತು" ರುಸ್ತುಮನ ತುಟಿಗಳಿಂದ ಕೊನೆಗಳಿಗೆಯಲ್ಲಿಯೂ ಧೀರ ವಚನಗಳೇ ಹೊಮ್ಮಿದುವು. "ಈಗ ಆ ಹೊನಲು ಕಡಲನ್ನು ಸೇರುವ ವೇಳೆ ಬಂದಿದೆ. ಆದರೆ ನಾನಿನ್ನೂ ಅಜೇಯ ವೀರನಾಗಿಯೇ ಉಳಿದಿರುವೆನು. ಈಗ ವಂಚನೆ ನನ್ನನ್ನು ಕೊಂದಿತು. ಆದರೆ ನನ್ನ ಆತ್ಮದ್ರೋಹಿಗಳ ಮೇಲಿನ ಮುಯ್ಯನ್ನು ತೀರಿಸಿಕೊಳ್ಳುವುದು. ನಾನೀಗ ಕೊನೆಯುಸಿರನ್ನು ಬಿಡಲಿದ್ದೇನೆ." ರುಸ್ತುಂ ಶೋಕಪೂರ್ಣ ಸ್ವರದಲ್ಲಿ ಮಾತು ಮುಂದುವರಿಸಿದನು. "ತಮ್ಮಾ ಶುಗದ, ಕೊನೆಗಳಿಗೆಯಲ್ಲಿ ನೀನು ಅಣ್ಣನಿಗೊಂದು ಸೇವೆಯನ್ನು ಸಲ್ಲಿಸು. ನನಗೆ ಬಿಲ್ಲು ಮತ್ತು ಎರಡಂಬುಗಳನ್ನು ಕೊಡು. ಸಾಯುವ ಗಳಿಗೆಯಲ್ಲಿಯೂ ನಾನು ಆಯುಧಪಾಣಿಯಾಗಿ ವೀರನಂತೆಯೇ ಸಾಯುವೆನು. ಬಿಲ್ಲಂಬುಗಳು ನನ್ನ ದೇಹವನ್ನು ಉಣ್ಣಲು ಬರುವ ನರಿ ತೋಳ ಮೊದಲಾದ ಕಾಡುಮೃಗಗಳನ್ನು ಭಯಪಡಿಸಲಿರುವ ಸಾಧನಗಳಾಗುವುವು."

ತನ್ನ ಅಣ್ಣನು ಬೇಗನೆ ಸಾಯುವನೆಂದು ಶುಗದನು ಮನಸ್ಸಿನಲ್ಲೇ ಸಂತಸಗೊಂಡು ಹೊರಗೆ ದುಃಖವನ್ನು ನಟಿಸುತ್ತ ಹೆದೆಯೇರಿದ ಬಿಲ್ಲನ್ನು ಮತ್ತು ಬಾಣಗಳನ್ನು ಅಣ್ಣ ರುಸ್ತುಮನಿಗೊಪ್ಪಿಸಿದನು.

ರುಸ್ತುಂ ಬಿಲ್ಲಿಗೆ ಅಂಬನ್ನು ಹೂಡಿ ಸರ್ವ ಶಕ್ತಿಯನ್ನು ಉಪಯೋಗಿಸಿ ಬಿಲ್ಲಿನ ಹೆದೆಯನ್ನೆಳೆಯಲು ಬಿಲ್ಲು ಅರ್ಧ ಚಂದ್ರನಂತೆ ಬಾಗಿತು. ರುಸ್ತುಂ ಬಿಲ್ಲಿಗೆ ಅಂಬನ್ನು ಹೂಡಿ ಬಿಲ್ಲನ್ನು ಬಾಗಿಸಿದುದನ್ನು ಕಂಡು ಶುಗದನ ಎದೆ ಭಯದಿಂದ ತಲ್ಲಣಗೊಂಡಿತು. ಅವನು ಬಾಣದ ಗುರಿಯಿಂದ ತಪ್ಪಿಸಿಕೊಳ್ಳಲೆಂದು ಮರೆಯಾಗಲಿರುವ ಎಡೆಯನ್ನು ಅರಸತೊಡಗಿದನು. ಕೊನೆಗೆ ನಸು ದೂರದಲ್ಲಿ ದಪ್ಪವಾಗಿ ಬೆಳೆದ ಮರವೊಂದರ ಮರೆಗೆ ಓಡಿದನು. ಆ ಮರವು ತನ್ನ ಜೀವವನ್ನುಳಿಸುವುದೆಂದು ಆ ದ್ರೋಹಿ ಭಾವಿಸಿದ್ದನು. ಆದರೆ ಅವನ ಪ್ರಯತ್ನ ನಿಷ್ಫಲವಾಯಿತು. ರುಸ್ತುಂ ಹೆದೆಯನ್ನು ಆಕರ್ಣಾಂತ ಸೆಳೆದು ಆ ಮಹಾ ವೃಕ್ಷಕ್ಕೆ ಗುರಿಯಿಟ್ಟು ಬಾಣವನ್ನು ಪ್ರಯೋಗಿಸಿದನು. ಆ ಮಹಾ ಶರ ಬಂದು ವೃಕ್ಷದ ವಕ್ಷವನ್ನು ಭೇದಿಸಿತು; ಮರದ ಹಿಂಬದಿಯಲ್ಲಿ ಅಡಗಿದ್ದ ಶುಗದನ ಎದೆಯನ್ನು ಸೀಳಿತು. ವಂಚಕನನ್ನು ಮರಕ್ಕೆ ಜೋಡಿಸಿ ಎದೆಗೆ ಮೊಳೆ ಹೊಡೆದಂತೆ ಆ ಅಂಬು ಶುಗದನ ಎದೆಯಲ್ಲಿ ನೆಲಸಿತು.

ರುಸ್ತುಂ ಆಗಸದತ್ತ ಕಣ್ಣುಹೊರಳಿಸಿ, ಕೈಗಳೆರಡನ್ನು ಮುಗಿದು ದೇವರನ್ನು ಪ್ರಾರ್ಥಿಸಿದನು. "ದಯಾಮಯ ಭಗವಂತನೇ ನನ್ನ ಕೊಲೆಗೆ ಕಾರಣನಾದ ಕೊಲೆಪಾತಕಿಯನ್ನು ನನ್ನ ಕೈಯಾರೆ ಕೊಂದು ಸೇಡು ತೀರಿಸಿ ಕೊಳ್ಳಲು ನೀನು ಈ ತೋಳುಗಳಿಗೆ ಶಕ್ತಿಯನ್ನು ದಯಪಾಲಿಸಿದೆ. ನಿನಗೆ ನನ್ನ ಅನಂತ ವಂದನೆಗಳು! ನಿನಗೆ ನಾನು ಚಿರಋಣಿ" ಎಂದು ಕೊನೆಯುಸಿರನ್ನು ಬಿಟ್ಟನು. ಆಗಲೇ ರಕ್ಷನ ಪ್ರಾಣವೂ ಅದರ ದೇಹವನ್ನು ಬಿಟ್ಟಿತು.

ವೃದ್ಧರಾದ ಜಾಲ ರುದಾಬೆಯರು ವೀರಪುತ್ರನ ಮರಣಕ್ಕಾಗಿ ಶೋಕ ಸಾಗರವನ್ನೇ ಹರಿಸಿದರು. ವೀರ ರುಸ್ತುಮನ ಶವವನ್ನು ಶಿಸ್ತಾನಕ್ಕೆ ತರಿಸಿ ಮೊಮ್ಮಗ ಸೊಹ್ರಾಬನ ಸಮಾಧಿಯ ಬಳಿಯಲ್ಲಿಯೇ ಸಮಾಧಿ ಗೈದರು. ರಕ್ಷನನ್ನು ರುಸ್ತುಮನಂತೆಯೇ ಸಮಾಧಿಸಿದರು. ಶಿಸ್ತಾನದಲ್ಲಿ ತಂದೆ ಮಕ್ಕಳ ಸಮಾಧಿಗಳು ಬಹುಕಾಲದ ವರೆಗೆ ಅವರ ವೀರಕೀರ್ತಿಯನ್ನು ಜಗತ್ತಿಗೆ ಸಾರುತ್ತ ಬಂದುವು.

